ಯನ್ನು ಬಿಟ್ಟುಬಿಡಬೇಕು. ಹೂಂ. ಹಾಗಾದರೆ ಇದು ನಿಶ್ಚಯವಷ್ಟೆ? ಹೇಳು, ಸಾಯಂಕಾಲ ಎಷ್ಟು ಜೊತ್ತಿಗೆ ಅಲ್ಲಿಗೆ ಹೋಗಬೇಕು?

ರಾಮಚಂದ್ರನು ಹೇಳಿದನು:—ಸಂಜೆ ಏಳು ಗಂಟೆಗೆ ನೀನಿಲ್ಲಿಗೆ ಬಾ. ನಾವಿಬ್ಬರೂ ಸೇರಿ ಹೋಗೋಣ. ಆ ಕಾಲದಲ್ಲಿ ಗಂಗೆಯ ದಂಡೆಯಲ್ಲಿಯೂ ಯಾರೂ ಓಡಾಡುವದಿಲ್ಲ. ಮಹಾತ್ಮನ ಹೊರತು ಗುಡಿಸಿಲಿನಲ್ಲಿಯೂ ಆಗ ಯಾರೂ ಇರಲಾರರು.

೨

ನಾನು ಅಲಹಾಬಾದಿ (ಪ್ರಯಾಗ)ನಲ್ಲಿ ವಾಸಮಾಡುತ್ತಿದ್ದೆನು. ನನ್ನ ತಂದೆಯು ಜಮೀನ್ದಾರನು. ನಾನು ಇಂಗ್ಲಿಷ್ ವಿದ್ಯೆಯನ್ನೋದಲಾರಂಭಿಸಿ ಅಲಹಾಬಾದ್ ಯೂನಿವರ್ಸಿಟಿಯಲ್ಲಿ ಎಂ. ಎಸ್‌ಸಿ. ಪರೀಕ್ಷೆಯವರೆಗೆ ಓದಿ ಆ ಮೇಲೆ ಇಂಜಿನಿಯರಿಂಗ್ ಕಾಲೇಜಿನಲ್ಲಿ ಐದು ವರ್ಷ ಕಲಿತು ಅದರಲ್ಲಿಯೂ ಪಾಸಾದೆನು. ಪಾಸಾದ ಮೇಲೆ ನನ್ನ ತಂದೆಯು ನೂರಾರು ಪ್ರಯತ್ನಗಳನ್ನು ಮಾಡಿ, ಕೆಲವು ಜನ ದೊಡ್ಡ ಮನುಷ್ಯರಿಂದ ಶಿಫಾರಸ್ ಮಾಡಿಸಿ, ಕಲ್ಕತ್ತೆಯ ದೊಡ್ಡ ಕಾರ್ಖಾನೆಯೊಂದರಲ್ಲಿ ನನಗೆ ಕೆಲಸ ಸಿಗುವಂತೆ ಮಾಡಿದನು. ನನ್ನ ಜಾಣತನದಿಂದಲೂ ಅದೃಷ್ಟದಿಂದಲೂ ನನಗೆ ಸಂಬಳವು ಕ್ರಮವಾಗಿ ಏರುತ್ತಾ ತಿಂಗಳಿಗೆ ಐನೂರು ಬರುವಂತಾಯಿತು.

ಇಂಗ್ಲಿಷ್ ವಿದ್ಯಾಭ್ಯಾಸದ ಮಹಿಮೆಯಿಂದಲೋ, ಯೂನಿವರ್ಸಿಟಿಯ ಸ್ವತಂತ್ರ ವಾಯುಸೇವನೆಯಿಂದಲೋ, ದೇಶದ ಈಗಿನ ಸ್ವತಂತ್ರ ವಾತಾವರಣ ಸಾಮರ್ಥ್ಯದಿಂದಲೋ ಕಲಿ ಕಾಲ ಪ್ರಭಾವದಿಂದಲೋ, ಯಾವುದರಿಂದಲೋ ತಿಳಿಯಲಾರೆ; ನಾನಂತೂ ಹೆಚ್ಚಿನ ನಾಸ್ತಿಕನಾಗಿದ್ದೆ. ನಾಸ್ತಿಕಮತವನ್ನು ಪ್ರಚುರಗೊಳಿಸಿದ ಪ್ರಸಿದ್ಧ ಚಾರ್ವಾಕರಿಗಿಂತಲೂ ನಾನು ಮಿಗಿಲೆನಿಸಿದ್ದೆ. ಇಂದ್ರಿಯಸಂತೃಪ್ತಿಯೇ ಮುಖ್ಯ ಧರ್ಮವೆಂದು ನನ್ನ ಅಭಿಪ್ರಾಯು.

ನನಗೆ ಬೇಗನೆ ವಿವಾಹವಾಗಬೇಕೆಂದು ನನ್ನ ತಾಯಿ ಬಯಸುತ್ತಿದ್ದಳು. ನಾನಾದರೋ ಆ ವಿವಾಹಬಂಧನದಿಂದ ಆದಷ್ಟು ದೂರವಿರಲು ತಕ್ಕ ಪ್ರಯತ್ನ ಮಾಡುತ್ತಿದ್ದೆ. ಬಹಳ ಕಡೆಗಳಲ್ಲಿ ನನ್ನ ವಿವಾಹಕ್ಕೆ ಪ್ರಯತ್ನಗಳು ಜರುಗಿದವು. ಅವೆಲ್ಲವನ್ನೂ ಏನೇನೋ ಕುಂಟ ನೆವವನ್ನು ಹೇಳಿ ನಿಲ್ಲಿಸಿ ಬಿಟ್ಟಿದ್ದೆನು. ಈಗ ನಾನು ಒಂದು ತಿಂಗಳ ರಜೆ ಪಡೆದು

ಕಲ್ಕತ್ತೆಯಿಂದ ಅಲಹಾಬಾದಿಗೆ ಬಂದಿದ್ದೆನು. ಮನೆಗೆ ಬಂದೊಡನೆ ನನ್ನ ತಾಯಿಯು ಈ ಸಾರೆ ಸ್ಪಷ್ಟವಾಗಿ ಹೇಳಿಬಿಟ್ಟಳು:—ಮಗೂ, ಮಧುರ, ಈ ಸಾರೆ ನಿನಗೆ ವಿವಾಹವಾಗಲೇ ಬೇಕು. ನಿನ್ನ ಯಾವ ಕಾರಣವೂ ಈ ಸಾರೆ ಪ್ರಯೋಜನವಾಗಲಾರದು. ಕಲ್ಕತ್ತೆಯಲ್ಲಿಯೇ ನಿನಗಿರಬೇಕೆಂದಿದ್ದರೆ ಹೆಂಡತಿಯನ್ನೂ ಕರೆದುಕೊಂಡು ಹೋಗಬಹುದು.

ತಾಯಿಯ ನಿರ್ಬಂಧದ ಮಾತನ್ನು ಕೇಳಿ:—ಇದು ತಾಯಿಯ ನಿರ್ಬಂಧ ಮಾತ್ರವಲ್ಲ; ತಂದೆಯದೂ ಸೇರಿದೆ, ಎಂದು ತಿಳಿದುಕೊಂಡೆನು. ಬಹಳ ಸಾರೆ ವಿವಾಹ ಪ್ರಯತ್ನಕ್ಕೆ ನಾನು ಅಡ್ಡಿ ಮಾಡಿದ್ದರಿಂದ ತಂದೆಯ ಮನಸ್ಸಿನಲ್ಲಿ ಅಸಂತೋಷವು ಒಡಮೂಡಿರುವದನ್ನು ಅರಿತಿದ್ದೆನು. ನಾನು ಆಲೋಚಿಸಿದೆ, ಇನ್ನು ನನ್ನ ಹಟವು ಶೋಭಿಸಲಾರದು ಎಂದು. ತಾಯಿಗೆ ಹೇಳಿದೆನು: ಅಮ್ಮಾ, ಸೊಸೆಯ ಮುಖ ನೋಡಬೇಕೆಂದು ನಿನಗಿಷ್ಟು ಪ್ರಬಲವಾದ ಆಶೆಯಿದ್ದರೆ ನನ್ನದೇನೂ ಅಡ್ಡಿಯಿಲ್ಲ

ಅನಂತರ ನನ್ನ ವಿವಾಹ ಪ್ರಯತ್ನವು ಬಹಿರಂಗವಾಗಿ ತ್ವರಿತದಿಂದ ಜರುಗಲಾರಂಭವಾಯಿತು. ತ್ವರೆಗೊಂದು ಕಾರಣವಿದ್ದಿತು. ಜೋಯಿಸರು ಹೇಳಿದ್ದರು: ವಿವಾಹ ಮಾಡುತ್ತಿದ್ದರೆ ಇದೇ ತಿಂಗಳಲ್ಲಿಯೇ ಮಾಡಬೇಕು. ಈ ತಿಂಗಳಲ್ಲಿ ತಪ್ಪಿಹೋದರೆ ಇನ್ನೊಂದು ವರ್ಷದವರೆಗೆ ವಿವಾಹ ಮುಹೂರ್ತವು ಸಿಗಲಾರದು. ಬರುವ ವರ್ಷ ಇದೇ ತಿಂಗಳಲ್ಲಿಯೇ ಮುಹೂರ್ತವಿದೆ.

ನನ್ನ ತಾಯಿಗೆ ಒಂದು ವರ್ಷದವರೆಗೆ ವಿಲಂಬಿಸಲಿಷ್ಟವಿರಲಿಲ್ಲ. ನನ್ನ ತಂದೆಯು ಜಮೀನದಾರನು; ನಾನು ತಿಂಗಳಿಗೆ ಐನೂರು ರೂಪಾಯಿ ಸಂಬಳವಿರುವ, ಸುಶಿಕ್ಷಿತ, ಸುಂದರ ತರುಣನು. ಹೀಗಿರಲು ವಿವಾಹ ಪ್ರಯತ್ನಕ್ಕೆ ಯಾವ ತರಹದ ತಡೆಯೂ ಇರಲಿಲ್ಲ. ಬಹಳ ಕಡೆಯಲ್ಲಿ ಹುಡುಕಿ, ವಿಚಾರಿಸಿ, ಪರೀಕ್ಷಿಸಿ, ಮೂರು ಉಪವರ ಕನ್ಯೆಯರನ್ನು ಆರಿಸಿ, ಅವರ ಜಾತಕಗಳನ್ನು ತರಿಸಲಾಯಿತು ಆ ಮೂವರೂ ವಿದ್ಯಾವತಿಯರಾಗಿಯೂ, ಸುಂದರಿಯರಾಗಿಯೂ, ಸುಶೀಲೆಯರಾಗಿಯೂ ಇರುತ್ತಾರೆಂದು ಪುರೋಹಿತರ ಮೂಲಕವಾಗಿ ತಿಳಿಯಿತು. ಮೂವರೊಳಗೆ ಯಾರೊಡನೆ ವಿವಾಹವಾಗಬೇಕೆಂಬ ನಿರ್ಣಯವು ಜಾತಕ ನೋಡುವ ಜೋಯಿಸರ ಕೈಯಲ್ಲಿತ್ತು. ವಿವಾಹಕ್ಕೆ ಬೇಕಾದ ಸಾಮಗ್ರಿಗಳು ತ್ವರೆಯಿಂದ ಸಜ್ಜಾಗುತ್ತಲಿದ್ದವು.

ನಾನು ಈಗಿನ ಕಾಲದ ನಾಗರಿಕ ಸ್ವತಂತ್ರ ಸ್ವಭಾವದವನೆಂದು ನಮ್ಮ ತಾಯಿಯು ಆ ಮೂವರು ಹುಡಿಗಿಯರ ಫೋಟೋಗಳನ್ನು ತರಿಸಿಕೊಟ್ಟಳು. ನಾನೆಷ್ಟು ಸಾರೆ ನೋಡಿದರೂ ಅವರಲ್ಲಿ ಯಾ..ನ್ನು ವರಿಸಬೇಕೆಂದು ನಿಶ್ಚೈಸಲಾಗಲಿಲ್ಲ. ಇಂತಹ ಸುಳಿಯಲ್ಲಿ ಸಿಕ್ಕಿಬಿದ್ದು ಆಲೋಚಿಸಿದೆನು.

ಈ ಆಲೋಚನೆಯಲ್ಲಿ ನಾನಿರುವಾಗಲೇ ನನ್ನ ಸ್ನೇಹಿತನಾದ ರಾಮಚಂದ್ರನು ಆ ತ್ರಿಕಾಲದರ್ಶಿಯಾದ ಮಹಾತ್ಮನ ವೃತ್ತಾಂತವನ್ನು ಹೇಳಿದನು. ರಾಮಚಂದ್ರನೊಡನೆ ಆ ಸಾಧುವಿನ ಹತ್ತಿರಕ್ಕೆ ಹೋಗುವದನ್ನೇ ನೋ ಪ್ರತಿಜ್ಞೆ ಮಾಡಿಯಾಯಿತು; ಆದರೆ ಆ ಮಹಾತ್ಮನ ಪಾಂಡಿತ್ಯವೂ ತ್ರಿಕಾಲದರ್ಶಿತ್ವವೂ ಸುಳ್ಳಾಗುವಂತೆ ಮಾಡಲು ಎಂತಹ ಪ್ರಶ್ನೆಯನ್ನು ಕೇಳಬೇಕು? ಆಗಲಿ. ಇದನ್ನೇ ಮುಂದಿಡುವೆನು, ಎಂದು ನಿರ್ಧರಿಸಿದೆನು.

೩

ಸಂಜೆ ಸುಮಾರು ಏಳು ಗಂಟೆಗೆ ನಾನು ರಾಮಚಂದ್ರನ ಮನೆಯನ್ನು ಸೇರಿದೆನು. ಆತನೂ ಅಲ್ಲಿಗೆ ಹೊರಡಲು ಸಿದ್ಧನಾಗಿಯೇ ಇದ್ದನು. ನನ್ನನ್ನು ಕಂಡೊಡನೆ:- ಏನೋ ಮಧುರ, ಬಂದು ಬಿಟ್ಟೆಯಾ? ಮಹಾತ್ಮರ ಮುಂದಿಡುವ ಪ್ರಶ್ನೆಯನ್ನು ಆಲೋಚನೆ ಮಾಡಿಕೊಂಡಿರುವೆಯಾ? ಎಂದನು.

ಓಹೋ! ಏನು ಹೇಳಬೇಕೆಂಬದನ್ನು ನಿರ್ಧರಿಸಿರುವೆನು; ಆದರೆ ಅದನ್ನೀಗ ಹೇಳಲಾರೆ. ಮಹಾತ್ಮನೆದುರಿನಲ್ಲಿಯೇ ಹೇಳುವೆನು.

ಆ ಮೇಲೆ ನಾವಿಬ್ಬರೂ ಗಂಗೆಯ ದಡಕ್ಕೆ ಹೋದೆವು. ಆಗ ಅಲ್ಲಿ ತುಂಬಾ ತಣ್ಣಗಿರುವ ಗಾಳಿಯು ಬೀಸುತ್ತಿದ್ದು ಕೈಕಾಲುಗಳನ್ನು ಕೊರೆಯುವಂತಿತ್ತು. ನಾನಾಗ ಮನದಲ್ಲಿ ಹೀಗೆಂದು ಯೋಚಿಸಿದೆನು:—ಈ ಸಾಧು ಇಂತಹ ಚಳಿಗಾಲದಲ್ಲಿ ಗಂಗೆಯ ದಡದಲ್ಲಿ ವಾಸಮಾಡುತ್ತಾನೆ. ಚಳಿಯಾಗದೆ ಇರುವದಕ್ಕಾಗಿ ಈತನ ಹತ್ತಿರ ಕಂಬಳಿ-ಗಿಂಬಳಿ ಏನಾದರೂ ಇದ್ದೇ ಇರಬೇಕು; ಹಾಗಿಲ್ಲದಿದ್ದರೆ ಈತನು ಚಳಿಯನ್ನು ಹೇಗೆ ಸಹಿಸುವನು? ಇಂತಹ ಪ್ರಚಂಡ ಶೀತಕಾಲದಲ್ಲಿ ಇಲ್ಲಿಯೇಕೆ ವಾಸ ಮಾಡುವನು? ಇವನಿಗೆ ಚಳಿಯೆಂಬುದೇ ಇಲ್ಲವೆ? ಅಥವಾ ಹೀಗೆ ಆಚರಿಸಿದರೆ, ಜನಗಳ ಮನಸ್ಸಿನಲ್ಲಿ ಈ ಸಾಧುವು ಚಳಿ-ಮಳೆ-ಗಾಳಿ-ಬಿಸಿಲು ಇವೆಲ್ಲವನ್ನು ಸಹಿಸಬಲ್ಲನೆಂದು ನಂಬಿಕೆಯುಂಟಾದೀತು, ಎಂದು ಇ...

ಸಾಧುವಿನ ಗುಡಿಸಿಲನ್ನು ಸಮೀಪಿಸಿ ನಾವಿಬ್ಬರೂ ಕ್ಷಣಕಾಲ ಅಲ್ಲಿಯೇ ನಿಂತೆವು ಹತ್ತಿರದಲ್ಲಿ ಯಾರೂ ಕಾಣಿಸಲಿಲ್ಲ. ಸ್ಥಳವು ಪ್ರಶಾಂತವಾಗಿದ್ದಿತು. ಹಗಲಿನಲ್ಲಿ ಅಷ್ಟೊಂದು ಜನರ ಗಲಾಟೆಯಿರುವ ಸ್ಥಳದಲ್ಲಿ ರಾತ್ರಿಯಲ್ಲೀಗ ಇಷ್ಟು ಪ್ರಶಾಂತವಾಗಿರುವದನ್ನು ಕಂಡು ಆಶ್ಚರ್ಯವಾಯಿತು; ಆದರೆ ಮರಕ್ಷಣದೊಳಗೇ ನೆನಪಾಯಿತು. ಏನೆಂದರೆ, ಸಂಜೆಯಾದ ಮೇಲೆ ಸಾಧುವು ಯಾರೊಡನೆಯೂ ಸೇರುವುದೂ ಇಲ್ಲ; ಮಾತನಾಡುವದೂ ಇಲ್ಲ ಪ್ರಾಯಶಃ ಎಲ್ಲ ಸಾಧುಗಳೂ ಈ ನಿಯಮವನ್ನು ಇಟ್ಟಿರುತ್ತಾರೆ. ಆದುದರಿಂದಲೇ ಇಲ್ಲೀಗ ಯಾರೂ ಕಾಣಿಸುವದಿಲ್ಲ.

ಸಾಧುವಿನ ಗುಡಿಸಿಲು ಸಾಧಾರಣ ಸ್ಥಿತಿಯಲ್ಲಿದ್ದಿತು. ರಾಮಚಂದ್ರನು ಬಾಗಿಲನ್ನು ಮೆಲ್ಲನೆ ತಟ್ಟಿ: ಸ್ವಾಮಿ, ನಾವಿಬ್ಬರು ದರ್ಶನಕ್ಕೆ ಬಂದಿದ್ದೇವೆ, ಎಂದನು.

ಒಡನೆಯೇ ಹೀಗೆಂದು ಉತ್ತರ ಬಂತು:—ಬನ್ನಿ; ಒಳಗೆ ಬನ್ನಿ.

ಬಾಗಿಲನ್ನು ತೆರೆದು ನಾವಿಬ್ಬರೂ ಒಳಹೊಕ್ಕೆವು. ರಾಮಚಂದ್ರನು ಭಕ್ತಿಪೂರ್ವಕವಾಗಿ ಸಾಧುವಿಗೆ ವಂದಿಸಿದನು. ನಾನಾದರೋ ರಾಮಚಂದ್ರನ ಮನಸ್ಸಂತೋಷಕ್ಕಾಗಿ ವಂದಿಸಿದಂತೆ ಮಾಡಿದೆನು. ಮಹಾತ್ಮನು ಕೈಯೆತ್ತಿ ಮಂಗಳಾಶೀರ್ವಾದವನ್ನು ಮಾಡಿ ಕುಳಿತುಕೊಳ್ಳಲು ಸೂಚಿಸಿದನು. ನಾವು ಕುಳಿತುಕೊಂಡೆವು. ನಾನು ಸುತ್ತಲೂ ದೃಷ್ಟಿಯನ್ನು ಪಸರಿಸಿ ನೋಡಿದೆನು. ಐದಾರು ಜನರು ಮಾತ್ರ ಕುಳಿತುಕೊಳ್ಳುವಷ್ಟು ವಿಸ್ತಾರವಾಗಿದ್ದಿತು ಆ ಗುಡಿಸಿಲು. ಮೇಲ್ಭಾಗವು ಎಲೆಗಳಿಂದ ಮುಚ್ಚಿದ್ದಿತು. ಪೂರ್ವದಿಕ್ಕಿನಲ್ಲೊಂದು ಕಿಡಿಕಿ ಇತ್ತು.

ಕಿಡಿಕಿಯ ಹತ್ತಿರವೇ ಸಾಧುವು ಕುಳಿತಿದ್ದನು. ಆತನ ಮುಂದುಗಡೆಯಲ್ಲೇ ಅಗ್ನಿಕುಂಡ. ಒಳಭಾಗದಲ್ಲಿ ಒಂದು ಸಣ್ಣ ಕಾಲುಮಣೆ ಇದ್ದು, ಅದರ ಮೇಲೊಂದು ಪುಸ್ತಕವಿದ್ದಿತು.

ನಾನು ಸೂಕ್ಷ್ಮ ದೃಷ್ಟಿಯಿಂದ ಸಾಧುವಿನ ದೇಹವನ್ನು ನೋಡಿದೆನು. ವಯಸ್ಸು ಅರವತ್ತು ವರ್ಷಕ್ಕಿಂತಲೂ ಹೆಚ್ಚಾಗಿದೆಯೆಂದು ತೋರಹತ್ತಿತು. ತಲೆಗೂದಲೆಲ್ಲ ಮುಪ್ಪಿನಿಂದ ಬಿಳುಪಾಗಿದ್ದವು. ಬಿಳೀ ಗಡ್ಡವು ನಾಭಿಯ ವರೆಗೂ ಜೋತಾಡುತ್ತಿತ್ತು. ಆಕೃತಿಯು ಗಂಭೀರವಾಗಿಯೂ, ಪ್ರಶಾಂತ

ಹೇಳಿದೆಯಷ್ಟೆ? ಅಂತಹ ಭವಿಷ್ಯತ್ಕಾಲದ ಸಂಗತಿಗಳನ್ನು ತಿಳಿದುಕೊಳ್ಳಲು ಮಾಡುವ ಪ್ರಯತ್ನವು ಮಾತ್ರ ನನ್ನ ಅಧೀನ. ನಿಮ್ಮಂತಹ ಸಂಸಾರಿ ಜನರ ಸ್ಥಿತಿಗಿಂತಲೂ ನನ್ನ ಸ್ಥಿತಿಯಲ್ಲಿ ಇದೇ ಸ್ವಲ್ಪ ವಿಶೇಷವೆಂಬುದು.

ಸಾಧುವು ಮಾತನಾಡುತುವಾಗಅಲ್ಲಲ್ಲಿ ಮಧ್ಯೆಮಧ್ಯೆ ಸ್ವಲ್ಪ ನಿಲ್ಲಿಸಿನಿಲ್ಲಿಸಿ ಹೇಳುತ್ತಿದ್ದನು. ನಾವಿಬ್ಬರೂ ಆತನ ಮಾತಿಗೆ ಕಿವಿಗೊಡುವೆವೋ ಇಲ್ಲವೋ ಎಂಬದನ್ನು ತಿಳಿಯುವದಕ್ಕಾಗಿಯೋ ಹಾಗೆ ಮಾಡುತ್ತಿರಬಹದು. ನಾನು ಕಡೆಗಣ್ಣಿನಿಂದ ರಾಮಚಂದ್ರನನ್ನು ನೋಡಿದೆನು. ಆತನು ಏಕಾಗ್ರತೆಯಿಂದ ಮಹಾತ್ಮನ ಮಾತನ್ನು ಕೇಳುತ್ತಿದ್ದನು ನಾನೂ ಕೂಡ ಸಾಧುವಿನ ಮಾತನ್ನು ಕೇಳುವುದರಲ್ಲಿ ಏಕಾಗ್ರತೆಯನ್ನು ನಟಿಸುತ್ತಿದ್ದೆನು.

ತಿರುಗಿ ಮಹಾತ್ಮನು ಹೇಳುತ್ತಿದ್ದನು:-ನೋಡಿರಿ, ಇದು ಬಹು ದೊಡ್ಡ ವಿಷಯು. ಆದರೂ ಕೆಲವೇ ಮಾತುಗಳಿಂದ ನನ್ನ ಅಭಿಪ್ರಾಯ ತಿಳಿಸುತ್ತೇನೆ. ಹೆಚ್ಚಿಗೆ ವಿವರಿಸಲು ನನಗೂ ಅವಕಾಶವಿಲ್ಲ; ನಿಮಗೂ ಇಲ್ಲ.

ಯಾರು ಸಂಸಾರದಲ್ಲಿ ಆಸಕ್ತರಾಗಿರುತ್ತಾರೋ ಅವರಿಗೀ ಸಂಸಾರವು ದುಃಖಸಾಗರವಾಗಿದೆ. ನಾನಾ ವಿಧವಾದ ಅಭಿಲಾಷೆಗಳಿಗೆ, ಭಾವನೆಗಳಿಗೆ, ಸ್ವಾರ್ಥಗಳಿಗೆ ಈ ಸಂಸಾರವು ಯುದ್ಧರಂಗವೇ ಆಗಿದೆ. ಎಲ್ಲರೂ ತಮ್ಮ ತಮ್ಮೊಳಗೇ ವೈರಕಟ್ಟಿಕೊಂಡು ತಮ್ಮ ತಮ್ಮ ಅಭಿಲಾಷೆಗಳನ್ನು ಪೂರೈಸಿ ಕೊಳ್ಳಲು ಹವಣಿಸುತ್ತಾರೆ. ಈ ವಸ್ತುವು ನನಗೆ ದೊರೆಯಬೇಕು, ನನ್ನ ಇಚ್ಛೆಯೇ ಪೂರ್ಣವಾಗಬೇಕು, ಎಂದು; ಆದರೆ ಅದರಲ್ಲಿ ಬೇರೆಯವರಿಗೆಷ್ಟು ತೊಂದರೆಯಾದೀತೆಂದು ಒಬ್ಬನೂ ಯೋಚಿಸುವದಿಲ್ಲ. ಆದ್ದರಿಂದಲೇ ಪರಸ್ಪರವಾಗಿ ಕಷ್ಟವುಂಟಾಗುವದು. ಕಾಮ, ಲೋಭ, ಮೋಹ, ಕ್ರೋಧ, ಮದ, ಮಾತ್ಸರ್ಯ ರೂಪವಾದ ಪರೆಯು ಎಲ್ಲರ ಕಣ್ಣುಗಳನ್ನೂ ಕಟ್ಟಿರುತ್ತದೆ. ಆದ್ದರಿಂದಲೇ ತಿಳಿದಿದ್ದರೂ ಕೂಡ ಯಾರೂ ಸ್ವಾರ್ಥವನ್ನು ದೂರ ಮಾಡಿ ಶಾಂತವಾದ ಮನಸ್ಸಿನಿಂದ ಯಾವ ವಿಷಯವನ್ನೂ ವಿವೇಚಿಸಲು ಶಕ್ತರಾಗುವದಿಲ್ಲ. ಈ ಕಾರಣದಿಂದಲೇ ಸಂಸಾರೀ ಮನುಷ್ಯನು ಭವಿಷ್ಯತ್ಕಾಲದ ನಿಜವಾದ ಸಂಗತಿಯನ್ನು ತಿಳಿಯಲಾರದವನಾಗಿರುತ್ತಾನೆ. ಸಂಸಾರೀ ಜನರೊಳಗೆ ಯಾವನಾದರೊಬ್ಬನು ವಿವೇಕಿಯಾಗಿ ಮನಸ್ಸಿನ ದುರಾಲೋಚನೆಗಳನೆಲ್ಲಾ ದೂರ ಓಡಿಸಿ, ಸ್ವಾರ್ಥವನ್ನು ಅರಿಯಲು ಪ್ರಯತ್ನಿ

ಸಿದ್ದೇ ಆದರೆ, ಆ ಮನುಷ್ಯನು ಅದನ್ನು ತಿಳಿಯುವದರಲ್ಲಿ ಯಾವ ಪ್ರತಿಬಂಧಕವೂ ಇಲ್ಲ. ಖಂಡಿತವಾಗಿಯೂ ಅಂತಹ ಮನುಷ್ಯನು ಭವಿಷ್ಯತ್ಕಾಲದ ಸಂಗತಿಯನ್ನಷ್ಟೇ ಅಲ್ಲದೆ ಸಕಲವನ್ನೂ ತಿಳಿದೇ ತಿಳಿಯುವನು. ಸಂಸಾರಿ ಜನರಿಗಿಂತಲೂ ನಮ್ಮಂತಹರ ಸ್ಥಿತಿಯು ಬಹಳ ವಿಪರೀತವಾದುದು. ಯಾರಿಗಾದರೂ ಒಳ್ಳೆಯದಾದರೂ ಕೆಟ್ಟದ್ದಾದರೂ ನಮಗೆ ಯಾವ ಪ್ರಯೋಜನವೂ ಇಲ್ಲ. ಯಾರಾದರೂ ಪ್ರಸನ್ನರಾಗಿದ್ದರೆ ನಮಗದರಿಂದ ಸುಖವೂ ಇಲ್ಲ; ಅಥವಾ ಸಿಟ್ಟಾಗಿದ್ದರೆ ನಮಗದರಿಂದ ದುಃಖವೂ ಇಲ್ಲ. ಸಂಸಾರದಲ್ಲಿ ಯಾವ ಇಚ್ಛೆಯೂ ನಮಗಿಲ್ಲ. ಯಾವುದರಲ್ಲಿಯೂ ನಾವು ಆಸಕ್ತರಾಗಿಲ್ಲ. ನಮ್ಮ ವಿವೇಕಕ್ಕೆ ಯಾವ ಕುಂದು-ಕೊರತೆಗಳೂ ಇಲ್ಲ. ಆದುದರಿಂದ ಭವಿಷ್ಯತ್ಕಾಲದ ನಿಜವಾದ ಸಂಗತಿಗಳನ್ನರಿಯುವದು ನಮಗೇನೂ ಕಷ್ಟವಿಲ್ಲ. ನಮಗೂ ನಿಮಗೂ ಏನಾದರೂ ವ್ಯತ್ಯಾಸವಿರುವದಾದರೆ ಅದೇ ಇದು. ಇರಲಿ. ಯಾವ ಭವಿಷ್ಯತ್ಕಾಲದ ಸಂಗತಿಯನ್ನರಿಯಬೇಕೆಂದಿರುವೆ ನೀನು? ನಾನದನ್ನು ಹೇಳಲು ಶಕ್ತನಾದರೆ ನಿಶ್ಚಯವಾಗಿಯೂ ಹೇಳುವೆನು. ಕೇಳು, ಹೀಗೆ ಹೇಳಿ ಸಾಧುವು ಸುಮ್ಮನಾದನು.

ರಾಮಚಂದ್ರನು ಸಾಭಿಪ್ರಾಯದಿಂದ ನನ್ನ ಕಡೆಗೆ ನೋಡಿದನು. ನಾನು ಆಲೋಚಿಸಿದೆ:- ನಾನು ಕೇಳುವ ಪ್ರಶ್ನೆ ಯಾವ ರೀತಿಯಾಗಿ ಸಾಧು ವಿನೆದುರಿಗಿಡಲಿ? ಹೇಗೆ ಪ್ರಶ್ನೆ ಮಾಡಿದರೆ ಮಹಾತ್ಮನಿಗುತ್ತರ ಹೇಳಲು ಕಷ್ಟವಾದೀತು? ಮತ್ತು ಅವನ ವಾಸ್ತವಿಕವಾದ ಪಾಂಡಿತ್ಯ ಹೊರಬಿದ್ದೀತು?

ಮಹಾತ್ಮನ ಮೇಲಿನ ಭಾಷಣದಿಂದ ಆತನು ವಿಚಾರಶೀಲನೆಂದೂ, ವಿದ್ವಾಂಸನೆಂದೂ ತಿಳಿಯಿತು ಆತನು ಹೇಳಿದುದು ಯುಕ್ತವಾದುದೆಂದೂ ತೋರಿತು. ಮೆಲ್ಲಮೆಲ್ಲನೆ ನನಗೂ ಕೂಡ ಆ ಮಹಾತ್ಮನಲ್ಲಿ ವಿಶ್ವಾಸವುಂಟಾಗಲಾರಂಭಿಸಿತು. ಆ ಮಹಾತ್ಮನು ಮೋಸಗಾರನೆಂಬುದನ್ನು ತೋರಿಸುವದಕ್ಕಾಗಿಯೂ, ಆತನು ಸುಳ್ಳುಗಾರನೆಂದು ಸಿದ್ಧಪಡಿಸುವವಕ್ಕಾಗಿಯೂ, ಈ ಕಾಲದಲ್ಲಿ ಸರಿಯಾದ ಮಹಾತ್ಮರು ದೊರೆಯುವುದಸಾಧ್ಯವೆಂದು ರಾಮಚಂದ್ರನ ಮನಸ್ಸಿನಲ್ಲಿ ನಾಟುವಂತೆ ಮಾಡುವುದಕ್ಕಾಗಿಯೂ ನಾನಲ್ಲಿಗೆ ಹೋಗಿದ್ದುದು. ಸಾಧುವಿನ ಭಾಷಣವನ್ನು ಕೇಳಿದ ಮಾತ್ರದಿಂದಲೇ ನನಗಾತನಲ್ಲಿ ನಂಬಿಕೆಯುಂಟಾಗುವುದು ನನ್ನ ಮೊದಲಿನ ಎಲ್ಲ ಇಚ್ಛೆಗಳಿಗೂ

ಪ್ರತಿಕೂಲವಾಗಿದ್ದಿತು. ನಾನೀ ರೀತಿಯಾಗಿ ದುನದೊಳಗೆ ವಿಚಾರವಾಡುತ್ತಿರುವದನ್ನು ಕಂಡು ಮಹಾತ್ಮನು ಹೇಳಿದನು:—ಮಗೂ, ನೋಡು. ನಾನಿಲ್ಲಿಗೆ ಬಂದು ಒಂದು ತಿಂಗಳಾಯಿತು. ಇಷ್ಟರೊಳಗೆ ಸಾವಿರಾರು ಜನರಿಲ್ಲಿಗೆ ಬಂದಿರಬಹುದು. ಅವರಲ್ಲಿ ಒಬ್ಬೊಬ್ಬನೂ ಬೇರೆ ಬೇರೆ ರೀತಿಯ ಅಭಿಲಾಷೆಯುಳ್ಳವನಾಗಿದ್ದನು. ಕೆಲವರು ಕಷ್ಟಕ್ಕೆ ಸಿಲುಕಿ, ಬಸವಳಿದು, ಬೆಂಡಾಗಿರುವ ಹೃದಯವನ್ನು ಸಮಾಧಾನಪಡಿಸಿಕೊಳ್ಳಲು, ಕೆಲವರು ಕೇವಲ ನನ್ನನ್ನು ಪರೀಕ್ಷಿಸುವದಕ್ಕಾಗಿಯೂ ಬಂದಿದ್ದರು. ಅವರೊಳಗೆ ಯಾರ ಮೇಲೂ ಸಿಟ್ಟು ಮಾಡಲು, ಸಂತೋಷ ತೋರಿಸಲು ಕಾರಣವ್ಯಾವುದೂ ನನ್ನ ಹತ್ತಿರವಿರಲಿಲ್ಲ. ಹುಟ್ಟಿದಂದಿನಿಂದ ಅವರ ಸ್ಥಿತಿ-ಗತಿಗಳನ್ನು ಕ್ಷಣಕಾಲದ ಸಹವಾಸದಿಂದ ತಿದ್ದಲು ನಾನು ಸಮರ್ಥನಾಗಲಾರೆನು. ಯಾರು ಯಾರು ಯಾವ ಯಾವ ರೀತಿಯ ಅಭಿಪ್ರಾಯದಿಂದ ಬಂದಿದ್ದರೋ, ಅವರವರನ್ನು ಅದೇ ರೀತಿಯಿಂದಲೇ ನೋಡುತ್ತಿದ್ದೆನು. ವಿಚಾರ ಮಾಡಿ, ಮನಸ್ಸಿನಲ್ಲಿ ಏನು ತೋರಿತೋ ಅದನ್ನೇ ಜನರಿಗೆ ಹೇಳುತ್ತಿದ್ದೆನು. ಕೆಲವರು ನಾನು ಸರಿಯಾಗಿ ತಿಳಿದವನು ಎಂದು ತಿಳಿದಿರಬಹುದು. ಕೆಲವರು ನಾನು ಮೋಸಗಾರನು ಎಂದು ತಿಳಿದಿರಬಹುದು. ನನ್ನ ದೃಷ್ಟಿಯಲ್ಲಿ ಅವರಿಬ್ಬರೂ ಸಮಾನರೇ ಇರುವರು. ಈಗ ನೀನೂ ಕೂಡ ನನ್ನನ್ನು ಪರೀಕ್ಷಿಸುವದಕ್ಕಾಗಿಯೇ ಬಂದಿರುವುದಾದರೆ, ಅದನ್ನು ಸ್ಪಷ್ಟವಾಗಿ ಹೇಳಿಬಿಡು. ನನಗದರಲ್ಲಿ ಸ್ವಲ್ಪವೂ ಸಿಟ್ಟಿಲ್ಲ; ಮತ್ತು ನಿನಗೆ ನಿಜವಾದ ವಿಷಯದಲ್ಲಿ ಆಸಕ್ತಿಯಿರುವುದನ್ನು ನೋಡಿ ನಾನಿನ್ನೂ ಪ್ರಸನ್ನನಾಗುವೆನು. ನಿನ್ನ ಪ್ರಶ್ನೆಗಳಿಗೆ ದೊರೆತ ಉತ್ತರವನ್ನು ಹೇಳುತ್ತೇನೆ.

ಸಾಧುವಿನ ಈ ನಿಜವಾದ ಮಾತುಗಳು ನನ್ನ ಹೃದಯದೊಳಗೆ ಪ್ರವೇಶಿಸುತ್ತಿದ್ದವು. ಮಹಾತ್ಮನು ಅಭಯವನ್ನು ಕೊಟ್ಟಿರುವನು ಯಾರು ಯಾವ ಸ್ಥಿತಿಯಲ್ಲಿದ್ದರೂ ಕೂಡ ಪ್ರಶ್ನೆಗಳಿಗುತ್ತರವು ಸಿಗದೆ ಇರಲಾರದೆಂದು. ಹೀಗಿಷ್ಟು ಸ್ಪಷ್ಟವಾಗಿ ಹೇಳುತ್ತಿದ್ದರೂ ನನ್ನ ನೀನು ಮನಸ್ಸಿನಲ್ಲಿರುವದನ್ನು ಗುಟ್ಟಾಗಿಡುವದೂ, ಸುಳ್ಳಾಡುವದೂ ಸರಿಯಾದುದಲ್ಲ.

ನಾನು ನಮ್ರತೆಯಿಂದ ಹೇಳಿದೆನು:—ನಾನೊಂದು ಸಂಗತಿಯನ್ನು ತಿಳಿಯಬೇಕೆಂದಿದ್ದೇನೆ. ಅದಕ್ಕೂ ನನ್ನ ಮುಂದಿನ ಜೀವನಕ್ಕೂ ಹೆಚ್ಚಾದ ಸಂಬಂಧವಿದೆ. ಪೂಜ್ಯರು ತಮ್ಮ ಸ್ಥಿರವಾದ ವಿಚಾರ ದೃಷ್ಟಿಯಿಂದ ಆ

ಷಯುದಲ್ಲಿ ನಿಜವಾದ ಉತ್ತರವನ್ನು ದಯಪಾಲಿಸಿದರೆ ನಾನು ತುಂಬಾ ೃತಜ್ಞನಾಗುತ್ತೇನೆ. ಇದನ್ನೂ ಕೂಡ ನಾನು ಮುಚ್ಚಿಡುವುದಿಲ್ಲ. ಪೂಜ್ಯರು ನ್ನ ಈ ಪ್ರಶ್ನೆಗಳಿಗುತ್ತರವನ್ನು ಕೊಡಲು ಶಕ್ತರಾಗುತ್ತಾರೋ ಇಲ್ಲವೋ ಂಬುದನ್ನೂ ನಾನು ಪರೀಕ್ಷಿಸಬೇಕೆಂದಿರುವೆನು. ಪರ್ಯವಸಾನದಲ್ಲಿ ೂಜ್ಯರು ನುಡಿದಂತೆಯೇ ಫಲವಾದರೆ,: ಮಹಾತ್ಮರು ತ್ರಿಕಾಲದರ್ಶಿಗಳು ಂಬ ವಿಷಯುದಲ್ಲಿ ನನಗೆ ನಂಬಿಕೆಯುಂಟಾಗುವುದು. ನನ್ನ ಮನಸ್ಸಿನಲ್ಲಿ ುವುದನ್ನು ಸ್ಪಷ್ಟವಾಗಿ ಹೇಳಿಬಿಟ್ಟಿರುವೆನು. ಈ ರೀತಿ ನಾನು ಹೇಳುತ್ತಿರು ಾಗ ತಿಳಿಯದೆ ಏನಾದರೂ ಧಾರ್ಷ್ಟ್ಯವನ್ನು ತೋರಿಸಿದ್ದರೆ ಪೂಜ್ಯರದನ್ನು ಕ್ಷಮಿಸಬೇಕು

ಮಹಾತ್ಮನು ಪ್ರಸನ್ನನಾ. ನಾನು ಅಲ್ಲಿಗೆ ಹೋದ ಮೊದಲ್ಗೊಂಡು ಇಷ್ಟು ಹೊತ್ತಿನವರೆಗೆ ನಿರ್ವಿಕಾರವಾಗಿದ್ದ ಮಹಾತ್ಮನ ಮುಖದಲ್ಲಿ ನಗು ವುಂಟಾದುದು ಇದೇ ಮೊದಲನೆಯದು. ಮಹಾತ್ಮನು ಹೇಳಿದನು:-ಮಗೂ, ಕಪಟವಿಲ್ಲದೆ ಮನಸ್ಸಿನ ರುವದೆಲ್ಲವನ್ನೂ ನೀನು ಹೇಳಿದುದಕ್ಕಾಗಿ ಸಂತೋಷವಾಗಿದೆ. ಮನಸ್ಸಿನಲ್ಲಿರುವ ವಾಸ್ತವಿಕವಾದ ಸಂಗತಿಯನ್ನು ನೀನು ಮುಚ್ಚಿಡಲಿಲ್ಲ. ಸಂತೋಷ. ನನ್ನ ಏಕಾಂತ ಜೀವನದಲ್ಲಿ ಮನನ ನಿದಿಧ್ಯಾಸ ಗಳಿಂದ ಬ್ರಹ್ಮಸೃಷ್ಟಿಯ ಎಷ್ಟೋ ರಹಸ್ಯಗಳನ್ನು ತಿಳಿಯಬಲ್ಲೆನು. ಆದರೂ ಎಲ್ಲದರ ಮೇಲೂ ಇರುವ ಲೀಲಾಮಯವಾದ ಪರಮಾತ್ಮನ ಅದ್ಭುತವಾದ ಲೀಲೆಗಳಲ್ಲಿ ಮಾತ್ರ ನೂರರಲ್ಲೊಂದಂಶವನ್ನು ಕೂಡ ತಿಳಿಯಲಾರೆನು. ದೊಡ್ಡ ದೊಡ್ಡ ಸಿದ್ಧ ಪುರುಷರು ತಮ್ಮ ಇಚ್ಛಾಶಕ್ತಿಯ ಮಹಿಮೆಯಿಂದ ಮಾಡತಕ್ಕ ಕೆಲಸಗಳಲ್ಲಿ ಸ್ವಲ್ಪ ಮಾತ್ರ ನಾನು ತಿಳಿದಿತಬಹುದು ಇಂತಹ ಎಲ್ಲಿಯೋ ಸ್ವಲ್ಪ ಮಟ್ಟಿನ ಶಕ್ತಿಯಿದೆ ಎಂದು ನಾನೆಂದಿಗೂ ಸಿದ್ಧನೆನಿಸಲಾ ರೆನು. ನಿನ್ನೆದುರಿನಲ್ಲಿ ಪರೀಕ್ಷಿಸಿಕೊಳ್ಳುವದಕ್ಕೂ ಕೂಡ ನನಗಧಿಕಾರವಿಲ್ಲ. ಬ್ರಹ್ಮನು ಮನುಷ್ಯರಿಗೆ ನೂರು ವರ್ಷಗಳ ವರೆಗಿನ ಆಯುಷ್ಯವನ್ನು ಮಾತ್ರ ಕೊಟ್ಟಿರುವನು. ಅಷ್ಟು ಸ್ವಲ್ಪವಿರುವ ಆಯುಸ್ಸಿನಲ್ಲಿ ಮನುಷ್ಯನು ಪ್ರಕೃತಿಯ ರಹಸ್ಯವನ್ನು ತಿಳಿಯಲೆತ್ನಿಸಿದರೆ ಸ್ವಲ್ಪವಾದರೂ ತಿಳಿಯದಿರಲಾರದು. ನಿನ್ನ ಎರಡು ಪ್ರಶ್ನೆಗಳಿಗೆ ನಾನು ಉತ್ತರವನ್ನು ಕೊಡುತ್ತೇನೆ. ನನ್ನ ಈ ಉತ್ತರ ದಿಂದ ನಿನ್ನ ಭವಿಷ್ಯತ್ಕಾಲದ ಸಂಗತಿ ಸ್ವಲ್ಪವಾದರೂ ತಿಳಿದೀತು.

ನಾನು ಮಹಾತ್ಮನಿಗೆ ನಮಸ್ಕರಿಸಿ, ಜೇಬಿನಿಂದ ಮೂರು ಫೋಟೋಗಳನ್ನು ಹೊರತೆಗೆದು, ಸಾಧುವಿನೆದುರನಿಟ್ಟು ಹೇಳಿದೆನು: ಪೂಜ್ಯರೇ, ನೋಡೋಣಾಗಲಿ. ತಾವೆನಗೆ ತಂದೆಯ ಸಮಾನರು. ಆದ್ದರಿಂದ ತಮ್ಮೆದುರಿನಲ್ಲಿ ನಾನು ನಾಚುವದೂ, ಯಾವುದೊಂದು ಸಂಗತಿಯನ್ನು ಮುಚ್ಚಿಡುವದೂ ಉಚಿತವಲ್ಲ. ಶೀಘ್ರದಲ್ಲಿಯೇ ಇದೇ ತಿಂಗಳಲ್ಲಿ ನನಗೆ ವಿವಾಹವಾಗುವದು. ಮೂವರು ಹುಡುಗಿಯರನ್ನು ನನಗಾಗಿ ಆರಿಸಿರುವರು. ಈ ಮೂವರಲ್ಲಿ ಯಾರು ನನ್ನವಳೆಂಬ ನಿಶ್ಚಯವನ್ನು ಜೊಯಿಸರಿನ್ನೂ ಹೇಳಿಲ್ಲ. ನಾಳೆ ಬೆಳಿಗ್ಗೆ ಅದನ್ನವರು ಹೇಳುವರು. ಈಗ ಪೂಜ್ಯರೇ ಮೂರು ಫೋಟೋಗಳನ್ನು ನೋಡಿ ಇವರಲ್ಲಿ ಯಾವ ಹುಡುಗಿಯು ನನಗೆ ನಿಶ್ಚಯಿಸಲ್ಪಡುವಳು? ಎಂಬುದನ್ನು ಹೇಳೋಣಾಗಬೇಕು.

ಗುಡಿಸಿಲಿನ ಒಂದು ಪಕ್ಕದಲ್ಲಿ ಚಿಕ್ಕ ದೀಪವೊಂದು ಉರಿಯುತ್ತಲಿತ್ತು ಅದರ ಬೆಳಕು ಗುಡಿಸಿಲಿನ ಕತ್ತಲೆಯನ್ನು ಮಾತ್ರ ಹೋಗಲಾಡಿಸುತ್ತಿತ್ತು. ನಾನಾ ದೀಪವನ್ನು ತಂದು ಮಹಾತ್ಮನೆದುರಿಗಿಟ್ಟೆನು. ಮಹಾತ್ಮನು ಆ ಫೋಟೋಗಳನ್ನು ಜಾಗರೂಕತೆಯಿಂದ ಪರೀಕ್ಷಿಸಿದನು. ನಾನು ಮೊದಲು ಯೋಚಿಸಿದ್ದೆನು:—ಮಹಾತ್ಮನಿಗೆ ನಮ್ಮಂತೆ ನೋಡಲು ಕನ್ನಡಕವು ಬೇಕಾದೀತು ಎಂದು; ಆದರೆ ನನ್ನೀ ಯೋಜನೆಯು ವ್ಯರ್ಥವಾಯಿತು. ಅಂತಹ ಸಾಮಾನ್ಯವಾದ ಮಂದ ಪ್ರಕಾಶದಲ್ಲಿಯೂ ಕೂಡ ಮಹಾತ್ಮನ ಕಣ್ಣುಗಳು ಆ ಫೋಟೋಗಳನ್ನೂ, ಅದರ ಕೆಳಭಾಗದಲ್ಲಿ ಸೂಕ್ಷ್ಮವಾದ ಅಕ್ಷರಗಳಿಂದ ಬರೆದಿರುವ ಹುಡುಗಿಯರ ಹೆಸರುಗಳನ್ನೂ ಸ್ಪಷ್ಟವಾಗಿ ತಿಳಿಯುವದರಲ್ಲಿ ಸಮರ್ಥವಾಗಿದ್ದವು. ಕ್ಷಣಕಾಲ ನೋಡಿ ಮಹಾತ್ಮನು ಆ ಫೋಟೋಗಳನ್ನು ಹಿಂದಕ್ಕೆ ಕೊಟ್ಟು ಹೇಳಿದನು:—ಫೋಟೋಗಳನ್ನು ನೋಡಿಯಾಯಿತು. ತಿಳಿಯಬೇಕಾದುದನ್ನು ತಿಳಿದೂ ಆಯಿತು ದೀಪವನ್ನು ಮೊದಲಿದ್ದಲ್ಲಿಡು.

ನಾನು ದೀಪವನ್ನು ಮೊದಲಿದ್ದಲ್ಲಿಟ್ಟು ಹಿಂದಿರುಗಿ ಬಂದು ಕುಳಿತೆನು. ಮಹಾತ್ಮನು ಹೇಳಿದನು:-ಮಗೂ, ಮನಸ್ಸುಗೊಟ್ಟು ಕೇಳು. ಈ ಮೂವರಲ್ಲಿ ಯಾರೊಡನೆಯೂ ಕೂಡ ನಿನಗೆ ವಿವಾಹವಾಗುವದಿಲ್ಲ ತಿಳಿಯಿತೆ? ಇದನ್ನೇ ಅಲ್ಲವೆ ನೀನು ಕೇಳಿದುದು? ಅಥವಾ ಬೇರೆ ಏನಾದರೂ ಕೇಳಿದ್ದೆಯಾ?

ಇದನ್ನೇ ನಾನು ಕೇಳಿದುದು. ನಾನು ಆ ರೀತಿಯಾಗಿ ಪ್ರಶ್ನೆ ಮಾಡಿದುದರ ಗೂಢಾಭಿಪ್ರಾಯವನ್ನು ರಾಮಚಂದ್ರನು ತಿಳಿದನೋ ಇಲ್ಲವೋ ಗೊತ್ತಿಲ್ಲ. ಬುದ್ಧಿಪೂರ್ವಕವಾಗಿಯೇ ನಾನು ಹಾಗೆ ಪ್ರಶ್ನೆ ಮಾಡಿದ್ದೆನು.

ಈ ಮೂವರೊಳಗೆ ಯಾರನ್ನು ವಿವಾಹವಾದರೆ ನನಗೆ ಶುಭವಾಗುವದು ಎಂದು ನಾನು ಪ್ರಶ್ನೆ ಮಾಡಿದ್ದರೆ, ಈಕೆಯೊಡನೆ ವಿವಾಹವಾಗುವದು ಶುಭಕರ, ಎಂದು ಸುಲಭವಾಗಿ ಮಹಾತ್ಮನು ಏನೋ ಒಂದುತ್ತರ ಹೇಳಿಬಿಡುತ್ತಿದ್ದನು. ಹಾಗೆ ನಾನು ಕೇಳದೆ ಯಾವ ಹುಡುಗಿಯೊಡನೆ ವಿವಾಹವಾಗುವದು? ಎಂದು ಪ್ರಶ್ನೆ ಮಾಡಿದ್ದೆನು. ಈ ಪ್ರಶ್ನೆಯು ನಿಜವಾಗಿಯೂ ಕಠಿಣವಾದುದು. ಇದರ ಉತ್ತರವನ್ನು ಕೇಳಿದ ಮೇಲೆ ಮಹಾತ್ಮನು ಸುಳ್ಳು ಹೇಳುವವನೆಂಬುದನ್ನು ಹೇಳಲು ಕಷ್ಟವಿರಲಿಲ್ಲ. ಮಹಾತ್ಮನು ತನ್ನ ಬುದ್ಧಿಯೆಂಬ ಒರೆಗಲ್ಲಿನಲ್ಲಿ ಪರೀಕ್ಷಿಸಿ, ಯಾವ ಹುಡುಗಿಯೊಡನೆ ವಿವಾಹವಾಗುತ್ತದೆಯೆಂದು ಹೇಳುತ್ತಾನೋ ಆ ಹುಡುಗಿಯನ್ನು ವಿವಾಹಮಾಡಿಕೊಳ್ಳದೇ ಇದ್ದು, ಮಹಾತ್ಮನ ಆ ಮಾತನ್ನು ನಾನು ಸುಳ್ಳು ಮಾಡಬಹುದಾಗಿದ್ದಿತು. ಹೀಗೆಲ್ಲಾ ಆದ ಮೇಲೆ ರಾಮಚಂದ್ರನೂ ಕೂಡ ಮಹಾತ್ಮನಲ್ಲಿ ನಂಬಿಕೆಯನ್ನು ಬಿಟ್ಟುಬಿಡುತ್ತಿದ್ದನು. ಅದಕ್ಕೋಸ್ಕರವೇ ನಾನಲ್ಲಿಗೆ ಹೋಗಿದ್ದುದು. ಸರಳ ಪ್ರಕೃತಿಯ ರಾಮಚಂದ್ರನು ಇಂತಹ ಮೋಸಗಾರರನ್ನು ನಂಬುತ್ತಿದ್ದುದನ್ನು ತಪ್ಪಿಸಬೇಕಾಗಿದ್ದಿತು.

ನನ್ನ ಪ್ರಶ್ನೆಯು ನಿಜವಾಗಿಯೂ ಮಹಾತ್ಮನನ್ನು ಗಾಬರಿಯಲ್ಲಿ ಸಿಲುಕಿಸಿತು. ಆತನು ಸ್ವಲ್ಪ ಹೊತ್ತಿನವರೆಗೆ ಕಣ್ಣು ಮುಚ್ಚಿಕೊಂಡಿದ್ದನು. ಆ ಮೇಲೆ ಕಣ್ಣು ತೆರೆದು ಮೆಲ್ಲ ಮೆಲ್ಲನೆ ಹೇಳಿದನು: ಮಗೂ, ನೀನೀಗ ತೋರಿಸಿದ ಮೂರು ಚಿತ್ರಗಳಲ್ಲಿರುವ ಮೂವರು ಹುಡುಗಿಯರಲ್ಲಿ ಯಾರೊಡನೆಯೂ ಕೂಡ ನಿನಗೆ ವಿವಾಹವಾಗುವದಿಲ್ಲವೆಂದು ಬ್ರಹ್ಮಲಿಖಿತವಿದೆ.

ಉತ್ತರವನ್ನು ಕೇಳಿ ನಾನು ಗಾಬರಿಯಾದೆನು. ಇಂತಹ ಉತ್ತರವು ಬರುವುದೆಂದು ನಾನು ಊಹಿಸಿಯೇ ಇರಲಿಲ್ಲ. ಮನಸ್ಸನ್ನು ಬಿಗಿಹಿಡಿದು, ಮೆಲ್ಲನೆ ನಗುತ್ತಾ ಹೇಳಿದೆನು:-ಸ್ವಾಮಿ, ತಮ್ಮ ಮಾತಿನ ಅಭಿಪ್ರಾಯವು ನನಗೆ ಹೊಳೆಯಲಿಲ್ಲ. ಈ ತಿಂಗಳೊಳಗೇ ನನಗೆ ವಿವಾಹವಾಗುವುದೆಂದು ನಾನು ಮೊದಲು ತಮ್ಮ ಹತ್ತಿರ ತಿಳಿಸಿದುದು ನೆನಪಿರಬಹುದು. ಅದಕ್ಕೆ ಬೇಕಾದ ಸಾಮಗ್ರಿಗಳೆಲ್ಲಾ ಸಿದ್ಧವಾಗಿವೆ.

ಮಹಾತ್ಮನು ಹೇಳಿದನು:— ಮಗೂ, ಸಂಶಯಕ್ಕೆ ಆಸ್ಪದವೇ ಇರದಂತೆ ನಾನು ಹೇಳಿಬಿಟ್ಟಿರುವೆನು. ಕೇಳು, ಇನ್ನೂ ಸ್ಪಷ್ಟವಾಗಿ ಹೇಳಿಬಿಡುತ್ತೇನೆ. ಇನ್ನೊಂದು ವರ್ಷದವರೆಗೆ ನಿನಗೆ ವಿವಾಹವೇ ಆಗುವುದಿಲ್ಲ. ನೀನು ತೋರಿಸಿದ ಚಿತ್ರಗಳಲ್ಲಿರುವ ಯಾವ ಹುಡುಗಿಯೂ ನಿನಗೆ ಹೆಂಡತಿಯಾಗುವದಿಲ್ಲ. ಇದು ಖಂಡಿತ. ಇದಕ್ಕೆ ವಿರೋಧವಾಗಿ ಎಷ್ಟೇ ಪ್ರಯತ್ನಪಟ್ಟರೂ ಕೂಡ ಅದು ಸಫಲವಾಗುವುದಿಲ್ಲ. ತಿಳಿಯಿತೇ?

ಯಾವುದಾದರೂ ದೊಡ್ಡ ಕಲ್ಲೊಂದು ಆಕಸ್ಮಾತ್ತಾಗಿ ತಲೆಯ ಮೇಲೆ ಬಿದ್ದರೆ ಹೇಗೆ ಆದೀತೋ, ಅದಕ್ಕಿಂತಲೂ ಹೆಚ್ಚಾದ ಆಶ್ಚರ್ಯವುಂಟಾಯಿತು ಆ ಮಹಾತ್ಮನ ಉತ್ತರವನ್ನು ಕೇಳಿದೊಡನೆ! ನಾನು ಗಾಬರಿಯಿಂದ ಕೇಳಿದೆನು:— ಏನು, ನನಗೆ ಈ ತಿಂಗಳೊಳಗೆ ವಿವಾಹವಾಗಲಾರದೇ? ಪೂಜ್ಯರು ಈ ಸಂಗತಿಯನ್ನು ಚೆನ್ನಾಗಿ ವಿಚಾರ ಮಾಡಿ ಹೇಳೋಣಾಯಿತೇ? ಮನೆಯವರೆಲ್ಲರೂ ವಿವಾಹ ಸಾಮಗ್ರಿಗಳನ್ನು ಸಿದ್ಧಪಡಿಸುವ ಸಡಗರದಲ್ಲಿದ್ದಾರೆ; ತಹತಹಪಡುತ್ತಿದ್ದಾರೆ. ಅದೆಲ್ಲವೂ ಒಂದೇ ಬಾರಿಗೆ ನಿಷ್ಫಲವಾಗುವದೇ?

ಮಹಾತ್ಮನು ಗಂಭೀರಧ್ವನಿಯಿಂದ ಹೇಳಿದನು:— ಹೌದು, ಎಲ್ಲವೂ ಒಂದೇ ಬಾರಿಗೆ ನಿಷ್ಫಲವಾಗುವದು. ನಾನು ಚೆನ್ನಾಗಿ ನೋಡಿಯೇ ಅದನ್ನು ಹೇಳುತ್ತಿದ್ದೇನೆ. ನಿಶ್ಚಯವಿದು.

ರಾಮಚಂದ್ರನೆದುರಿಗೆ ನಾನು ಪ್ರತಿಜ್ಞೆ ಮಾಡಿದ್ದೆನು:— ಮಹಾತ್ಮನೆದುರಿನಲ್ಲಿ ಅಗೌರವವಾಗಿ ವರ್ತಿಸುವದಿಲ್ಲವೆಂದು. ಆದ್ದರಿಂದಲೇ ಕಷ್ಟದಿಂದ ಮನಸ್ಸನ್ನು ಬಿಗಿಹಿಡಿದು, ತಾನಾಗಿಯೇ ಹೊರಡುತ್ತಿದ್ದ ಅಟ್ಟಹಾಸವನ್ನು ನಿಲ್ಲಿಸಿಕೊಂಡಿದ್ದನು. ನಾನು ಮನಸ್ಸಿನಲ್ಲಿ ಯೋಚಿಸಿದೆನು:— ಖಂಡಿತವಾಗಿಯೂ ಮಹಾತ್ಮನು ತಪ್ಪಿ ಹೇಳಿದನು. ಈ ತಿಂಗಳೊಳಗೆ ನನಗೆ ವಿವಾಹವಾಗದೆ ಇದ್ದೀತೇ? ಏಕಾಗುವುದಿಲ್ಲ? ಸಾಮಗ್ರಿಯೆಲ್ಲ ಸಿದ್ಧವಾಗಿದೆ. ಹುಡುಗಿಯನ್ನು ಆರಿಸಿಯಾಗಿದೆ. ಮುಹೂರ್ತವನ್ನೂ ನಿಶ್ಚಯಿಸಿದಂತೆಯೇ ಇದೆ. ಹೀಗಿರಲು ವಿವಾಹವಾಗಲು ತಡೆಯೇನಿದೆ? ಈ ರೀತಿ ತಲೆಗಾಲಿಲ್ಲದ ಮಾತನ್ನು ಮಹಾತ್ಮನು ಹೇಗೆ ಹೇಳಿದನು? ಖಂಡಿತವಾಗಿಯೂ ಮಹಾತ್ಮನ ಈ ಮಾತು ಸುಳ್ಳು. ನಾನೂ ಕೂಡ ಮಹಾತ್ಮನ ಈ ಮಾತನ್ನು ಸುಳ್ಳು ಮಾಡುವೆನು.

ಹೊರಗೆ ಮಾತ್ರ ಗಾಂಭೀರ್ಯವನ್ನು ತೋರುತ್ತ ನಾನು ಹೇಳಿದೆನು. ಸ್ವಾಮೀ, ದಯವಿಟ್ಟು ಈ ವಿಷಯವನ್ನು ಅನುಗ್ರಹಿಸಿದಂತೆ ಪೂಜ್ಯರು ಇನ್ನೊಂದನ್ನು ಸ್ವಲ್ಪ ಅನುಗ್ರಹಿಸಬೇಕು-ನನಗೆ ಯಾವಾಗ ವಿವಾಹವಾಗುವದು? ಯಾವ ಹುಡುಗಿಯು ನನಗೆ ಹೆಂಡತಿಯಾಗುವಳು? ಆಕೆಯಿರುವದೆಲ್ಲಿ? ಮಹಾತ್ಮರ ಮಾತನ್ನು ಕೇಳಿ ನಾನು ನಿಶ್ಚಯವಾಗಿಯೂ ಆಶ್ಚರ್ಯದಲ್ಲಿ ಮುಳುಗಿರುವೆನು. ಪೂಜ್ಯರ ಅನುಗ್ರಹದಿಂದ ನನ್ನ ವಿವಾಹದ ಭವಿಷ್ಯತ್ಕಾಲದ ಎಲ್ಲ ಸಂಗತಿಯನ್ನೂ ತಿಳಿಯಬೇಕೆಂದಾಶೆಯಾಗಿದೆ.

ಮಹಾತ್ಮನು ನನ್ನ ಪ್ರಶ್ನೆಗೆ ಕೂಡಲೆ ಉತ್ತರವನ್ನು ಹೇಳಲಿಲ್ಲ. ಈ ಪ್ರಶ್ನೆಯನ್ನು ಕೇಳಿ ಮಹಾತ್ಮನು ಸ್ವಲ್ಪ ಗಾಬರಿಗೆ ಸಿಲುಕಿದಂತೆ ತೋರಿತು. ಕಣ್ಣುಗಳನ್ನು ಮುಚ್ಚಿಕೊಂಡು ಕ್ಷಣಕಾಲ ವಿಚಾರ ಮಾಡುತ್ತ ಇದ್ದನು. ನಾನೂ ಏಕಾಗ್ರತೆಯಿಂದ ಮಹಾತ್ಮನ ಮುಖವನ್ನು ನೋಡುತ್ತಿದ್ದೆನು.

ಮಹಾತ್ಮನು ನನ್ನನ್ನು ಕೇಳಿದನು:-ಮಗೂ, ನಿನಗೆ ಮುಂದೆ ವಿವಾಹವಾಗುವ ಹೆಂಡತಿಯ ರೂಪವನ್ನು ನಾನು ವರ್ಣಿಸಬಹುದು. ಆಕೆಯು ಇರತಕ್ಕ ಸ್ಥಳವನ್ನು ಹೇಳಬಹುದೇ, ಎಂದು ನೀನು ಅಭಿಪ್ರಾಯಪಟ್ಟಿರುವಿಯಾ?

ನಾನು ಹೇಳಿದೆನು:—ಹೌದು. ತಮ್ಮಂತಹ ದಿವ್ಯದೃಷ್ಟಿಯ ಮಹಾತ್ಮರಿಗೆ ಎಲ್ಲವೂ ಪ್ರತ್ಯಕ್ಷವಾಗಿಯೇ ಇರುವುದಲ್ಲವೇ? ನಮಗಾದರೋ ಭವಿಷ್ಯತ್ಕಾಲದ ಎಲ್ಲಾ ಸಂಗತಿಯೂ ಕತ್ತಲೆ ಮುಸುಕಿದಂತಾಗಿದೆ. ಪೂಜ್ಯರೇ, ಅದನ್ನೂ ದಿವ್ಯದೃಷ್ಟಿಯ ಪ್ರಭಾವದಿಂದ ತಿಳಿದು ತಾವು ಹೇಳಬಲ್ಲಿರೆಂದು ಕೇಳುತ್ತಿರುವೆನು. ತಾವಂದಂತೆಯೇ ನನ್ನ ಅಭಿಪ್ರಾಯವಿದೆ.

ಆ ಮೇಲೆ ಆ ಮಹಾತ್ಮನು ಸ್ವಲ್ಪಕಾಲ ಏನೂ ಮಾತನಾಡಲಿಲ್ಲ. ಆಸನದಲ್ಲಿ ಸ್ಥಿರವಾಗಿ ಕುಳಿತು ಮೂಗಿನ ತುದಿಯಲ್ಲಿ ದೃಷ್ಟಿಯಿಟ್ಟು ವಿಚಾರ ಮಾಡಲಾರಂಭಿಸಿದನು. ಆ ಕಾಲದಲ್ಲಿ ಮಹಾತ್ಮನ ಶರೀರವು ಮಾತ್ರ ಅಲ್ಲಿ ಇದ್ದು, ಮನಸ್ಸು ಎಲ್ಲಿಯೋ ವಿಚಾರಿಸಲು ಹೊರಟು ಹೋಗಿರುವಂತೆ ತೋರುತ್ತಿದ್ದಿತು. ನಮ್ಮೆದುರು ಉಸಿರಿನ ಶಬ್ದ ಮಾತ್ರ ಕೇಳಿಸುತ್ತಿತ್ತು ಗುಡಿಸಿಲಿನ ಹೊರಗೆ ಪೂಜ್ಯಳಾದ ಗಂಗೆಯು ನಿಶ್ಶಬ್ದಳಾಗಿ ಹರಿಯುತ್ತಿದ್ದಳು. ವಾತಾವರಣವು ಎಲ್ಲ ಕಡೆಯಲ್ಲಿಯೂ ಪ್ರಶಾಂತವಾಗಿದ್ದಿತು.

ಮಹಾತ್ಮನು ನಿಶ್ಶಬ್ದ ಮತ್ತು ಪ್ರಶಾಂತನಾ[illegible] ಮನದಲ್ಲಿ ನಾನಾ ವಿಧವಾದ ವಿಕಲ್ಪಗಳು ಬರತೊಡಗಿದವು:—ಏನು? ಈ ಮಹಾತ್ಮನು ನನ್ನ ಪ್ರಶ್ನೆಗೆ ಯಾವ ಉತ್ತರವನ್ನು ಕೊಡಲೆಂದು ಹೀಗೆ ಆಲೋಚಿಸುತ್ತಿರುವನೋ?

ನನ್ನ ಈ ಪ್ರಶ್ನೆಗೆ ಸರಿಯಾದುತ್ತರವು ದೊರೆತರೆ ಮಹಾತ್ಮನು ಸಿದ್ಧ ಪುರುಷನೆಂದು ನಂಬಿಕೆಯುಂಟಾಗಬಹುದು; ಆದರೆ ಈ ಪ್ರಶ್ನೆಗೆ ದೊರೆಯುವ ಉತ್ತರವು ನಿಜವೋ ಸುಳ್ಳೋ ಎಂಬದನ್ನು ಹೇಗೆ ಪರೀಕ್ಷಿಸಲಿ? ಈ ಹುಡುಗಿಯರೊಳಗೆ ಯಾರೊಡನೆಯೂ ನಿನಗೆ ವಿವಾಹವಾಗುವದಿಲ್ಲ ಎಂದು ಮೊದಲು ಹೇಳಿದುದರ ಪರೀಕ್ಷೆಯು ಸದ್ಯದಲ್ಲಿಯೇ ಆಗುವುದು. ಈ ವರ್ಷದಲ್ಲಿ ನಿನಗೆ ವಿವಾಹವೇ ಆಗುವದಿಲ್ಲ, ಎಂಬುದರ ಪರೀಕ್ಷೆಯು ಮಾತ್ರ ವರ್ಷವಾದ ಮೇಲೆಯೇ ಸರಿ. ಈಗ ಕೇಳಿದ ಪ್ರಶ್ನೆಗೆ ಉತ್ತರವಾಗಿ ರೂಪ, ಹೆಸರು, ಸ್ಥಳ ಮುಂತಾದುದನ್ನು ಹೇಳಿದ್ದೇ ಆದರೆ, ಆದರ ಪರೀಕ್ಷೆಯೂ ಒಂದು ವರ್ಷದ ಮೇಲೆಯೇ ಸರಿ. ಒಂದು ವರ್ಷವಾದಮೇಲೆ ಮಹಾತ್ಮನ ಮಾತು ಸುಳ್ಳೆಂದು ತಿಳಿದರೆ, ಆಗ ನಾನೇನು ಮಾಡಬೇಕು? ಆ ಸಮಯದಲ್ಲೇ ಮಹಾತ್ಮನು ನನ್ನ ಮುಂದಿನ ಹೆಂಡತಿಯ ರೂಪ ಮೊದಲಾದುದನ್ನು ಹೇಗೆ ತಾನೇ ವರ್ಣಿಸಬಲ್ಲನು? ಎಂದು ನನಗೆ ದೊಡ್ಡ ಕೌತುಕವಾಗಿದೆ. ಈಗಲೂ ಕೂಡ ಮಹಾತ್ಮನು ಪ್ರಶಾಂತನಾಗಿಯೇ ಕುಳಿತಿರುವನು ನನಗುತ್ತರವನ್ನು ಹೇಗೆ ಕೊಡೋಣವೆಂದೇ ಚಿಂತಿಸುತ್ತಿದ್ದಾನೆಂದು ನಾನು ಊಹಿಸುತ್ತೇನೆ.

ಒಡನೆ ಮಹಾತ್ಮನ ಶರೀರವು ಸ್ವಲ್ಪ ಕದಲಿತು. ದೀರ್ಘವಾದ ಉಸಿರೊಂದು ಹೊರ ಹೊರಟಿತು. ನನ್ನ ಪ್ರಶ್ನೆಗೆ ಉತ್ತರ ನಿರ್ಧರಿಸಲ್ಪಟ್ಟಿತೆಂದು ತೋರಿತು. ಮಹಾತ್ಮನು ನನ್ನ ಮೇಲೆ ನೋಟವನ್ನು ಬೀರಿ ಕೇಳಿದನು:—ಮಗೂ, ನಿನ್ನ ಪ್ರಶ್ನೆಗೆ ಸಮಸ್ತ ಉತ್ತರವನ್ನೂ ನೀನು ತಿಳಿಯಬಯಸುವೆಯಾ? [illegible]ಪೇಕ್ಷಿಸುವೆಯಾ?

ನಾನು ಹೇಳಿದೆನು:—ಪರಿಚಯವಿಲ್ಲದಿದ್ದರೂ ನನ್ನ ಮೇಲೆ ಪೂಜ್ಯರು ದಯವಿಟ್ಟು ತಮ್ಮ ಆಯಾಸವನ್ನು ಎಣಿಸದಿದ್ದರೆ........

ಮಹಾತ್ಮನು ಹೇಳಿದನು:—ಹೀಗೋ? ಆಗಲಿ. ನೋಡು, ಆ ಮೂಲೆಯಲ್ಲಿ ಮಣ್ಣಿನ ರಾಶಿಬಿದ್ದಿದೆ. ಅದರಲ್ಲಿದ್ದ ದೊಡ್ಡದಾದೊಂದು ಮಣ್ಣಿನ ಹೆಂಟೆಯನ್ನು ಇಲ್ಲಿ ತೆಗೆದುಕೊಂಡು ಬಾ.

ನಾನು ಮನದಲ್ಲಿಯೇ ತರ್ಕಿಸಿದೆನು:—ಮಣ್ಣನ್ನು ತೆಗೆದುಕೊಂಡು ಮಹಾತ್ಮನೇನು ಮಾಡುವನು?

ಮಣ್ಣಿನ ಹೆಂಟೆಯೊಂದನ್ನು ತಂದುಕೊಟ್ಟೆನು. ಮಹಾತ್ಮನು ಹೇಳಿದನು:— ಇಗೋ, ಈ ಕಾಲುಮಣೆಯನ್ನು ಹತ್ತಿರ ಇಟ್ಟುಕೊಂಡು ಅದರ ಮೇಲೆ ಈ ಹೆಂಟೆಯನ್ನಿಡು.

ನಾನು ಹಾಗೆಯೇ ಮಾಡಿದೆನು. ಮಹಾತ್ಮನು ಹೇಳಲಾರಂಭಿಸಿದನು: ಮಗೂ ಏಕಾಗ್ರತೆಯಿಂದ ಕೇಳು. ಎಲ್ಲಿರುವ, ಎಂತಹ, ಯಾವಳು, ಯಾವಾಗ ಹೆಂಡತಿಯಾಗುವಳು? ಎಂದು ಪ್ರಶ್ನೆ ಮಾಡುತ್ತಿರುವೆಯಲ್ಲವೆ? ನೀನು ಸ್ಥಿರವಾದ ಬುದ್ಧಿಯಿಂದ, ಪ್ರಶಾಂತವಾದ ಮನಸ್ಸಿನಿಂದ ಆಲೋಚನೆ ಮಾಡಲು ಸಮರ್ಥನಿರುವೆಯಾದರೆ ನಿನ್ನ ಪ್ರಶ್ನೆಗೆ ನೀನೇ ಉತ್ತರವನ್ನು ತಿಳಿದುಕೊಳ್ಳುವೆ. ಯಾಕಂದರೆ ಮನುಷ್ಯನು ಪ್ರತ್ಯೇಕವಾಗಿದ್ದು, ತನ್ನ ಇಚ್ಛಾಶಕ್ತಿಯ ಸಾಮರ್ಥ್ಯದಿಂದ ಆಶ್ಚರ್ಯಕರವಾದ ಕೆಲಸಗಳನ್ನು ಮಾಡಲು ಸಮರ್ಥನಾಗುತ್ತಾನೆ. ಆತ್ಮಶಕ್ತಿಯ ಮುಂದೆ ಯಾವ ಶಕ್ತಿಯೂ ಇಲ್ಲ. ನೀನು ಮನಸ್ಸನ್ನು ದೃಢಪಡಿಸಿ ಏಕಾಗ್ರತೆಯಿಂದ ಕಾಲುಮಣೆಯ ಮೇಲಿರುವ ಮಣ್ಣಿನ ಹೆಂಟೆಯನ್ನು ನೋಡುತ್ತಿರು. ನಿನಗೆ ಮುಂದೆ ವಿವಾಹವಾಗುವ ಹುಡುಗಿಯನ್ನು ನೀನು ಇದರಲ್ಲಿ ಕಾಣುವೆ.

ಮಹಾತ್ಮನು ಇದೇನು ಹೇಳುತ್ತಿರುವನು? ಮಣ್ಣಿನಲ್ಲಿ ಯಾರದ್ದಾದರೂ ಚಿತ್ರವನ್ನು ನಾನು ಹೇಗೆ ನೋಡಲು ಸಾಧ್ಯವಾದೀತು? ಎಂದು ನಾನು ಆಶ್ಚರ್ಯದಿಂದ-ಅಪನಂಬಿಕೆಯ ನೋಟದಿಂದ ಮಹಾತ್ಮನನ್ನು ನೋಡಿದೆನು. ಮಹಾತ್ಮನು ಹೇಳಿದನು:—ಏನು, ಮಣ್ಣಿನಲ್ಲಿ ಚಿತ್ರವನ್ನು ಕಾಣುವದಸಾಧ್ಯವೆಂದು ತಿಳಿದೆಯಾ? ನೀನು ನನ್ನ ಮಾತಿನಲ್ಲಿ ವಿಶ್ವಾಸವಿಟ್ಟು, ಇದು ಮಣ್ಣಲ್ಲ; ಪ್ರತಿಫಲಿಸುವ ಸಾಮರ್ಥ್ಯವಿರುವ ಗಾಜು, ಎಂದು ಸ್ವಲ್ಪಕಾಲ ಭಾವಿಸು.

ನಾನು ಕೇಳಿದೆನು:—ಪೂಜ್ಯರು ನನ್ನನ್ನು ಪರಿಹಾಸ ಮಾಡುತ್ತಿರುವರೇ? ಮಣ್ಣನ್ನು ಗಾಜೆಂದು ನಾನು ಹೇಗೆ ತಾನೆ ಭಾವಿಸಲಿ? ಅದರೊಳಗೆ ಚಿತ್ರವನ್ನಾದರೂ ನೋಡಲು ಹೇಗೆ ಸಾಧ್ಯ? ಇಂಥಾದ್ದು ಯಾವಾಗಲಾದರೂ ಸಂಭವಿಸೀತೇ?

ಮಹಾತ್ಮನು ಹೇಳಿದನು:—ಯಾಕೆ ಸಂಭವಿಸುವದಿಲ್ಲ? ಈ ಸಂಸಾರದಲ್ಲಿ ಅಸಂಭವವಾದುದು ಒಂದೂ ಇಲ್ಲ. ಮನುಷ್ಯನು ತನ್ನ ಪ್ರಬಲವಾದ ಇಚ್ಛಾಶಕ್ತಿಯನ್ನು ಪ್ರಯೋಗಿಸಲು ಇಚ್ಛಿಸದೇ ಹೋದರೆ, ಅದು ಬೇರೆ ವಿಷಯ. ನೀನೀಗ ನಾನಂದಂತೆ ಮಾಡು. ಆ ಮೇಲೆ ನೋಡುವೆ, ಫಲವಾಗವುದೇ ಇಲ್ಲವೇ ಎಂಬುದನ್ನು.

ಮಹಾತ್ಮನ ಮಾತಿನಲ್ಲಿ ಗಾಂಭೀರ್ಯವು ತುಂಬಿದ್ದಿತು. ಆದುದರಿಂದ ಆತನ ಮಾತು ಪರಿಹಾಸಕರವಾದುದೆಂದು ಕಲ್ಪಿಸುವದುಚಿತವಲ್ಲ. ಇಷ್ಟಾದರೂ ನನಗೆ ಮಹಾತ್ಮನ ಮಾತಿನಲ್ಲಿ ನಂಬಿಕೆಯುಂಟಾಗಲಿಲ್ಲ. ಏನು? ಮಾಡೋಣವೇ-ಬೇಡವೇ? ಮಹಾತ್ಮನ ಮಾತು ನಿಜವೆಂದು ತಿಳಿಯಲೇ? ಪರಿಹಾಸದ ಮಾತೆಂದು ತಿಳಿಯಲೇ? ಯಾವುದನ್ನು ನಿಶ್ಚಯ ಮಾಡುವದಕ್ಕೂ ಸಾಧ್ಯವಾಗಲಿಲ್ಲ.

ತಿರುಗಿ ಮಹಾತ್ಮನು ಹೇಳಿದನು:-ಮಗೂ, ನೀನು ಸ್ಥಿರಚಿತ್ತನಾಗಿ ಮನಸ್ಸನ್ನೆಲ್ಲಾ ಈ ಮಣ್ಣಿನ ಹೆಂಟೆಯಲ್ಲಿಯೇ ಇಡು. ಉಳಿದದ್ದೆಲ್ಲವನ್ನೂ ಮರೆತು ಬಿಡು. ಈ ಶಾಂತಿಮಯವಾದ ಸಂಸಾರವನ್ನೂ, ನಿನ್ನ ಈ ಸ್ನೇಹಿತನನ್ನೂ, ಈ ಗುಡಿಸಿಲನ್ನೂ, ನನ್ನನ್ನೂ ಮರೆತು ಬಿಡು. ಒಳಗಿನ ಕಲ್ಪನಾಮಯವಾದ ದೃಷ್ಟಿಯಿಂದಲೂ ಕೂಡ ಮಣ್ಣಿನ ಹೆಂಟೆಯನ್ನೇ ನೋಡುತ್ತಿರು. ಮುಂದಿನ ಹೆಂಡತಿಯನ್ನಿಲ್ಲಿ ನೋಡಲಿಚ್ಛಿಸುತ್ತೇನೆಂದು ಸಂಪೂರ್ಣವಾಗಿ ಭಾವಿಸು. ಆ ಮೇಲೆ ನೀನೇ ನೋಡುವೆ ಏನು ತೋರುವದೆಂಬುದನ್ನು.

ನಾನು ಆಲೋಚಿಸಿದೆನು:—ಮಹಾತ್ಮನು ಹೇಳಿದಂತೆ ಮಾಡಲು ದೋಷವೇನು? ಸ್ಥಿರಚಿತ್ತನಾಗಿ ಏಕಾಗ್ರತೆಯಿಂದ ನೋಡಿದರೂ ಆ ಮೇಲೆ ನನಗೇನೂ ಕಾಣಿಸದಿದ್ದರೆ ಆಗ ಈ ಮಹಾತ್ಮನು ಖಂಡಿತವಾಗಿಯೂ ಮೋಸಗಾರನೆಂದೂ, ನನ್ನ ಪ್ರಶ್ನೆಗೆ ಉತ್ತರ ಕೊಡಲು ಕಷ್ಟವಾಗಿ ಇದೊಂದು ಪ್ರಕಾರವಾಗಿ ನನ್ನನ್ನು ಮೋಸಗೊಳಿಸುವನೆಂದೂ ನಿರ್ಧರಿಸಿ ಬಿಡಬಹುದು. ಸ್ವಲ್ಪ ಹೊತ್ತು ಮಹಾತ್ಮನ ಮಾತಿನಲ್ಲಿ ನಂಬಿಗೆಯಿಟ್ಟು, ಯಾವುದೋ ಆಶ್ಚರ್ಯವನ್ನು ನಾನು ಖಂಡಿತವಾಗಿಯೂ ನೋಡುತ್ತೇನೆಂದು ನಿಶ್ಚಯ ಮಾಡಿ ಆ ಮಣ್ಣಿನ ಹೆಂಟೆಯಲ್ಲಿ ನೋಟವನ್ನು ಸ್ಥಿರವಾಗಿರಿಸಿ ಕುಳಿತುಕೊಂಡೆನು. ಗುಡಿಸಿಲಿನೊಳಗೆ ತುಂಬಾ ಶಾಂತಿಯಿದ್ದಿತು. ರಾಮಚಂದ್ರನು

ನನ್ನ ಪಕ್ಕದಲ್ಲಿ ಕುಳಿತುಕೊಂಡು, ಒಂದು ಬಾರಿ ಕಾಲುವೆಣೆಯ ಮೇಲಿದ್ದ ಮಣ್ಣಿನ ಹೆಂಟೆಯನ್ನೂ ಇನ್ನೊಂದು ಬಾರಿ ನನ್ನನ್ನೂ ನೋಡುತ್ತ ಕುಳಿತಿದ್ದನು. ಗುಡಿಸಿಲಿಗೆ ಬಂದ ಮೇಲೆ ಆತನು ಒಂದು ಶಬ್ದವನ್ನೂ ಉಚ್ಚರಿಸಲಿಲ್ಲ. ಮಹಾತ್ಮನೊಂದಿಗೆ ನಾನು ಸಂಭಾಷಣೆ ಮಾಡುತ್ತಿರುವಾಗ ಮಧ್ಯದಲ್ಲಿ ತಾನು ಮಾತಾಡುವದುಚಿತವಲ್ಲವೆಂದು ರಾಮಚಂದ್ರನು ಭಾವಿಸಿರುವನೆಂದು ತೋರುತ್ತದೆ. ಮಹಾತ್ಮನೂ ಕೂಡ ಸ್ಥಿರವಾದ ನೋಟದಿಂದ ನನ್ನನ್ನೇ ನೋಡುತ್ತಿದ್ದನು. ಆ ಸಮಯದಲ್ಲಿ ಆತನ ಕಣ್ಣುಗಳಿಂದ ಪ್ರತಿಕ್ಷಣವೂ ಮಿಂಚಿನಂತೆ ಒಂದು ವಿಧವಾದ ತೇಜಸ್ಸು ಹೊರಡುತ್ತಿದ್ದಂತೆ ತೋರುತ್ತಿದ್ದಿತು

ನಾನು ಮಹಾತ್ಮನ ಅಪ್ಪಣೆಯ ಮೇರೆಗೆ ಆ ಮಣ್ಣಿನ ಹೆಂಟೆಯಲ್ಲಿ ಮನಸ್ಸನ್ನು ಸ್ಥಿರವಾಗಿರಿಸಲು ಸಕಲ ಪ್ರಯತ್ನಗಳನ್ನೂ ಮಾಡುತ್ತಿದ್ದೆನು. ಈ ಮಧ್ಯದಲ್ಲಿ ಸಮಯವು ಹೇಗೆ ಕಳೆದುಹೋಯಿತೋ ನನಗೆ ತಿಳಿಯಲೇ ಇಲ್ಲ. ಮೆಲ್ಲಮೆಲ್ಲನೆ ಗುಡಿಸಿಲಿನೊಳಗೆ ಕತ್ತಲೆಯು ಕವಿದಂತೆ ತೋರತೊಡಗಿತು. ದೀಪದ ಬೆಳಕೂ ಕೂಡ ಇಲ್ಲದಂತಾಯಿತು. ಒಳಗೂ ಹೊರಗೂ, ಎಲ್ಲೆಲ್ಲಿಯೂ ಹಿಂದೆ ಅನುಭವಿಸದೇ ಇರುವ ಯಾವುದೋ ಒಂದು ತರಹದ ನಿಶ್ಚಲತೆಯು ತೋರುತ್ತಿದ್ದಿತು. ಹೇಗೆ ಹೇಗೆ ನನ್ನ ಮನಸ್ಸು ಏಕಾಗ್ರವಾಗಹತ್ತಿತೋ, ಹಾಗೆ ಹಾಗೆ ನನ್ನ ಹೃದಯದ ಚಲನೆಯೂ ಕೂಡ ಮಂದಮಂದವಾದಂತೆ ತೋರತೊಡಗಿತು. ಯಾವುದೋ ಒಂದು ಪ್ರಬಲವಾದ ಶಕ್ತಿಯು ಬಂದು ನನ್ನ ಮನಸ್ಸಿನಲ್ಲಿ ಸಿದ್ಧಪುರುಷನಾದ ಈ ಮಹಾತ್ಮನು ತನ್ನ ಇಚ್ಛಾಶಕ್ತಿಯ ಮಹಿಮೆಯಿಂದ ನನ್ನೆದುರಿನಲ್ಲಿ ಯಾವುದೋ ಒಂದದ್ಭುತವಾದ ದೃಶ್ಯವನ್ನು ಖಂಡಿತವಾಗಿಯೂ ತೋರಿಸುವನು, ಎಂಬ ನಂಬಿಕೆಯನ್ನು ಉಂಟುಮಾಡಿದಂತೆ ತೋರಿತು. ಒಡನೆ ಆ ಮಣ್ಣಿನ ಹೆಂಟೆಯಲ್ಲಿ ಏನೋ ಒಂದು ವಿಧವಾದ ಮಾರ್ಪಾಡುಂಟಾಯಿತು. ಮಹಾತ್ಮನು ಹೇಳಿದಂತೆಯೇ ಆ ಮಣ್ಣಿನ ಹೆಂಟೆಯು ಪ್ರತಿಫಲನ ಸಾಮರ್ಥ್ಯವಿರುವ ಒಂದು ಗಾಜಾಗಿ ಪರಿಣಮಿಸಲು ತೊಡಗಿದಂತೆ ಅನುಭವವಾಯಿತು. ನಾನು ಮಂತ್ರದಿಂದ ಮುಗ್ಧನಾದಂತೆ ಈ ಆಶ್ಚರ್ಯವನ್ನು ನೋಡುತ್ತ:-ಇದೇನು? ನನ್ನ ಕಣ್ಣಿನ ಭ್ರಾಂತಿಯೇ? ಎಂದೂಹಿಸುತ್ತಿರುವಾಗಲೇ ಆ ಮಣ್ಣಿನ ಹೆಂಟೆಯು ಎಲ್ಲಿಯೋ ಮಾಯವಾದಂತೆಯೂ, ಅದರ ಸ್ಥಳದಲ್ಲಿ ಅದೇ ಆಕಾರವಿರುವ ಒಂದು ಗಾಜು

ಇದ್ದಂತೆಯೂ ನೋಡಿದೆನು. ನಿರ್ಮಲವಾದ ಆ ಗಾಜಿನಲ್ಲಿ ಕೆಳಗಿರುವ ಮಣೆಯು ಪ್ರತಿಬಿಂಬಿಸುತ್ತಿತ್ತು. ಏನು? ನನ್ನ ಕಣ್ಣುಗಳೇ ನನ್ನನ್ನು ವಂಚಿಸುತ್ತಿವೆಯೆ? ನನ್ನ ತಲೆಯು ತಿರುಗುತ್ತಿರುವುದೇ? ಒಂದು ಸಾರಿ ಕಣ್ಣುಗಳನ್ನು ಮುಚ್ಚಿ ತೆರೆದು ನೋಡಿದೆನು. ಆಗಲೂ ಅದೇ ದೃಶ್ಯ. ಆಲೋಚಿಸಿದೆನು --ಮಣ್ಣಿನ ಹೆಂಟೆಯನ್ನು ಗಾಜಿನಂತೆ ನಾನು ಹೇಗೆ ನೋಡುತ್ತಿರುವೆನೋ, ಹಾಗೆಯೇ ರಾಮಚಂದ್ರನೂ ಮಹಾತ್ಮನೂ ನೋಡುತ್ತಿರುವರೇ? ಎಂದು; ಆದರೆ ನಾನು ಪ್ರಯತ್ನಪಟ್ಟಾಗ್ಯೂ ನನ್ನ ಕಣ್ಣುಗಳು ಈವರ ಮುಖದ ಕಡೆಗೆ ಹೊರಳಲಾಗಲಿಲ್ಲ. ಗಾಜಿನಿಂದ ಕಿತ್ತು ಕಣ್ಣುಗಳನ್ನು ಬೇರೆ ಕಡೆಗೆ ತಿರುಗಿಸಲು ನನಗೆ ಶಕ್ತಿಯೇ ಇಲ್ಲಲಿಲ್ಲ. ಯಾವುದೋ ಒಂದು ಪ್ರಬಲವಾದ ಶಕ್ತಿಯು ಕಣ್ಣುಗಳನ್ನು ಅಲ್ಲಿಂದ ತೆಗೆಯಲು ಬಿಡುತ್ತಿರಲಿಲ್ಲ. ಆ ಮೇಲೆ ಆ ಗಾಜಿನಿಂದ ಏನೋ ಒಂದು ವಿಧ ಹಳದೀ ಬಣ್ಣದ ಬೆಳಕೊಂದು ನಿದಾನವಾಗಿ ಹೊರಗೆ ಹೊರಡುತ್ತಿದ್ದಂತೆ ತೋರಿತು. ಅದರಿಂದ ಆ ಗಾಜು ಅದರಲ್ಲಿರುವ ದೃಶ್ಯವನ್ನು ಮಾತ್ರ ತೋರುವಂತಾಯಿತು. ಒಡನೆ ನನ್ನ ಮನಸ್ಸಿಗೆ ತೋರಿತು:-ಖಂಡಿತವಾಗಿಯೂ ಇದು ಇಂದ್ರಜಾಲ. ಐಂದ್ರಜಾಲಕನಾದೀಮಹಾತ್ಮನು ನನ್ನನ್ನು ಮೋಸಕ್ಕೆ ಸಿಲುಕಿಸಲುದ್ಯುಕ್ತನಾಗಿರುತ್ತಾನೆ ಗಟ್ಟಿಯಾಗಿ ಕೂಗಿ ಈತನ ಮೋಸಗಾರಿಕೆಯನ್ನು ಪ್ರಕಟಿಸುತ್ತೇನೆ. ಹೀಗೆಂದು ಕೋರಿ ನಾನು ಕೂಗಬೇಕೆಂದಿರುವಾಗ, ನನ್ನ ಕುತ್ತಿಗೆಯನ್ನು ಯಾರೋ ಒತ್ತಿ ಹಿಡಿದುಕೊಂಡಂತಾಯಿತು ಸ್ವಲ್ಪ ಶಬ್ದವೂ ಕೂಡ ಹೊರಗೆ ಹೊರಡದಂತಾಯಿತು. ಬಲಾತ್ಕಾರವಾಗಿ ಯಾರೋ ಪ್ರೇರಿಸಿದಂತಾಗಿ, ನನ್ನ ಕಣ್ಣೂ ಮನಸ್ಸೂ ತಿರುಗಿ ಅದೇ ಗಾಜಿನಲ್ಲಿ ದೃಢವಾಗಿ ನಿಂತವು. ಒಂದು ನಿಮಿಷದ ಮೇಲೆ ತೋರಿತು, ಆ ಗಾಜಿನೊಳಗೆ ಹೊಗೆಯಂತೆ ಏನೋ ಹೊರಡುತ್ತಿತ್ತು. ಅದೇ ಹೊಗೆಯೇ ಆ ಮೇಲೆ ದೊಡ್ಡದೊಂದು ಮನೆಯ ಆಕಾರವನ್ನ ಪಡೆಯಿತು. ಸಿನೇಮಾದಲ್ಲಿ ನಾನಾ ವಿಧವಾದ ದೃಶ್ಯಗಳನ್ನು ಒಂದಾದ ಮೇಲೊಂದನ್ನು ನೋಡುತ್ತಿದ್ದಂತೆ ನಾನು ಆ ಗಾಜಿನಲ್ಲಿ ಒಂದೊಂದು ದೃಶ್ಯವನ್ನು ನೋಡತೊಡಗಿದೆನು. ಆ ಮೇಲೆ ಒಂದು ರೇಲ್ವೇಸ್ಟೇಷನ್ನು ಸ್ಪಷ್ಟವಾಗಿ ತೋರತೊಡಗಿತು. ಉದ್ದವಾದೊಂದು ಬಂಡಿಯು ಸ್ಟೇಷನ್ನಿನಲ್ಲಿ ನಿಂತಿದ್ದಿತು. ಪ್ರಯಾಣಿಕರು ಹತ್ತುತ್ತಿದ್ದರು; ಇಳಿಯುತ್ತಿದ್ದರು. ಕೂಲಿಕಾರರು ಇತ್ತಿಂದತ್ತ ಓಡಾಡುತ್ತಿದ್ದರು.

ಒಂದು ಪಕ್ಕದಲ್ಲಿ ಸಾಲಾಗಿ ಕೋಣೆಗಳಿದ್ದವು. ಸ್ವಲ್ಪ ಮುಂದೆ ಇನ್ನೊಂದು ಕಡೆಗೆ ಹೋಗುವ ರೈಲುದಾರಿಯೊಂದಿತ್ತು. ಇದು ಯಾವ ರೇಲ್ವೆ ಸ್ಟೇಷನ್ನಿದ್ದೀತು? ಎಲ್ಲಿಯೂ ಹಿಂದೆ ನೋಡಿದಂತೆ ತೋರಲಿಲ್ಲ. ಸೀನೇಮಾದಂತೆ ಎಲ್ಲವೂ ಸ್ಪಷ್ಟವಾಗಿಯೇ ತೋರುತ್ತಿದ್ದಿತು. ನಾನು ಭ್ರಾಂತನಂತೆಯೂ, ಭೀತಿಪಟ್ಟವನಂತೆಯೂ ಉಸಿರುಕಟ್ಟಿ ಈ ದೃಶ್ಯವನ್ನು ನೋಡುತ್ತಿರುವಾಗಲೆ ಒಬ್ಬ ಸುಂದರಿಯ ಚಿತ್ರವು ಎದುರಿಗೆ ಬಂದಿತು. ಆ ಸುಂದರಿಯು ಮುಂದಕ್ಕೆ ಬರುತ್ತಿದ್ದಂತೆಯೇ ಆ ಚಿತ್ರವು ಸ್ಪಷ್ಟವಾಗಿಯೇ ತೋರುತ್ತಿದ್ದಿತು ಹದಿನಾರು ವರ್ಷಪ್ರಾಯದ ಆ ಸುಂದರಿಯು ಹೊಂಬಣ್ಣದ ಬೆಲೆಯುಳ್ಳ ಸೀರೆಯನ್ನುಟ್ಟು ಬಿಳೀ ಕುಪ್ಪಸವನ್ನು ತೊಟ್ಟಿದ್ದಳು. ಹಂಸದ ನಡಿಗೆಯಂತಿರುವ ಆಕೆಯ ನಡಿಗೆಯು ಸೌಂದರ್ಯವನ್ನು ಮತ್ತಷ್ಟು ಹೆಚ್ಚಿಸುತ್ತಿದ್ದಿತು. ಇಂತಹ ಸುಂದರಿಯನ್ನು ನಾನಿದುವರೆಗೂ ನೋಡಿಯೇ ಇರಲಿಲ್ಲ. ನೋಡುವದಿರಲಿ, ಇಂತಹ ಸುಂದರಿಯ ವರ್ಣನೆಯನ್ನು ಕೂಡ ಎಲ್ಲಿಯೂ ಓದಿರಲಿಲ್ಲ; ಕೇಳಿಯೂ ಇರಲಿಲ್ಲ. ಆ ಸಮಯದಲ್ಲಿ ನಾನು ಕುಳಿತಿದ್ದ ಗುಡಿಸಿಲನ್ನೂ, ಆ ಮಹಾತ್ಮನನ್ನೂ, ಮಹಾತ್ಮನ ಅನುಗ್ರಹದಿಂದ ಮಣ್ಣಿನ ಹೆಂಟೆಯಲ್ಲಿ ನೋಡುತ್ತಿದ್ದ ಚಿತ್ರವನ್ನೂ ಆ ರೇಲ್ವೆ ಸ್ಟೇಷನ್ನನ್ನೂ ಎಲ್ಲವನ್ನೂ ಕೂಡ ಒಂದೇ ಸಾರೆ ಮರೆತು, ಆ ಸುಂದರಿಯನ್ನೇ ನೋಡುತ್ತಿದ್ದೆನು. ಇಂತಹ ಸೌಂದರ್ಯವು ಈ ಭೂಲೋಕದಲ್ಲಿ ಸಿಗುವದೇ? ಅಥವಾ ಮಹಾತ್ಮನು ತನ್ನ ಇಚ್ಛಾಶಕ್ತಿಯಿಂದ ನಿರ್ಮಿಸಿದ ರೂಪರಾಶಿಯೇ ಇದು? ಈಕೆಯು ನನಗೆ ಹೆಂಡತಿಯಾಗುವಳೇ? ನನಗೆ ಇಂತಹ ಅದೃಷ್ಟವಿರುವುದೇ? ನನ್ನ ತಂದೆಯು ನನಗಾಗಿ ಆರಿಸಿದ ಆ ಮೂವರೂ ಈಕೆಯ ಕಾಲಧೂಳಿಯ ಹೋಲಿಕೆಯನ್ನೂ ಕೂಡ ಪಡೆಯಲಾರರು. ಈಕೆಯು ನನಗೆ ಹೆಂಡತಿಯಾಗುವಳೆಂಬುದರಲ್ಲಿ ಪ್ರಮಾಣವಾದರೂ ಏನು? ನನಗೇನೋ ತಲೆಯೇ ತಿರುಗುತ್ತಿದೆ. ನಾನು ಏನು ಮಾಡಬೇಕೆಂಬುದನ್ನು ತಿಳಿಯದೆ, ಮೂರ್ಖನಂತೆ ಆಕೆಯನ್ನು ಆದರದಿಂದ ನೋಡುತ್ತಿರುವಾಗಲೇ ಆಕೆಯು ಮಾಯವಾದಳು! ಹಾ! ಇದೇನು? ಎಲ್ಲಿಗೆ ಹೋದಳು? ಹೋಗಿಯೇ ಬಿಟ್ಟಳೇ? ಎಂದು ಅತ್ತಿತ್ತ ನೋಡಿ ಆಕೆಯನ್ನು ಹುಡುಕುತ್ತಿದ್ದಾಗಲೇ ಮೊದಲು ನೋಡಿದ ಒಂದು ಪಕ್ಕದಲಿ ಸಾಲಾಗಿರುವ ಕೋಣೆಗಳು, ಅದೇ ರೇಲ್ವೆ ಸ್ಟೇಷನ್, ಅದೇ ದೊಡ್ಡ

ಮನೆ ಮುಂತಾದವುಗಳು ಕ್ಷಣಕಾಲ ತೋರಿ,ಹಾಗೆಯೇ ಕ್ರಮವಾಗಿ ಮಾಯ ವಾಗುತ್ತಿದ್ದವು. ಚಿತ್ರ ಬರೆಯುವ ಮನುಷ್ಯನು ತಾನು ಬರೆದ ಚಿತ್ರಗಳನ್ನು ಮನಸ್ಸಿಗೊಪ್ಪದಿದ್ದೊಡನೆ ಬಿಳೀ ಬಣ್ಣದ ಬ್ರಷ್ಷಿನಿಂದ ಅಳಿಸಿಬಡುವಂತೆ ಆ ದೃಶ್ಯವೆಲ್ಲವೂ ನೋಡದಂತೆ ಮಾಯವಾಗಿ ಮೊದಲಿನಂತೆ ಹೊಗೆಯು ಮಾತ್ರ ಕಾಣಿಸಿತು. ಕ್ಷಣದೊಳಗೆ ಆ ಹೊಗೆಯೂ ಮೆಲ್ಲಮೆಲ್ಲನೆ ಇಲ್ಲದಂತಾಗಿ ಗಾಜು ಮಾತ್ರ ತೋರಲಾರಂಭಿಸಿ, ಆ ಮೇಲೆ ಅದು ಹೋಗಿ, ಅಲ್ಲಿ ಮೊದಲಿನ ಮಣ್ಣು ಹೆಂಟೆಯೇ ಕಾಣಿಸಿತು!

ನಾನು ಸ್ವಾಭಾವಿಕವಾಗಿ ಭಯವಿಲ್ಲದ ಹೃಷ್ಟಪುಷ್ಟಾಂಗನಾದ ತರುಣ ನಾಗಿದ್ದರೂ ಕೂಡ ಆ ಸಮಯದಲ್ಲಿ ನಡುಗುವ ಸರ್ವಾಂಗವುಳ್ಳವನಾಗಿ, ಯಾವುದೋ ಒಂದು ಭಯಕ್ಕೆ ಸಿಲುಕಿದಂತೆ ಆಗಿದ್ದೆನು. ಹಾಗೆ ನಾನು ಆಗಿದ್ದೆನೆಂದು ಹೊರಗೆ ಹೇಳುವುದು ನಾಚಿಕೆಗೇಡಾದರೂ ಖಂಡಿತವಾಗಿ ಹಾಗೆ ನಡೆದುದೇನೋ ನಿಜ. ಗಟ್ಟಿಯಾಗಿ ಕೂಗಿ ಇಂದ್ರಜಾಲಮಯವಾದ ಆ ಗುಡಿಸಿಲಿನಿಂದ ಹೊರಬಿದ್ದು, ತತ್‌ಕ್ಷಣ ಓಡಿಹೋಗಬೇಕೆಂದು ನಾನು ಮನಸ್ಸಿನಲ್ಲಿ ಇಚ್ಛಿಸಿದರೂ ಕೂಗುವದಕ್ಕೆ ಆಗಲಿ, ಏಳುವದಕ್ಕೆ ಆಗಲಿ ಅಶಕ್ತನಾಗಿದ್ದೆನು. ಮೆಲ್ಲಮೆಲ್ಲನೆ ನನ್ನ ಶರೀರದಲ್ಲಿ ಅಲುಗಾಡುವ ಶಕ್ತಿ ಹಿಂದಿರುಗಿ ಬರುತ್ತಿದ್ದಂತೆ ತೋರುತ್ತಿದ್ದಿತು. ಕಷ್ಟದಿಂದ ಕಣ್ಣುಗಳನ್ನು ಮಣ್ಣಿನ ಹೆಂಡೆಯಿಂದ ತಪ್ಪಿಸಿ, ಮುಖವನ್ನು ಮೇಲಕ್ಕೆತ್ತಿ ಗುಡಿಸಿಲಲ್ಲಿ ಸುತ್ತಲೂ ನೋಡಿದೆನು. ಎಲ್ಲಾ ಕಡೆಯಲ್ಲಿಯೂ ಕತ್ತಲೆಯು ಕವಿದಿತ್ತು. ನೊಂದಿ ಹೋಗುವ ಸ್ಥಿತಿಯಲ್ಲಿದ್ದ ದೀಪವು ಅಮಾವಾಸ್ಯೆಯ ಕತ್ತಲೆಯಲ್ಲಿ ಹೊಳೆಯುವ ಒಂದು ನಕ್ಷತ್ರದಂತೆ ತೋರುತ್ತಿದ್ದಿತು.

ನನ್ನ ಪಕ್ಕದಲ್ಲಿ ಕುಳಿತಿದ್ದ ರಾಮಚಂದ್ರನು ಚಿತ್ರದ ಬೊಂಬೆಯಂತೆ ಸುಮ್ಮನೆ ಕುಳಿತಿದ್ದನು. ಬಾರುಕೋಲಿನಿಂದ ಹೊಡೆದೆಬ್ಬಿಸಿದಂತೆ ನಾನು ಮೊದಲಿನಂತೆಯೇ ಆದೆನು. ಯಾವನಾದರೊಬ್ಬನು ಸುಖಮಯ ವಾದೊಂದು ಸ್ವಪ್ನವನ್ನು ಕಂಡು ಅಕಸ್ಮಾತ್ತಾಗಿ ಎಚ್ಚತ್ತಂತೆ ನನ್ನ ಸ್ಥಿತಿ ಯಾಗಿದ್ದಿತು.

ಮಗೂ, ದೀಪವು ನೊಂದುವ ಹಾಗೆ ಆಗಿದೆ ಎಣ್ಣೆ ಹಾಕು, ಎಂಬ ಮಹಾತ್ಮನ ಮಾತು ಕಿವಿಗೆ ಬಿದ್ದಿತು. ರಾಮಚಂದ್ರನದನ್ನು ಕೇಳಿ ನಿದ್ರೆ

ಯಿಂದೆಚ್ಚತ್ತಂತೆ ಎದ್ದು ದೀಪಕ್ಕೆ ಎಣ್ಣೆ ಹಾಕಿದನು. ದೀಪವು ದೊಡ್ಡದಾಗಿ ಗುಡಿಸಿಲೆಲ್ಲವೂ ಬೆಳಗತೊಡಗಿತು. ಮಹಾತ್ಮನು ಮೊದಲಿನಂತೆಯೇ ಗಂಭೀರ ವಾದ ಆಕೃತಿಯುಳ್ಳವನಾಗಿ ಮೊದಲಿನ ಸ್ಥಳದಲ್ಲಿಯೇ ಕುಳಿತಿದ್ದನು.

ನಾನು ನಡುಗುವ ಸ್ವರದಿಂದ ಮಹಾತ್ಮನನ್ನು ಕೇಳಿದೆನು:-ಸ್ವಾಮೀ, ಇದೆಲ್ಲ ಏನು ಲೀಲೆ? ಏನೀ ಅದ್ಭುತವಾದ ಕೆಲಸ? ನಾನು ನೋಡಿದ್ದವುಗಳಲ್ಲಿ ಸ್ವಲ್ಪ ಅಂಶವಾದರೂ ನಿಜವಾದುದೇ? ಅಥವಾ ಬರಿಯ ವಿಕಾರದ ವಿಲಾ ಸವೇ? ಪೂಜ್ಯರು ಹೇಳೋಣವಾಗಲಿ. ನನ್ನ ಈ ಸಂದೇಹವನ್ನು ಕೂಡಲೆ ಪರಿಹರಿಸೋಣವಾಗಲಿ.

ಮಹಾತ್ಮನು ನಗುತ್ತ ಹೇಳಿದನು:—ಮಗೂ, ನೀನು ನೋಡಿದು ದೆಲ್ಲವೂ ನಿಜ. ಯಾವ ಹುಡುಗಿಯನ್ನು ಮುಂದೆ ವಿವಾಹವಾಗುವೆನು? ಎಂದು ನೀನು ಕೇಳಿದ ಪ್ರಶ್ನೆಗೇನೇಯೇ ನಾನು ಉತ್ತರವನ್ನು ಈ ಮೂಲಕ ವಾಗಿ ಕೊಟ್ಟಿರುವೆನು. ನಿನ್ನ ಮನಸ್ಸಿಗೆ ತೃಪ್ತಿಯುಂಟಾಯಿತೇ?

ನಾನು ಹೇಳಿದೆನು:—ಸಂತೋಷವೇ? ಇಲ್ಲ, ಅಸಂತೋಷವೇ ಉಂಟಾಗಿದೆ. ಮೊದಲಿಗಿಂತಲೂ ನೂರರಷ್ಟು ಹೆಚ್ಚಿನ ಚಿಂತೆಯು ಈಗ ಉಂಟಾಗಿದೆ. ಪೂಜ್ಯರಿದನ್ನು ಹೇಳೋಣಾಗಲಿ, ಇದೆಲ್ಲವೂ ಎಲ್ಲಿಂದ ಉಂಟಾ ಯಿತು? ಇಂತಹ ದೃಶ್ಯವನ್ನು ನೋಡಲು ನಾನು ಹೇಗೆ ಶಕ್ತನಾದೆನು? ನಾನು ನೋಡಿದ ಆ ಚಿತ್ರವು ಜೀವಿಸಿರುವಂತೆಯೇ ತೋರಿತು. ಏನು? ಇಂತಹ ಇಂದ್ರಜಾಲವೂ ಸಂಭವಿಸುವದೇ?

ಮಹಾತ್ಮನು ಸ್ಥಿರವಾದ ಸ್ವರದಿಂದ ನುಡಿದನು:-ಯಾಕೆ ಸಂಭವಿಸುವ ದಿಲ್ಲ? ಸಂಭವಿಸಲಾರದಾಗಿದ್ದರೆ ನೀನು ಹೇಗೆ ನೋಡಿದೆ? ನಾನು ಮೊದಲೇ ಹೇಳಲಿಲ್ಲವೆ?-ಇಚ್ಛಾಶಕ್ತಿಯ ಪ್ರಭಾವದಿಂದ ಎಲ್ಲವೂ ಸಂಭವಿಸುವದೆಂದು. ಆ ಇಚ್ಛಾಶಕ್ತಿಯ ಮಹಾತ್ಮೆಯನ್ನೇ ನಿನಗೆ ತೋರಿಸಿದೆನು. ಸಾಕು; ಉಳಿದ ವಿಷಯದಿಂದ ನಿನಗೇನು ಲಾಭ? ನಾನೀಗ ವಿಶ್ರಮಿಸಿಕೊಳ್ಳುತ್ತೇನೆ.

ನಾನು ಕೈಮುಗಿದು ವಿನಯದಿಂದ ನುಡಿದೆನು:—ಸ್ವಾಮಿ, ತಾವು ತುಂಬಾ ಉಪಕಾರ ಮಾಡೋಣಾಯಿತು. ಪೂಜ್ಯರ ಅನುಗ್ರಹದಿಂದಲೇ ನಾನೀ ಅದ್ಭುತವಾದ ವ್ಯಾಪಾರವನ್ನು ನೋಡಲು ಶಕ್ತನಾದೆನು; ಆದರೆ

ಇನ್ನು ಒಂದೇ ಒಂದು ವಿಷಯವನ್ನು ತಿಳಿಯಬೇಕೆಂದಿದ್ದೇನೆ. ನಾನು ನೋಡಿದ ಆ ರೇಲ್ವೆ ಸ್ಟೇಶನ್ನಿನ ಹೆಸರೇನು? ಎಂದು.

ಮಹಾತ್ಮನು ಹೇಳಿದನು:-ಮಗೂ, ಇನ್ನು ಮೇಲೆ ನಾನು ಏನನ್ನೂ ಹೇಳಲು ಬಯಸುವದಿಲ್ಲ. ನಿನ್ನ ಪ್ರಾರ್ಥನೆಗೆ ಅನುಸಾರವಾಗಿ ಎಷ್ಟು ಹೇಳಿದೆನೋ, ಎಷ್ಟು ತೋರಿಸಿದೆನೋ ಅಷ್ಟರಿಂದಲೇ ತೃಪ್ತನಾಗು. ನಾನಿಷ್ಟು ತೋರಿಸಿದುದೂ ಕೂಡ ಈ ನಿನ್ನ ಸ್ನೇಹಿತನಿಗಾಗಿ, ಎಂದು ತಿಳಿ. ರಾಮಚಂದ್ರ, ನೀನು ಬೆಳಿಗ್ಗೆ ಇಲ್ಲಿಗೆ ಬಂದಾಗ ನಿನ್ನ ತಂದೆಯ ಹೆಸರನ್ನು ಕೇಳಿ, ನಿನ್ನ ಪರಿಚಯವುಂಟಾಯಿತು. ನಿನ್ನ ತಂದೆಯು ಬಾಲ್ಯದಲ್ಲಿ ನನಗೆ ಸಹಪಾಠಿಯಾಗಿದ್ದನು. ನಾವಿಬ್ಬರೂ ಪೂಜ್ಯರಾದ ಈಶ್ವರಾವಧಾನಿಗಳ ಪಾಠಶಾಲೆಯಲ್ಲಿ ವೇದವನ್ನು ಕಲಿತೆವು. ನಿನ್ನ ತಂದೆಯು ಪಾಠಶಾಲೆ ಮುಗಿದೊಡನೆ ವಿವಾಹ ಮಾಡಿಕೊಂಡನು. ನಾನು ಮಾತ್ರ ಇದೇ ಸ್ಥಿತಿಯಲ್ಲಿದ್ದು, ಅಲ್ಲಲ್ಲಿ ತೀರ್ಥ-ಕ್ಷೇತ್ರಗಳಲ್ಲಿ ತಿರುಗುತ್ತಲಿದ್ದೇನೆ. ಹದಿನಾಲ್ಕು ವರ್ಷಗಳ ಹಿಂದೆ ನಾನಿಲ್ಲಿಗೆ ಬಂದಿದ್ದಾಗ ನಿನ್ನ ತಂದೆಯು ಎಂಟು ವರ್ಷದ ನಿನ್ನನ್ನು ಜೊತೆಯಲ್ಲಿ ಕರೆದುಕೊಂಡು ಬಂದಿದ್ದನು. ಇರಲಿ. ನಿನ್ನ ಸಂತೋಷಕ್ಕಾಗಿಯೇ ಈ ನಿನ್ನ ಸ್ನೇಹಿತನ ಪ್ರಶ್ನೆಗಳಿಗುತ್ತರವನ್ನು ಹೇಳಿದೆನು.

ರಾಮಚಂದ್ರನು ನಮಸ್ಕರಿಸಿ ಹೇಳಿದನು:—ನಾನು ತಿಳಿದಿರಲಿಲ್ಲ, ಸ್ವರ್ಗಸ್ಥನಾದ ನನ್ನ ತಂದೆಗೂ ತಮಗೂ ಸ್ನೇಹವಿರುವದೆಂದು. ನನ್ನ ತಂದೆಯು ಯಾವುದೋ ಒಂದು ಸಮಯದಲ್ಲಿ ಹೇಳಿದ್ದನು:—ಹಿಂದೆ ನನ್ನೊಡನೆ ಓದುತ್ತಿದ್ದ ಸದಾಶಿವ ಬ್ರಹ್ಮಚಾರಿಯೆಂಬೊಬ್ಬರು ಈಗ ಅತ್ಯದ್ಭುತವಾದ ಕೆಲಸಗಳನ್ನು ಮಾಡುತ್ತಿರುವರು ಎಂದು. ಆ ಮಾತು ತಮಗೆ ಸಂಬಂಧಿಸಿದುದೇ ಅಲ್ಲವೆ?

ಮಹಾತ್ಮನು ನಸುನಕ್ಕು ಹೇಳಿದನು:—ಹೌದು. ಸಾಕು, ಪ್ರಕೃತ ವಿಷಯವಿಲ್ಲಿಗೆ ಇರಲಿ. ನಿನಗೇನಾದರೂ ಕೇಳುವ ಆಶೆಯಿರುವುದೇ?

ರಾಮಚಂದ್ರನು ಹೇಳಿದನು:— ತಮ್ಮನ್ನು ನೋಡಿ ಸ್ವರ್ಗದಿಂದಿಳಿದು ಬಂದ ತಂದೆಯಂತೆ ಭಾವನೆಯಾಗಿದೆ. ತಮ್ಮ ಅನುಗ್ರಹದಿಂದ ಈಗ ನನಗೆ ಯಾವುದರಲ್ಲಿಯೂ ಕೊರತೆಯಿಲ್ಲ. ಮತ್ತೇನೆಂದರೆ, ಧರ್ಮದಲ್ಲಿ ಸ್ಥಿರವಾದ ನಂಬಿಕೆಯು ನನಗೆ ಯಾವಾಗಲೂ ಇರಲೆಂಬುದೇ ಪ್ರಾರ್ಥನೆ. ಈ ನನ್ನ

ಕ್ಷೇಹಿತನಾದ ಮಧುರಮೋಹನನು ಎಲ್ಲಿಯೂ ವಿಶ್ವಾಸವಿಡುವದಿಲ್ಲ. ಧರ್ಮ ಮೊದಲಾದವುಗಳೆಲ್ಲವೂ ಮೋಸಗಾರರವೆಂದು ವಾದಿಸುತ್ತಾನೆ. ಈ ವಿಷಯ ದಲ್ಲಿ ನನ್ನೊಡನೆ ಯಾವಾಗಲೂ ಜಗಳಾಡುತ್ತಿರುತ್ತಾನೆ. ಈಗ ಪೂಜ್ಯರು ಈತನ ಸಂಶಯವನ್ನು ಪರಿಹರಿಸಿ ಬಹಳ ಉಪಕಾರವನ್ನು ಮಾಡಿದರು. ಪೂಜ್ಯರೇನಾದರೂ ಸೇವೆ ಮಾಡಲು ಆಜ್ಞಾಪಿಸಿದರೆ ನಾನು ಧನ್ಯನಾಗುತ್ತಿದ್ದೆನು. ನಾಳೆ ತಿರುಗಿ ಪೂಜ್ಯರ ಭೇಟಿಯಾಗಬಹುದಲ್ಲವೇ?

ಮಹಾತ್ಮನು ಹೇಳಿದನು:-ನನ್ನದು ಯಾವುದೂ ನಿಶ್ಚಯವಿಲ್ಲ. ನಾಳೆಯೇ ಇಲ್ಲಿಂದ ಹೊರಟು ಹೋದರೂ ಹೋಗಬಹುದು. ಹೇಗಿದ್ದರೂ ಸರಿ. ನೀವಿಬ್ಬರಿನ್ನು ಮುಂದೆ ಇಲ್ಲಿಗೆ ಬರಲಾಗದು. ಈಗ ನೋಡಿದ ಈ ಅದ್ಭುತ ವ್ಯಾಪಾರವನ್ನು ಮತ್ತೆಲ್ಲಿಯೂ ಚರ್ಚಿಸಲೂ ಕೂಡದು. ಈ ಸಂಗತಿಯು ಅನ್ಯರ ಕಿವಿಗೆ ಬೀಳುವುದು ನನಗೆ ರುಚಿಸದು. ನಂಬಿಕೆಯಿಲ್ಲದ ಜನಗಳಿವನ್ನು ಕೇಳಿದರೆ ಸುಮ್ಮನೆ ಪರಿಹಾಸಮಾಡುವರು. ಆದ್ದರಿಂದಿದನ್ನು ನಂಬಿಕೆಯಿಲ್ಲದವರಲ್ಲಿ ಎಂದಿಗೂ ಪ್ರಕಟಿಸಬಾರದು. ಸಾಕು, ನೀವಿಬ್ಬರಿನ್ನು ತೆರಳಿರಿ. ಕಲ್ಯಾಣ ಸ್ವರೂಪಿಯಾದ ಈಶ್ವರನು ನಿಮಗೆ ಶುಭವನ್ನುಂಟುಮಾಡಲಿ. ನೀವಿಲ್ಲಿಗೆ ಬಂದು ಬಹಳ ಹೊತ್ತಾಯಿತು.

ಆ ಮೇಲೆ ನಾವು ಮಹಾತ್ಮನಿಗೆ ವಂದಿಸಿ, ಗುಡಿಸಿಲಿನಿಂದ ಹೊರಗೆ ಬಂದೆವು. ಸ್ವಲ್ಪ ದೂರ ಹೋದ ಮೇಲೆ ರಾಮಚಂದ್ರನನ್ನು ಕೇಳಿದೆ:— ಗುಡಿಸಿಲಲ್ಲಿ ಏನೋ ನೋಡಿದೆವಷ್ಟೇ? ಆ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು?

ರಾಮಚಂದ್ರನು ಹೇಳಿದನು:—ನೋಡಿದ್ದರೆ ತಾನೇ ಅಭಿಪ್ರಾಯ ಕೇಳುವುದು? ನಾನಲ್ಲಿ ಏನನ್ನೂ ನೋಡಲಿಲ್ಲ. ಹೀಗಿರುವಾಗ ನಾನೇನು ಹೇಳಲಿ?

ನಾನು ಆಶ್ಚರ್ಯದಿಂದ ಕೇಳಿದೆ:—ಎಲಾ! ನೀನು ಹಾಸ್ಯಮಾಡುತ್ತೀಯಾ? ಆ ರೇಲ್ವೆ ಸ್ಟೇಶನ್ನು; ಮತ್ತಲ್ಲಿ ಹಳದೀ ಸೀರೆಯನ್ನುಟ್ಟಿದ್ದ ಆ ಸುಂದರ ತರುಣಿ ಇದ್ಯಾವುದನ್ನೂ ನೀನು ನೋಡಲಿಲ್ಲವೆ?

. ರಾಮಚಂದ್ರನು ಗಂಭೀರ ಸ್ವರದಿಂದ ಹೇಳಿದನು:-ನಾನು ನಿಜವಾಗಿಯೂ ಹೇಳುತ್ತೇನೆ. ನಾನು ನಿನ್ನ ಪಕ್ಕದಲ್ಲಿಯೇ ಕುಳಿತಿದ್ದೆನು. ಆ ಮನಕು

ಮಸಕಾದ ಬೆಳಕಿನಲ್ಲಿ ಕಾಲು ಮಣೆಯ ಮೇಲ್ಗಡೆಯಿದ್ದ ಮಣ್ಣಿ ಹೆಂಟೆ ಮಾತ್ರವಲ್ಲದೆ ಇನ್ನಾವುದೂ ನನಗೆ ಕಾಣಿಸಲಿಲ್ಲ. ನೀನೇ ಹೇಳು. ಆಗ ನೀನಲ್ಲಿ ಏನನ್ನು ನೋಡಿದೆ? ಅಲ್ಲಿ ಮಹಾತ್ಮನ ಸನ್ನಿಧಾನದಲ್ಲಿದ್ದಾಗ ನಿನ್ನ ಹತ್ತಿರ ಏನನ್ನೂ ಕೇಳಲಾಗಲಿಲ್ಲ.

ನಾನಲ್ಲಿ ನೋಡಿದುದೆಲ್ಲವನ್ನೂ ರಾಮಚಂದ್ರನಿಗೆ ಹೇಳಿದೆನು. ಅದನ್ನು ಕೇಳಿ ಅವನು ಹೇಳಿದನು:-ಈ ಪ್ರಭಾವವು ಮಹಾತ್ಮನದೇ ಸರಿ. ಆತನ ಅನುಗ್ರಹದಿಂದಲೇ ನೀನಿದನ್ನು ನೋಡಿದೆ. ನೀನು ನೋಡಿದ ದೃಶ್ಯದಲ್ಲಿ ಜೀವವಿರುವಂತೆಯೇ ಕಾಣಿಸಿತೆ? ಅಥವಾ ಬರಿಯ ಕಣ್ಣಿನ ಭ್ರಮೆಯೇ?

ನಾನು ನಿಶ್ಚಯ ಧ್ವನಿಯಿಂದ ಹೇಳಿದೆನು:—ಖಂಡಿತವಾಗಿಯೂ ಜೀವವಿರುವ ದೃಶ್ಯವನ್ನೇ ನೋಡಿದೆನು. ಸಂಶಯವಿಲ್ಲ; ಆಕೆಯು ಬಹು ಚೆನ್ನಾಗಿದ್ದಳು. ನಾನು ಜೀವವಿರುವ ವರೆಗೂ ಆ ಸುಂದರಿಯ ಚಿತ್ರವನ್ನು ಮರೆಯಲಾರೆನು. ನಾನೆಷ್ಟು ಆಲೋಚನೆ ಮಾಡಿದರೂ ಕೂಡ ಇದು ಮಾತ್ರ ಮನಸ್ಸಿಗೆ ಹಿಡಿಯುವದಿಲ್ಲ:—ಈ ಪ್ರಕಾರವಾಗಿ ನೋಡಲು ನಾನು ಹೇಗೆ ಶಕ್ತನಾದೆನು? ಮಹಾತ್ಮನಾದರೂ ಆ ಮಣ್ಣಿನ ಹೆಂಟೆಯಲ್ಲಿ ವಿಚಿತ್ರ ತರವಾದ ಈ ನಾಟಕವನ್ನು ಯಾವ ಶಕ್ತಿಯಿಂದ ತೋರಿದನು? ನನ ಗೇನೋ ಮಹಾತ್ಮನು ಸ್ವಲ್ಪ ಮೆಸ್ಮರಿಜಂ ವಿದ್ಯೆಯನ್ನರಿತಿರುವನೆಂದು ತೋರುತ್ತದೆ. ಆದ್ದರಿಂದ ನಾನು ಬರಿಯ ಮಾಯೆಯಲ್ಲಿ ಬಿದ್ದುಬಿಟ್ಟೆನು.

ರಾಮಚಂದ್ರನು ಹೇಳಿದನು:—ಸರಿ. ನಿನಗೆ ತಿರುಗಿ ಸಂಶಯ ಪಿಶಾಚಿ ಹಿಡಿಯಿತು. ಆ ಸಂಸ್ಕಾರವು ಬಲವಾದುದಲ್ಲವೆ? ಮಹಾತ್ಮನ ಯೋಗ ಸಾಮರ್ಥ್ಯದಿಂದ ಇಂತಹ ಲೋಕೋತ್ಕೃಷ್ಟವಾದ ಅದ್ಭುತ ಚಮತ್ಕಾರ ವನ್ನು ನೀನೇ ನಿನ್ನ ಕಣ್ಣಿನಿಂದ ನೋಡಿದರೂ ಕೂಡ ಹೇಳುತ್ತಿರುವೆ, ಮಹಾತ್ಮನು ಮೆಸ್ಮರಿಜಂ ವಿದ್ಯೆಯನ್ನರಿತಿರುವನೆಂದು. ಇರಲಿ. ಮಹಾತ್ಮನು ಏನನ್ನಾದರೂ ತಿಳಿದಿರಲಿ. ಅದರಿಂದ ನಿನಗೇನು ಬಾಧೆ? ಹೇಗಿದ್ದರೂ ಸ್ವಲ್ಪ ದಿನಗಳೊಳಗೆ ಆತನ ನುಡಿ ನಿಜವೇ-ಸುಳ್ಳೇ? ಎಂಬುದು ನಿನಗೇ ತಿಳಿದೀತು.

ನಾನು ಹೇಳಿದೆನು:—ಹುಂ, ಇದು ನಿಜ. ಹತ್ತು-ಹದಿನೈದು ದಿನ ಗಳೊಳಗೆ ಆತನ ಒಂದು ಮಾತಿನ ನಿಜಾಂಶವು ತಿಳಿದು ಹೋಗುತ್ತದೆ. ಈಗ ನಿನಗೆ ವಿವಾಹದ ಮುಹೂರ್ತವೇ ಇಲ್ಲ, ಎಂಬ ಮಹಾತ್ಮನ ನುಡಿಯೂ

ಕೂಡ ನನಗೀಗ ವಿವಾಹವಾಯಿತೆಂದರೆ ಸುಳ್ಳೇ ಆಗುವದು. ಆ ಸಮಯ ದಲ್ಲಿ ಆ ದೃಶ್ಯವೆಲ್ಲವೂ ನಿಜವೆಂದೇ ತಿಳಿದುಬಿಟ್ಟಿದ್ದೆನು; ಆದರೆ ಈಗ ಅದೆಲ್ಲ ವೂ ಆ ಮಾಯಾವಿಯ ಮಾಯೆಯೇ ಸರಿಯೆಂದು ಊಹಿಸುತ್ತಿದ್ದೇನೆ. ಯಾರೆದುರಿಗಾದರೂ ತನ್ನ ಮಾಯಾಸಾಮರ್ಥ್ಯದಿಂದ ಕಾಲ್ಪನಿಕವಾದ ಚಿತ್ರವನ್ನಿಟ್ಟು ತೋರಿಸಬಲ್ಲವನವನು; ಆದರೆ ಆತನು ತೋರಿಸಿದ ಚಿತ್ರವು ಮಾತ್ರ ನಿಜವಾದುದು. ಆ ಚಿತ್ರ ನನ್ನ ಮುಂದಿನ ಜೀವನಕ್ಕೆ ಸಂಬಂಧಿಸಿ ದುದೆಂಬದನ್ನು ಮಾತ್ರ ನಂಬಲಾರೆ. ಹತ್ತು-ಹದಿನೈದು ದಿವಸಗಳೊಳಗೆ ನಿಜಸ್ಥಿತಿಯನ್ನು ನಾವೇ ನೋಡಬಹುದು. ಆತ ಸಿದ್ಧ ಪುರುಷ, ತ್ರಿಕಾಲ ಜ್ಞಾನಿ, ಮಹಾತ್ಮ ಎಂಬುದನ್ನು ಕಾಲವೇ ತೋರಿಸೀತು; ಆದರೆ ಆ ವ ನುಷ್ಯನಲ್ಲಿ ಏನೋ ಒಂದು ವಿಶೇಷ ಗುಣವಿದೆಯೆಂಬದನ್ನೇನೋ ಸ್ವೀಕರಿಸುತ್ತೇನೆ.

ರಾಮಚಂದ್ರನು ಹೇಳಿದನು:—ಒಳ್ಳೇದು. ಇಷ್ಟನ್ನಾದರೂ ಒಪ್ಪುವೆ ಯಲ್ಲವೆ? ಉಳಿದುದನ್ನು ಕಾಲವೇ ನಿನ್ನನ್ನು ಒಪ್ಪುವಂತೆ ಮಾಡುವುದು.

ನಾನು ಮನೆಗೆ ಹಿಂದಿರುಗಿದೆನು. ರಾತ್ರಿಯ ಎರಡನೇ ಯಾಮವಾಗಿ ದ್ದಿತು ಆಗ. ಆಗಲೂ ಕೂಡ ನಮ್ಮ ಮನೆಯಲ್ಲಿ ವಿವಾಹಕ್ಕಾಗಿ ಏನೇನೋ ಕೆಲಸಗಳನ್ನು ಮಾಡುತ್ತಿದ್ದರು. ನಾನು ಮನೆಗೆ ತಲ್ಪಿದೊಡನೆ ಯಾವಾಗ ವಿವಾಹವೆಂಬುದನ್ನೂ ಆ ಮೂವರಲ್ಲಿ ಯಾವ ಹುಡುಗಿಯು ನಿಶ್ಚಯಿಸ-ಲ್ಪಟ್ಟಳೆಂಬದನ್ನೂ ನನಗೆ ಹೇಳಿದರು. ಎಲ್ಲವೂ ನಿಶ್ಚಯವಾಯಿತು. ನಾನು ಮಹಾತ್ಮನ ಯಾವ ಸಂಗತಿಯನ್ನೂ ಯಾರ ಹತ್ತಿರವೂ ಹೇಳಲಿಲ್ಲ. ನಾನಲ್ಲಿ ನೋಡಿದ್ದ ಆ ಸುಂದರಿಯ ಚಿತ್ರವನ್ನೇ ಧ್ಯಾನಿಸುತ್ತ ಮಲಗಿ ಕೊಂಡೆನು. ಮೆಲ್ಲಮೆಲ್ಲನೆ ನಿದ್ರೆಯೂ ಬಂದಿತು.

೪

ಯಾರದೋ ಕೂಗನ್ನು ಕೇಳಿ ಬೆಳಗಿನ ಜಾವದಲ್ಲಿಯೇ ಎಚ್ಚತ್ತೆನು. ಮಧುರ-ಮಧುರ, ಏಳು-ಏಳು.

ನಾನೆದ್ದು ಕುಳಿತೆನು ಹತ್ತರದಲ್ಲಿಯೇ ನಿಂತಿದ್ದ ತಾಯಿಯನ್ನು ನೋಡಿದೆನು. ನಾನು ಕೇಳಿದೆನು:—ಏನಮ್ಮಾ, ಏನು?

ಆಕೆಯು ಹೇಳಿದಳು:-ಮಗೂ, ತಂತಿಯವನು ಬಂದಿದ್ದಾನೆ. ರುಜು ಹಾಕಿ ತಂತಿಯನ್ನು ತೆಗೆದುಕೋ

ತಂತಿ! ತಂತೀ ವಾರ್ತೆ! ಎಂತಹ ತಂತೀ ವಾರ್ತೆ? ಎಲ್ಲಿಂದ ಬಂದಿತು? ಯಾರು ಕಳುಹಿಸಿದರು? ಕೇಳಿದೊಡನೆ ಗಾಬರಿಯಾದೆನು. ಮನಸ್ಸಿಗೆ ಭಯ ವಾಯಿತು. ಒಡನೆ ಮಹಾತ್ಮನಾಡಿದ ಮಾತು ನೆನಪಾಯಿತು. ಮಹಾತ್ಮನು ಹೇಳಿದ್ದನು:- ಪ್ರಯತ್ನಪಟ್ಟರೂ ವಿವಾಹವೀಗ ಆಗಲಾರದು ಎಂದು. ಈ ತಂತೀ ವಾರ್ತೆಯು ಏನೋ ವಿಘ್ನ ಹೊತ್ತುಕೊಂಡು ಬಂದು ಬಿಟ್ಟಿರುವುದೇ?

ಈ ರೀತಿಯಾಗಿ ನನ್ನ ಮನಸ್ಸಿನ ದುರ್ಬಲತೆಯನ್ನು ನೋಡಿ ನಾನೇ ನಕ್ಕುಬಿಟ್ಟೆನು. ನನ್ನ ಮನಸ್ಸಿನ ಭಾವವನ್ನು ಮುಚ್ಚಿಕೊಂಡು ತಾಯಿ ಯನ್ನು ಕೇಳಿದೆನು:- ಏನಮ್ಮಾ ತಂದೆಯು ಮನೆಯಲ್ಲಿಲ್ಲವೆ?

ಆಕೆಯು ಹೇಳಿದಳು:—ಇಲ್ಲ. ಸ್ವಲ್ಪ ಮುಂಚೆ ಎದ್ದು ವಿವಾಹ ಮುಹೂರ್ತದ ವಿಷಯದಲ್ಲೇನೋ ಮಾತನಾಡಿಕೊಂಡು ಬರಲು ಜೋಯಿ ಸರ ಮನೆಗೆ ಹೋದರು. ನಾನೆದ್ದು ಹೊರಗೆ ಬಂದೆನು. ರುಜು ಮಾಡಿ ತಂತೀ ಕಾಗದವನ್ನು ತೆಗೆದುಕೊಂಡು ಓದಿದೆನು. ಅದರಲ್ಲಿ ಹೀಗಿತ್ತು:—

ತಂದೆ ಹಾಸಿಗೆ ಹಿಡಿದಿದ್ದಾನೆ. ಹಾಸಿಗೆಯಿಂದೇಳುವ ಆಶೆಯೇ ಇಲ್ಲ. ತಂತಿ ನೋಡಿದೊಡನೆ ಹೊರಟು ಬರಬೇಕು. ಲಕ್ಷ್ಮೀಕಾಂತ

ನಾನಿದ್ದ ಕಾರ್ಖಾನೆಯ ಯಜಮಾನರ ಮಗನಾದ ಲಕ್ಷ್ಮೀಕಾಂತನು ಆ ತಂತಿಯನ್ನು ಕಳುಹಿಸಿದ್ದನು. ಇದೇನು! ಅಕಸ್ಮಾತ್ತಾಗಿ ನಮ್ಮ ಕಾರ್ಖಾ ನೆಯ ಯಜಮಾನನಿಗೇನಾಗಿದೆ? ನಾನು ಒಂದು ತಿಂಗಳ ರಜೆಯನ್ನು ತೆಗೆದು ಕೊಂಡು ಹೊರಟು ಬರುವಾಗ ಯಜಮಾನನು ಆರೋಗ್ಯವಾಗಿ ದೃಢವಾಗಿ ದ್ದನು. ಬರುವಾಗ ನನ್ನ ಹತ್ತಿರ ಹೇಳಿದ್ದನು:-ಮಧುರ, ಸಾಧ್ಯವಾದಷ್ಟು ಬೇಗನೆ ಹಿಂದಿರ ಗಿ ಬಾ ನಿನಗೆ ತಿಳಿದೇ ಇದೆ, ನಿನ್ನಷ್ಟು ಇಲ್ಲಿ ಯಂತ್ರದ ಮಾಹಿತಿ ಇರುವವನು ಇನ್ನಾ್ಯರೂ ಇಲ್ಲವೆಂದು.

ಏನಾದರೂ ಯಂತ್ರದ ದುರ್ಘಟನೆಯೊದಗಿತೇ? ಯಾವುದಾದರೂ ದೊಡ್ಡ ರೋಗಕ್ಕೆ ತುತ್ತಾದನೆ? ಈ ರೀತಿ ಯೋಚಿಸುತ್ತಾ ತಲೆಯ ಮೇಲೆ ಕೈಯಿಟ್ಟುಕೊಂಡು ಕ್ಷಣಕಾಲ ನಿಂತಲ್ಲಿಯೇ ನಿಂತುಬಿಟ್ಟೆನು. ನನ್ನ ಯಜ ಮಾನನ ಸೌಜನ್ಯವನ್ನೂ, ಕೆಲಸಗಾರರಲ್ಲಿರುವ ಪ್ರೀತಿ-ವಿಶ್ವಾಸಗಳನ್ನೂ

ದಯೆಯನ್ನೂ, ಗಾಂಭೀರ್ಯವನ್ನೂ, ಕಾರ್ಯಕೌಶಲ್ಯವನ್ನೂ ಯೋಚಿಸಿ, ನನ್ನ ಕಣ್ಣುಗಳು ನೀರು ತುಂಬಿದವು. ನಾನು ಮನೆಯೊಳಗೆ ಬರದೆ ಹೊರಗೇ ಸುಮ್ಮನೆ ನಿಂತದ್ದನ್ನು ನೋಡಿ ನನ್ನ ತಾಯಿಯು ಕೂಗಿ ಕೇಳಿದಳು:— ಮಗೂ, ತಂತಿಯನ್ನು ಕಳುಹಿಸಿದವರು ಯಾರು? ಎಲ್ಲಿಂದ ಬಂದಿದೆ?

ನಾನು ತಾಯಿಯು ಹತ್ತರ ಹೋಗಿ ತಂತಿಯ ಸಂಗತಿಯನ್ನು ತಿಳಿಸಿದೆನು. ಆಕೆಯು ಗಾಬರಿಯಾಗಿ, ಚಿಂತೆಯಿಂದ ಹೇಳಿದಳು:—ಇದೇನೋ ಒಂದು ಘೋರವಾದ ಅನಿಷ್ಟವು ಒದಗಿದೆ; ಆದರೆ ನೀನೀಗ ಅಲ್ಲಿಗೆ ಹೋಗಲಾಗುವದಿಲ್ಲ; ಅಲ್ಲಿಗೆ ಬೇರೆ ಯಾರನ್ನು ಕಳುಹಿಸುತ್ತೀ?

ನಾನು ಹೇಳಿದೆನು:—ಅಲ್ಲಿಗೀಗ ನಾನೇ ಹೋಗುವದು ಅಗತ್ಯವಾಗಿದೆ. ಯಾಕಂದರೆ, ಕಾರ್ಖಾನೆಯಲ್ಲಿ ಯಂತ್ರ ನಡೆಸ ವದನ್ನು ಚೆನ್ನಾಗಿ ತಿಳಿದವರು ನಾನು ಮತ್ತು ಕಾರ್ಖಾನೆಯ ಯಜಮಾನನು ಮಾತ್ರ. ಬೇರೆಯವರೀಗಲ್ಲಿಗೆ ಹೋದರೇನು ಪ್ರಯೋಜನ? ಅಲ್ಲದೆ ಯಜಮಾನನ ಮಗನು ನನ್ನನ್ನೇ ಬರಲು ತಿಳಿಸಿರುವನು.

ತಾಯಿಯು ಹೇಳಿದಳು:—ಹಾಗಾದರೆ ಈಗ ಏನು ಮಾಡೋಣ? ವಿವಾಹದ ಎಲ್ಲ ಸಂಭಾರಗಳೂ ಸಿದ್ಧವಾಗಿವೆ. ನಿಶ್ಚಯಿಸಿದ ಈ ಮುಹೂರ್ತದಲ್ಲಿ ವಿವಾಹವು ಜರುಗದೆ ಇದ್ದರೆ, ನಾನಿಲ್ಲಿ ಮುಖ ತೋರಿಸಲು ಸಾಧ್ಯವೇ ಇಲ್ಲ. ಖಂಡಿತವಾಗಿಯೂ ನೀನು ಅಲ್ಲಿಗೆ ಹೋಗಬೇಕೆಂದಿದ್ದರೆ ವಿವಾಹವಾದ ನಾಲ್ಕನೇ ದಿನವೇ ಹೊರಡಬಹುದು

ನಾನು ಹೇಳಿದೆನು:—ಅಮ್ಮಾ, ನೀನು ಹೇಳಿದಂತೆಯೇ ನಾನು ಮಾಡಬಲ್ಲೆನು. ಚೆನ್ನಾಗಿ ಆನಂದವನ್ನು ಅನುಭವಿಸಿಸೇನು; ಆದರೆ ವಿಚಾರ ಮಾಡು. ತಂತಿಯಲ್ಲಿ ಬರೆದಿದೆ-ಯಜಮಾನನು ತುಂಬಾ ವಿಪತ್ತಿಗೆ ಸಿಲುಕಿದ್ದಾನೆ; ಈ ಆಪತ್ತಿನಿಂದ ಬಿಡುಗಡೆಯಾಗುವ ಆಶೆಯಿಲ್ಲ ಎಂದು. ಇಂತಹ ಸ್ಥಿತಿಯಿರುವಾಗ ವಿವಾಹಕ್ಕಾಗಿ ನಾನಿಲ್ಲಿ ನಿಲ್ಲುವುದು ಶೋಭಿಸೀತೇ? ಇದುವರೆಗೂ ಯಾವ ಯಜಮಾನನ ಉಪ್ಪನ್ನು ತಿಂದೆನೋ, ಆ ಯಜಮಾನ ನೀಗ ಹಾಸಿಗೆ ಹಿಡಿದಿದ್ದಾನೆ. ಒಡನೆಯೇ ಬರಬೇಕು, ಎಂದು ತಂತಿ ಬಂದರೂ ಕೂಡ ನಾನಿಲ್ಲಿ ನಿಂತರೆ ಉಭಯ ಲೋಕಕ್ಕೂ ಭ್ರಷ್ಟನೆನಿಸುವೆನು. ಇದೆಲ್ಲವನ್ನೂ ಯೋಚಿಸಿ ನಾನು ಮಾಡಬೇಕಾದುದನ್ನು ಹೇಳು.

ತಾಯಿಯು ಮುಂದೆ ಮಾತನಾಡದೆ ಸುಮ್ಮನಾದಳು. ಆಕೆಯು ಏನು ತಾನೆ ಹೇಳಿಯಾಳು? ಸುಮ್ಮನಿದ್ದರೂ ಕೂಡ ಮುಖದ ಸ್ಥಿತಿಯಿಂದ ಮನಸ್ಸಿನಲ್ಲಿ ಏನಿರುವುದೆಂಬುದು ಹೊಳೆಯುತ್ತಿತ್ತು. ಬಹು ಕಾಲದಿಂದ ಆಕೆ ನನ್ನ ವಿವಾಹದಲ್ಲಿ ಪ್ರಯತ್ನಿಸುತ್ತಿದ್ದಳು. ಇದುವರೆಗೂ ನಾನೇ ವಿವಾಹಕ್ಕೆ ತಡೆಯಾಗಿದ್ದೆನು. ಹೇಗೋ ನಾನು ಈಗ ಒಪ್ಪಿರುವಾಗ ಅಕಸ್ಮಾತ್ತಾಗಿ ಇದೊಂದು ದೊಡ್ಡ ತಡೆಯು ಒದಗಿತು. ಕಣ್ಣುಗಳು ನೀರಿನಿಂದ ತುಂಬಿದವು. ನಾನಲ್ಲಿ ನಿಲ್ಲಲಾರದೆ, ಕಷ್ಟದಿಂದ ಮನಸ್ಸನ್ನು ಬಿಗಿಹಿಡಿದು ನನ್ನ ಕೋಣೆಯ ಕಡೆಗೆ ಹೋದೆನು. ಅಲ್ಲಿ ಆರಾಮ ಕುರ್ಚಿಯ ಮೇಲೆ ಅರ್ಧ ಮಲಗಿಕೊಂಡು ಆಲೋಚಿಸಿದೆನು:-ಆಶ್ಚರ್ಯವಾಗಿದೆ. ಅಕಸ್ಮಾತ್ತಾಗಿ ಇಂತಹ ದುಃಖದಾಯಕವಾದ ದುರ್ಘಟನೆಯು ಹೇಗೆ ಒದಗಿತು? ಒಂದು ಗಂಟೆಗಿಂತ ಮೊದಲು ಇದು ಸಂಭವಿಸೀತೆಂದು ಕನಸಿನಲ್ಲಿಯೂ ಊಹಿಸಿರಲಿಲ್ಲ. ರಾಮಚಂದ್ರನೊಡನೆ ಕುತೂಹಲಕ್ಕಾಗಿ ಆ ಮಹಾತ್ಮನ ಹತ್ತಿರ ಹೋಗಿ, ಅವನಿಂದ ಯಾವ ಮಾತನ್ನು ಕೇಳಿದ್ದೆನೋ ಅದೀಗ ನಿಜವಾಯಿತೆಂದು ತೋರುತ್ತದೆ. ಖಂಡಿತವಾಗಿಯೂ ಮಹಾತ್ಮನಲ್ಲಿ ಏನೋ ಒಂದು ವಿಶೇಷವಾದ ಶಕ್ತಿ ಇದೆ. ನಾನೀಗ ತಿರುಗಿ ಆ ಮಹಾತ್ಮನ ಹತ್ತಿರಕ್ಕೆ ಹೋಗಿ, ನಮ್ಮ ಕಾರ್ಖಾನೆಯ ಯಜಮಾನನ ವಿಷಯದಲ್ಲಿ ಪ್ರಶ್ನೆ ಕೇಳಲೊ? ಆದರೆ ಮಹಾತ್ಮನು ತಿರುಗಿ ಭೇಟಿಗೆ ಬರಲಾಗದೆಂದು ಹೇಳಿಬಿಟ್ಟಿರುವನು. ಏನು ಮಾಡಲೀಗ?

ಇಷ್ಟರಲ್ಲಿ ಜೋಯಿಸರ ಮನೆಗೆ ಹೋಗಿದ್ದ ತಂದೆಯು ಹಿಂದಿರುಗಿ ಬಂದು ತಂತಿಯ ಸಂಗತಿಯನ್ನು ಕೇಳಿ ತಿಳಿದನು. ಕಾರ್ಖಾನೆಯ ಯಜಮಾನನಿಗೂ ನಮ್ಮ ತಂದೆಗೂ ಬಹಳ ಕಾಲದಿಂದ ಸ್ನೇಹವಿತ್ತು. ತಂತಿಯ ಸಮಾಚಾರವನ್ನು ಕೇಳಿ ತಂದೆಯ ಮನಸ್ಸು ಮರುಗಿತು. ದುಃಖವನ್ನು ನುಂಗಿಕೊಂಡು ವಿವಾಹದ ಸಾಮಗ್ರಿಗಳೆಲ್ಲ ವ್ಯರ್ಥವಾಗುವುವೆಂಬದನ್ನು ಎಣಿಸದೇನೆಯೇ ನನ್ನ ಹತ್ತಿರ ಹೇಳಿದನು:—ಹಾಗೂ, ಮಧುರ, ನಿನಗೆ ತಿಳಿದೇ ಇದೆ—ಕಳೆದೆರಡು ತಿಂಗಳಿಂದ ವಿವಾಹ ವಿಷಯದಲ್ಲಿ ಬೇಕಾದಷ್ಟು ಓಡಿಯಾಡಿ ಸಾಕಾಗಿದೆ; ಹಣವೂ ತಕ್ಕಮಟ್ಟಿಗೆ ಖರ್ಚಾಗಿದೆ; ಮತ್ತು ನಿನ್ನ ತಾಯಿಯೂ ಕೂಡ ನಿನ್ನ ವಿವಾಹ ವಿಷಯದಲ್ಲಿ ಎಷ್ಟು ಉತ್ಕಂಠಿತಳಾಗಿರುವಳೆಂಬದು ನಿನಗೇನೂ ತಿಳಿಯದಿರುವ ಸಂಗತಿಯಲ್ಲ. ಈ ಮುಹೂರ್ತದಲ್ಲಿ

ಈ ಶುಭಕಾರ್ಯವನ್ನು ಮುಗಿಸದೆ ಆಕೆಯು ಸುಮ್ಮನಿರುವದಿಲ್ಲ. ಆದರೂ ಕೂಡ ನಿನ್ನ ಕರ್ತವ್ಯವನ್ನು ತಿಳಿದಿರುವೆನು. ಈಗ ನೀನು ಈ ವಿವಾಹದ ವಿಚಾರ ಬಿಟ್ಟು ಕಲ್ಕತ್ತೆಗೆ ಹೋಗಲಿಚ್ಛಿಸುತ್ತಿದ್ದರೆ, ನಾನು ನಿನಗೆ ತಡೆಯುಂಟು ಮಾಡೆನು

ನಾನು ಹೇಳಿದೆನು:—ವಿವಾಹವು ಯಾವಾಗಲಾದರೂ ಆಗಬಹುದು. ಮರಣಶಯ್ಯೆಯಲ್ಲಿರುವ ಮನುಷ್ಯನು ಮಾತ್ರ ಶುಭಕೆಲಸವನ್ನಾಗಲಿ, ಅಶುಭ ಕೆಲಸವನ್ನಾಗಲಿ ಯಾವುದನ್ನೂ ಪ್ರತೀಕ್ಷಿಸಲಾರನು. ಈಶ್ವರನು ತೋರಿಸಿದ ದಾರಿಯಲ್ಲಿ ಹೋಗಬೇಕಾಗಿದೆ. ಇಂತಹ ಕಾಲದಲ್ಲಿ ನಾನಲ್ಲಿಗೆ ಹೋಗದೆ ಇಲ್ಲಿ ಸುಖಲೋಲುಪನಾಗಿ ಕುಳಿತರೆ, ಕರ್ತವ್ಯಕರ್ಮದಲ್ಲಿ ಭ್ರಷ್ಟನೆನಿಸದಿರಲಾರೆನು; ನನ್ನ ಉದ್ಯೋಗಕ್ಕೂ ತೊಂದರೆ ಬರಬಹುದು.

ತಂದೆಯು ಹೇಳಿದನು:—ಹಾಗಾದರೆ ವಿಲಂಬಿಸದೆ ಹೊರಡು. ಮಧ್ಯಾಹ್ನದ ಎಕ್ಸ್‌ಪ್ರೆಸ್ ಬಂಡಿಗೇ ಹೊರಟುಬಿಡು. ಅಲ್ಲಿಗೆ ಹೋದೊಡನೆ ಅಲ್ಲಿನ ಸ್ಥಿತಿಯನ್ನು ತಿಳಿಸು. ಯಜಮಾನನಿಗೆ ಸ್ವಲ್ಪ ಗುಣಾಂಶವಿದ್ದರೆ ನೀನು ಬೇಗನೆ ಹಿಂದಿರುಗಿ ಬಾ. ಹಾಗಲ್ಲದೆ ವಿಪರೀತವೇ ಆದರೆ, ಅದನ್ನೂ ತಿಳಿಸು.

ಅದೇ ದಿನ ನಾನು ಕಲ್ಕತ್ತೆಗೆ ಹೊರಟೆನು. ಕಾರ್ಖಾನೆಯ ಕಚೇರಿಗೆ ಹೋದೊಡನೆಯೇ ಎಲ್ಲ ಸಂಗತಿಯೂ ತಿಳಿಯಿತು. ಯಜಮಾನನು ಕಾರ್ಖಾನೆಯನ್ನು ನೋಡಲು ಬಂದಿದ್ದ ಒಬ್ಬ ದೊಡ್ಡ ಮನುಷ್ಯನಿಗೆ ಯಂತ್ರವನ್ನು ತೋರಿಸುತ್ತ ಬರುತ್ತಿರುವಾಗ, ತಿರುಗುತ್ತಿದ್ದ ಒಂದು ಚಕ್ರವು ಅಕಸ್ಮಾತ್ತಾಗಿ ತಲೆಗೆ ತಗಲಿ ಬಿದ್ದುಬಿಟ್ಟನು. ಒಡನೆಯೇ ಹಾಹಾಕಾರವಾಗಿ, ಪ್ರಯತ್ನಪಟ್ಟು, ಯಂತ್ರವನ್ನು ನಿಲ್ಲಿಸಿದಾಗ್ಯೂ ಕೂಡ, ದುರದೃಷ್ಟದಿಂದ ಆತನ ಕಾಲುಗಳೆರಡೂ ತುಂಡಾಗಿ ಹೋಗಿದ್ದವು ಒಡನೆಯೆ ನೂರಾರು ಪ್ರಸಿದ್ಧ ಡಾಕ್ಟರುಗಳು ಬಂದು ನೋಡಿದರು. ಪ್ರಾಣವು ನಿಲ್ಲುವಂತೆ ತೋರಲಿಲ್ಲ.

ಯಜಮಾನನು, ನಾನು ಇಬ್ಬರನ್ನು ಬಿಟ್ಟು ಬೇರೆ ಯಾರಿಗೂ ಯಂತ್ರ ನಡೆಸುವ ಮಾಹಿತಿಯು ಚೆನ್ನಾಗಿಲ್ಲವಾದ್ದರಿಂದ, ಕಾರ್ಖಾನೆಯ ಮುಂದಿನ ಕೆಲಸಕ್ಕಾಗಿ ಯಜಮಾನನ ಮಗನು ನನಗೇ ತಂತಿ ಕಳುಹಿಸಿದ್ದನು.

ಈ ಎಲ್ಲ ಸಂಗತಿಯನ್ನು ತಂದೆಗೆ ತಂತಿಯ ಮೂಲಕವಾಗಿ ಒಡನೆಯೇ ತಿಳಿಸಿದೆನು. ಸದ್ಯದಲ್ಲಿ ಮನೆಗೆ ಹಿಂದಿರುಗುವದು ಸಾಧ್ಯವಿಲ್ಲವೆಂದೂ

ತಿಳಿಸಿಬಿಟ್ಟೆನು. ಯಜಮಾನನು ಹನ್ನೊಂದು ದಿನಗಳವರೆಗೆ ಅದೇ ಸ್ಥಿತಿಯಲ್ಲಿದ್ದನು. ಮನುಷ್ಯ ಬುದ್ಧಿಗೆ ಎಷ್ಟು ಸಾಮರ್ಥ್ಯವಿರುವದೋ, ವೈಜ್ಞಾನಿಕರು ಏನೇನು ಕಂಡುಹಿಡಿದಿದ್ದರೋ ಅವೆಲ್ಲವೂ ನಮ್ಮ ಯಜಮಾನನ ಪಾಲಿಗೆ ವ್ಯರ್ಥವಾದವು. ಕುಬೇರನಂತಿದ್ದ ತಂದೆಗಾಗಿ ಲಕ್ಷ್ಮೀಕಾಂತನು ನೀರಿನಂತೆ ಹಣವನ್ನು ಖರ್ಚು ಮಾಡಿದನು; ಆದರೆ ದುರದೃಷ್ಟವೊಂದು ಎಲ್ಲದರ ಮೇಲೂ ನಿಂತಿದ್ದಿತು. ಹನ್ನೆರಡನೆಯ ದಿನ ಯಜಮಾನನ ಪ್ರಾಣಗಳು ಹಾರಿದವು. ಆ ಮೇಲೆ ಕೆಲವು ದಿನಗಳು ಹೇಗೋ ಕಷ್ಟದಿಂದ ಕಳೆದವು.

ಯಜಮಾನನ ಮಗನು ಸ್ವಾಭಾವಿಕವಾಗಿ ಚತುರನಿದ್ದನು. ತಂದೆಯು ಸಾಯುವದಕ್ಕಿಂತ ಮುಂಚೆಯೇ ಕಾರ್ಖಾನೆಯ ಬಹು ಭಾಗದ ಕೆಲಸವನ್ನು ತಾನೇ ನಿರ್ವಹಿಸಿ ನಡೆಸುತ್ತಿದ್ದನು. ಈಗ ನನ್ನ ಆಲೋಚನೆಯಂತೆ ಕಾರ್ಖಾನೆಯನ್ನು ಹೊಸ ರೀತಿಯಿಂದ ತುಂಬಾ ವ್ಯವಸ್ಥೆಗೊಳಿಸಿ, ನನ್ನನ್ನು ಕಾರ್ಖಾನೆಯ ಮುಖ್ಯ ಮೇನೇಜರನನ್ನಾಗಿ ಮಾಡಿದನು. ಈ ಮಧ್ಯದಲ್ಲಿ ನಾನು ಅಲಹಾಬಾದಿಗೆ ಹೋಗಿಯೇ ಇರಲಿಲ್ಲ. ವಾರವಾರಕ್ಕೂ ತಂದೆಯ ಕ್ಷೇಮ ಸಮಾಚಾರದ ಕಾಗದಗಳು ಬರುತ್ತಿದ್ದವು. ರಾಮಚಂದ್ರ ಬರೆದಿದ್ದ:- ನಿನಗೆಂದು ಆರಿಸಿದ್ದ ಮೂವರು ಹುಡಿಗಿಯರಿಗೂ ಬೇರೆ ಬೇರೆ ಕಡೆಗಳಲ್ಲಿ ವಿವಾಹ ನಡೆದುಹೋಯಿತು ಎಂದು.

ಅದರಿಂದ ನನಗೆ ಸ್ವಲ್ಪವೂ ಖೇದವುಂಟಾಗಲಿಲ್ಲ.

ನನ್ನ ತಾಯಿಯು ತಿರುಗಿ ನನ್ನ ವಿವಾಹಕ್ಕಾಗಿ ಪ್ರಯತ್ನಿಸುತ್ತಿದ್ದಾಳೆಂದೂ ಮುಂದಿನ ವರ್ಷದ ಮೊದಲನೇ ತಿಂಗಳಲ್ಲಿಯೇ ನನ್ನ ವಿವಾಹವಾಗಲು ನಿರ್ಧರಿಸಲ್ಪಡವದಾಗಿಯೂ ರಾಮಚಂದ್ರನು ಅದೇ ಕಾಗದದಲ್ಲಿ ಬರೆದಿದ್ದನು. ಮಹಾತ್ಮನ ಗುಡಿಸಿಲಿಗೆ ನಾನೂ ರಾಮಚಂದ್ರನೂ ಹೋದುದು ಮತ್ತು ಅಲ್ಲಿ ಮಹಾತ್ಮನ ಅನುಗ್ರಹದಿಂದ ಅದ್ಭುತ ದೃಶ್ಯಗಳನ್ನು ನಾನು ನೋಡಿದುದು ಅದಾವುದನ್ನೂ ನಾನು ಮರೆತಿರಲಿಲ್ಲ; ಮರೆಯಲು ಸಾಧ್ಯವೂ ಇರಲಿಲ್ಲ. ಏನೋ ಕುತೂಹಲಕ್ಕಾಗಿಯೇ ನಾನು ಆ ಮಹಾತ್ಮನ ಹತ್ತಿರ ಹೋಗಿದ್ದೆನು. ಅಪನಂಬಿಕೆಯಿಂದಲೇ ಮಹಾತ್ಮನ ಉತ್ತರವನ್ನು ಕೇಳಿದ್ದೆನು. ಆದರೂ ಯಾವ ದಿನ ಮೊದಲ್ಗೊಂಡು ಮಹಾತ್ಮನ ಮಾತುಗಳಲ್ಲೊಂದಂಶವು ನಿಜವೆಂದು ತೋರಿ ಬಂದಿತೋ, ಅಂದಿನಿಂದಲೆ ಮಹಾತ್ಮನಲ್ಲಿ ಒಂದು

ವಿಧವಾದ ವಿಶ್ವಾಸವುಂಟಾಗಲಾರಂಭವಾಯಿತು. ಇಂತಹ ಸಿದ್ಧ ಪುರುಷರು ಈಗಿನ ಕಾಲದಲ್ಲಿ ತುಂಬಾ ವಿರಳರು. ಅದೃಷ್ಟದಿಂದಲೇ ಇಂತಹ ಮಹಾತ್ಮರ ಭೇಟಿಯು ದೊರಕುವದು. ಸಾಂಸಾರಿಕ ಜನರಲ್ಲಿಯೂ ಅಂತಹ ಸಾಧುಗಳ ನಿಜವಾದ ಪರಿಚಯವುಳ್ಳವರು ಕಡಿಮೆ. ಅಂತಹ ಮಹಾತ್ಮರು ಅಕಸ್ಮಾತ್ತಾಗಿ ಎಲ್ಲಿಯೋ ಪ್ರಕಟವಾಗುತ್ತಾರೆ. ನಾನು ನೋಡಿದ್ದ ಆ ಮಹಾತ್ಮನು ಈಗೆಲ್ಲಿರುವನೋ ತಿಳಿಯಲಸಾಧ್ಯವೇ ಸರಿ. ಈ ವರ್ಷವಾದ ಮೇಲೆ ಯಾವ ಹುಡುಗಿಯು ನನಗೆ ವಿವಾಹವಾಗುತ್ತಾಳೆಂದು ಹೇಳಿದ್ದನೋ, ಅದು ನಿಜವಾಗುವುದೇ ಇಲ್ಲವೆ? ಎಂಬುದನ್ನೊಂದನ್ನು ತಿಳಿಯಲು ತುಂಬಾ ಕುತೂಹಲವೂ, ತವಕವೂ ಇದ್ದಿತು ಇರಲಿ. ಒಂದು ವರ್ಷದ ಕಾಲವು ಅಷ್ಟೇನೂ ಹೆಚ್ಚಿನದಲ್ಲ. ಮಹಾತ್ಮನ ಒಂದು ಮಾತು ನಿಜವೆಂಬುದರಿತ ಬಳಿಕ ಉಳಿದ ನುಡಿಯೂ ನಿಜವೇ ಆದೀತೆಂದು ತೋರುತ್ತದೆ.

ಕೆಲವು ತಿಂಗಳು ಕಳೆದವು. ನನ್ನ ಹೃದಯದಲ್ಲಿ ಆಶೆಯೂ ನಿರಾಶೆಯೂ ಪರಸ್ಪರವಾಗಿ ಹೊಡೆದಾಡುತ್ತಿದ್ದವು. ಹೀಗೆಯೇ ಕೆಲ ಕಾಲ ಕಳೆಯಿತು.

ಆದರೆ ಮಹಾತ್ಮನ ಗುಡಿಸಿಲಿನಲ್ಲಿ ನೋಡಿದ್ದ ಆ ಸುಂದರಿಯ ರೂಪವನ್ನು ಮಾತ್ರ ನಾನು ಸ್ವಲ್ಪವಾದರೂ ಮರೆಯಲಿಲ್ಲ.

ಆ ಮೇಲೆ ಒಂದು ದಿನ ಅಕಸ್ಮಾತ್ತಾಗಿ ನಿಜವಾಗಿ, ವಾಸ್ತವಿಕವಾಗಿ ಹಿಂದೆ ನೋಡಿದ್ದ ದೃಶ್ಯವೇ ನನ್ನ ಕಣ್ಣೆದುರಿಗೆ ಬಂದಿತು. ಯಾವಾಗ? ಹೇಗೆ? ಎಂಬುದನ್ನೇ ಮುಂದೆ ಹೇಳುತ್ತೇನೆ.

೫

ಕಾರ್ಖಾನೆಗೆ ಸಂಬಂಧಿಸಿದ ವಿಶೇಷ ಕೆಲಸಕ್ಕಾಗಿ ನಾನು ಪಾಟ್ನಾಕ್ಕೆ ಹೋಗಬೇಕಾಗಿ ಬಂದಿತು.

ನಾನು ಅಲ್ಲಿಗೆ ಹೊರಡುವದಕ್ಕಿಂತ ಮುಂಚೆಯೇ ನನ್ನ ತಾಯಿಯದೊಂದು ಕಾಗದ ಬಂದಿತ್ತು. ಅದು ಹೀಗಿದ್ದಿತು:—

ಚಿರಂಜೀವಿ ಮಧುರನಿಗೆ, ಆಶೀರ್ವಾದಗಳು.

ಮಗೂ, ನಾವೆಲ್ಲರೂ ಇಲ್ಲಿ ಕ್ಷೇಮದಿಂದಿರುತ್ತೇವೆ. ನಿನಗೊಂದು ಅಗತ್ಯವಾದ ಸಂಗತಿಯನ್ನು ತಿಳಿಸಲೋಸುಗ ನಿನಗೀಗ ಕಾಗದ ಬರೆಯುತ್ತಿದ್ದೇನೆ. ನಿನಗೆ ತಿಳಿದೇ ಇದೆ—ಕಳೆದ ವರ್ಷದಲ್ಲಿ ನಿನ್ನ ವಿವಾಹಕ್ಕೆ ಸಾಮು

ರ್ಯಗಳೆಲ್ಲವೂ ಸಿದ್ಧವಾಗಿರುವಾಗಲೇ ಅಕಸ್ಮಾತ್ತಾಗಿ ದುರ್ಘಟನೆಯೊಂದೊದಗಿ ನಿನ್ನ ವಿವಾಹಕ್ಕೆ ತಡೆಯುಂಟಾಯಿತು. ಅದರಿಂದ ಈಗ ಬರುವ ಮೊದಲನೇ ಮುಹೂರ್ತದಲ್ಲಿಯೋ ಈ ವಿವಾಹ ಕಾರ್ಯವು ಸಂಪೂರ್ಣವಾಗಬೇಕೆಂದು ಬಯಸುತ್ತೇನೆ. ಈ ಸಾರೆ ಮಾತ್ರ ನಿನ್ನ ಯಾವ ವಿಧವಾದ ತಡೆಯನ್ನೂ ನನ್ನೆದುರಿಗೆ ತೋರಿಸಲಾಗದು. ಅದಕ್ಕಾಗಿ ಈಗಲೆ ಸೂಚಿಸುತ್ತೇನೆ ಸತ್ಕುಲಪ್ರಸೂತಳಾದ, ಶಿಕ್ಷಿತಳಾದ, ಸುಂದರಿಯಾದ ಹುಡಿಗಿಯನ್ನು ನಿನಗಾಗಿ ನಿರ್ಧರಿಸಿರುವೆನು ಹುಡುಗಿಯು ಇದೇ ಊರಿನವಳು. ಈ ಬಾರಿಯಾದರೂ ನನ್ನ ಮಾತನ್ನು ಪೂರ್ಣಗೊಳಿಸುವಿಯಾಗಿ ನಂಬಿರುತ್ತೇನೆ. ಈ ಸಾರೆಯೂ ಕೂಡ ನೀನೇನಾದರೂ ಮೋಸ ಮಾಡಿ ತಡೆಯುಂಟುಮಾಡಿದರೆ, ನನಗೆ ಖಂಡಿತವಾಗಿಯೂ ತುಂಬಾ ವ್ಯಸನವಾಗುವುದು. ಅವಕಾಶವಿದ್ದರೆ, ಎರಡು-ಮೂರು ದಿನವಾದರೂ ಇಲ್ಲಿಗೆ ಬಂದಿದ್ದು ಹೋಗಲು ಪ್ರಯತ್ನಿಸು. ನಿನಗೆ ತೋರಿಸುವದಕ್ಕಾಗಿ ಹುಡಿಗಿಯ ಫೋಟೋವನ್ನು ಸಹ ತರಿಸಿ ಇಟ್ಟಿರುತ್ತೇನೆ. ವಿಶೇಷವೇನೂ ಇಲ್ಲ ನಿನ್ನ ತಾಯಿ.

ಈ ಕಾಗದವನ್ನು ನೋಡಿ ನನಗೆ ಆಶ್ಚರ್ಯವೆನಿಸಿತು. ಆಲೋಚಿಸಿದೆನು:--ಇಷ್ಟು ದಿವಸಗಳು ಕಳೆದವು ಆದರೂ ಕೂಡ ನನಗೆ ವಿವಾಹ ಮಾಡಿಸುವ ಆಗ್ರಹವಿನ್ನೂ ನನ್ನ ತಾಯಿಗೆ ಹೋಗಲಿಲ್ಲ. ಈ ಸಾರೆಯಾದರೂ ತಾಯಿಯ ಮಾತನ್ನು ನಡೆಯಿಸಬೇಕು; ಆದರೆ ಆ ಮಹಾತ್ಮನು ಹೇಳಿದ ನುಡಿಯು ಪೂರ್ಣವಾಗದೆ ಇರುವದೇ? ಮಹಾತ್ಮನಾದರೊ ನನ್ನ ಮುಂದಿನ ಹೆಂಡತಿಯು ಬೇರೆ ಸ್ಥಳದವಳೆಂಬುದನ್ನು ನನಗೆ ತೋರಿಸಿದಂತೆ ನೆನಪಿದೆ. ತಾಯಿಯು ಹುಡಿಗಿಯು ಪ್ರಯಾಗದವಳೆಂದೇ ಬರೆದಿರುವಳು. ಇದು ಹೇಗೆ? ಆಗಲಿ. ನೋಡುತ್ತೇನೆ, ನನ್ನ ಹಣೆಯಲ್ಲಿ ಏನು ಅದೃಷ್ಟವಿರುವುದೆಂದು. ಮಹಾತ್ಮನ ಮಾತು ವ್ಯರ್ಥವಾದೀತೆಂದು ನಾನು ನಂಬಲಾರೆನು.

ನಾನು ಕಾರ್ಖಾನೆಯ ಕೆಲಸಕ್ಕಾಗಿ ಪಾಟ್ನಾಕ್ಕೆ ಹೋದೆನು. ಅಲ್ಲಿ ಆ ಕೆಲಸವನ್ನು ಮುಗಿಸಿ ಹೊರಡಲು ಹದಿನೈದು ದಿವಸಗಳು ಬೇಕಾದವು. ಕೆಲಸವು ಪೂರೈಸಿದೊಡನೆ ಕ್ವಿಲನ್ ಮಾರ್ಗವಾಗಿ ಹಿಂದಿರುಗಿದೆ. ಜನರ ಗಲಭೆಯಿರಬಾರದೆಂದು ನಾನು ಸೆಕೆಂಡ್‌ಕ್ಲಾಸಿನಲ್ಲಿ ಪ್ರಯಾಣ ಮಾಡಹತ್ತಿದೆನು.

ಹಿಂದಿರುಗಿ ಕಲ್ಕತ್ತೆಗೆ ರೈಲಿನಿಂದ ಹೊರಟೆನು. ಕ್ವಿಲನ್ ಸ್ಟೇಶನ್ ಸಿಕ್ಕಿತು. ಹತ್ತು ನಿಮಿಷಗಳ ಕಾಲ ರೈಲು ಅಲ್ಲಿ ನಿಲ್ಲುವದೆಂದು ರೈಲಿನಿಂದ ಕೆಳಗಿಳಿದು ಅತ್ತಿತ್ತ ನೋಡಿದೆನು; ಆದರೆ....ಇದೇನು! ಎಲ್ಲಿಯೋ ಆ ಸ್ಟೇಶನ್ನನ್ನು ನಾನು ನೋಡಿದಂತೆ ಇದೆ. ಓಹೋ! ನೆನಪಾಯಿತು, ನೆನಪಾಯಿತು. ನೆನಪಾದೊಡನೆ ಅಪರಿಮಿತವಾದ ಆಶ್ಚರ್ಯವುಂಟಾಯಿತು. ಆ ಆಶ್ಚರ್ಯದ ಭರದಲ್ಲಿ ಕ್ಷಣ ಕಾಲ ಮನಸ್ಸು ಕಲಕಿಹೋಯಿತು. ಮುಂಚೆ ನಾನು ಮಹಾತ್ಮನೆದುರಿನಲ್ಲಿ ಮಣ್ಣಿನ ಹೆಂಟೆಯಲ್ಲಿ ಕಂಡಿರುವ ಸ್ಟೇಶನ್ನೇ ಇದು. ಸಂಶಯವಿಲ್ಲವೇ ಇಲ್ಲ. ಅದೇ ಸ್ಥಳವಿದು. ನಾನು ಆ ಕಾಲದಲ್ಲಿ ಚೆನ್ನಾಗಿ ನೋಡಿರುವೆನು. ಒಂದು ಪಕ್ಕದಲ್ಲಿ ಇದೇ ರೀತಿಯ ಕೋಣೆಗಳು, ಸ್ವಲ್ಪ ಮುಂದೆ ಇದೇ ರೀತಿ ಇನ್ನೊಂದು ಕಡೆಗೆ ಹೋಗುವ ರೈಲು ದಾರಿ, ಅದೇ ನೋಟ; ಆಶ್ಚರ್ಯ! ಮಹಾತ್ಮನ ಶಕ್ತಿಯು ಎಷ್ಟು ಅಪಾರವಾದುದು? ನಿಜ! ನಿಜ! ಮಹಾತ್ಮರು ಏನನ್ನು ಬೇಕಾದರೂ ಮಾಡಬಲ್ಲರು. ನಿಜವಾಗಿಯೂ ಅದೇ ದೃಶ್ಯವು ಎದುರಿಗಿದೆ. ಹೀಗೆಯೇ ಅಲ್ಲಿ ನೋಡಿದ ಸುಂದರಿಯೂ ಎದುರಿಗೆ ಬರುವಳೊ? ಮಹಾತ್ಮನ ಈ ಮಾತಿನ ಒಂದಂಶವು ಪೂರ್ಣವಾಗಿದೆ; ಉಳಿದ ಅಂಶವೂ ಪೂರ್ಣವಾಗಲಾರದೇ?

ನಾನು ಕುತೂಹಲದಿಂದ ಪ್ಲಾಟ್‌ಫಾರ್ಮಿನಲ್ಲಿ ಅತ್ತಿತ್ತ ನೋಡುತ್ತ ಸ್ವಲ್ಪ ಮುಂದೆ ಇರುವ ಇನ್ನೊಂದೆಡೆಗೆ ಹೋಗುವ ರೈಲುದಾರಿಯ ಹತ್ತಿರ ಹೋದೊಡನೆಯೇ ಥಟ್ಟನೆ ನಿಂತುಬಿಟ್ಟೆನು. ಮುಂದುಗಡೆಯಿರುವ ದೃಶ್ಯವನ್ನು ನೋಡಿದೊಡನೆಯೇ ಕ್ಷಣ ಕಾಲ ನಾನು ಏನೇನೋ ಆಗಿಬಿಟ್ಟೆನು! ನನ್ನ ಕಣ್ಣಿನ ಮೇಲೆಯೇ ನನಗೆ ಅಪನಂಬಿಕೆಯುಂಟಾಯಿತು. ಕಣ್ಣುಗಳನ್ನೊಂದು ಬಾರಿ ತಿಕ್ಕಿಕೊಂಡು ಸರಿಯಾಗಿ ತೆರೆದು ನೋಡಿದೆನು; ಈಗಲೂ ಅದೇ ಸುಂದರಿಯು ನನಗೆದುರಾಗಿ ಬರುತ್ತಿದ್ದಂತೆ ಕಂಡೆನು.

ನಾನು ಹಿಂದೆ ಮಹಾತ್ಮನೆದುರಿನಲ್ಲಿ ನೋಡಿದ ಸುಂದರಿಯೇ ಇವಳಿರಬಹುದೇ? ಎಂದುಕೊಂಡೆ. ತಿರುಗಿ ಕಣ್ಣುಗಳನ್ನು ತಿಕ್ಕಿ ನೋಡಿದೆನು. ಆಕೆಯೇ ಇವಳೆಂದು ಚನ್ನಾಗಿ ನೋಡಿ ನಿರ್ಧರಿಸಿದೆ. ಅದೇ ಹಳದೀ ಬಣ್ಣದ ಬೆಲೆ ಬಾಳುವ ಸೀರೆ, ಅದೇ ಬಿಳೀ ಕುಪ್ಪಸ, ಅದೇ ಮಂದವಾದ ನಡಿಗೆ, ಅದೇ ಮೂಗು. ಈಕೆ ಎಲ್ಲಿಂದ ಬಂದಳು? ನಾನು ಕನಸು ಕಾಣುತ್ತಿರುವೆನೇ?

ನಾನೀ ಮೇರೆಗೆ ನೋಡುತ್ತಿರುವಾಗಲೇ ಆಕೆಯು ಮುಂದೆ ನಡೆದು ನಾನು ಮೊದಲು ಕುಳಿತಿದ್ದ ಎರಡನೇ ತರಗತಿಯ ಗಾಡಿಯನ್ನೇ ಏರಿ ಕುಳಿತು ಕೊಂಡಳು. ಆಕೆಯ ಜೊತೆಯಲ್ಲಿ ಸಮುಜ್ವಲ ವೇಷ-ಭೂಷಣಗಳಿಂದ ಕೂಡಿದ ಇನ್ನೊಬ್ಬ ಪ್ರೌಢಳಾದ ಹೆಂಗಸೂ ಇದ್ದಳು. ಸೇವಕನೊಬ್ಬನು ಚರ್ಮದ ಚೀಲ, ಟ್ರಂಕ್‌ಗಳನ್ನು ಹಿಡಿದುಕೊಂಡು ಅವರ ಹಿಂದೆಯೇ ಹೋಗುತ್ತಿದ್ದನು ಸೇವಕನು ತಂದ ಸಾಮಾನುಗಳನ್ನು ಒಳಗಿಟ್ಟುಕೊಂಡರು. ನೋಡಿದರೆ ಅವರಿಬ್ಬರೂ ಸತ್ಕುಲ ಪ್ರಸೂತರಾಗಿ ತೋರುತ್ತಿದ್ದರು. ಎರಡನೇ ತರಗತಿಯಲ್ಲಿ ಪ್ರಯಾಣ ಮಾಡುತ್ತಿದ್ದುದರಿಂದ, ಶ್ರೀಮಂತರಿರಬೇಕೆಂದೂ ಸ್ಪಷ್ಟವಾಗುತ್ತಿದ್ದಿತು. ವೇಷ-ಭೂಷಣಗಳನ್ನು ನೋಡಿದರೆ, ಈಗಿನ ಕಾಲದ ವಿದ್ಯೆಕಲಿತವಳಂತೆ ಆಕೆಯು ಕಾಣಿಸುತ್ತಿದ್ದಳು.

ಅಷ್ಟರೊಳಗೆ ರೈಲಿನ ಗಾರ್ಡು ರೈಲು ಮುಂದಕ್ಕೆ ಹೊರಡಲು ಸೀಟಿ ಊದಿ, ಹಸರು ಬಾವುಟವನ್ನು ಬೀಸಿದನು. ಒಡನೆಯೆ ನಾನು ನಾಚಿಕೆ ಯಿಂದಲೂ ಭಯದಿಂದಲೂ ಅದೇ ಗಾಡಿಯನ್ನು ಸೇರಿ, ಮೊದಲು ಕುಳಿತಿದ್ದ ನನ್ನಸ್ಥಳದಲ್ಲಿಯೇ ಕುಳಿತುಕೊಂಡೆನು. ಕಣ್ಣುಗಳು ತಾವಾಗಿಯೇ ಆ ಸುಂದ ರಿಯ ಕಡೆಗೆ ಹೊರಟವು. ಮಣ್ಣಿನ ಹೆಂಟೆಯಲ್ಲಿ ನೋಡಿದ ಆಕಾರಕ್ಕೂ ಎದುರಿಗೆ ಕುಳಿತಿದ್ದ ಸುಂದರಿಗೂ ಸ್ವಲ್ಪವೂ ವ್ಯತ್ಯಾಸವಿಲ್ಲದಿರುವುದನ್ನು ಕಂಡು, ನನಗೆ ಹಿಂದೆಂದೂ ಉಂಟಾಗದೇ ಇದ್ದ ಆಶ್ಚರ್ಯವುಂಟಾಯಿತು. ಹೆಚ್ಚು ಹೊತ್ತು ಆಕೆಯನ್ನು ನೋಡುವುದು ಗೌರವವಲ್ಲವೆಂದು ದೃಷ್ಟಿ ಯನ್ನು ಹಿಂತಿರುಗಿಸಿ, ಆ ದಿನದ ವರ್ತಮಾನ ಪತ್ರಿಕೆಯೊಂದನ್ನು ಕಣ್ಣಿನೆ ದುರಿಟ್ಟುಕೊಂಡೆನು.

ಆ ಸುಂದರಿಯ ಜೊತೆಗೆ ಬಂದ ಪ್ರೌಢ ಹೆಂಗಸು ತಾನು ಕುಳಿತ ಸ್ಥಳ ದಿಂದೆದ್ದು ನನ್ನ ಹತ್ತಿರಕ್ಕೆ ಬಂದು ನನ್ನನ್ನು ಕೇಳಿದಳು:—ಇಲ್ಲಿ ಮೇಲ್ಗಡೆ ಗಿರುವ ಸಾಮಾನೆಲ್ಲವೂ ತಮ್ಮದೇ ಏನು?

ನಾನು ತಲೆಯನ್ನಲ್ಲಾಡಿಸಿ ಹೌದೆಂದೆನು. ತಿರುಗಿ ಆಕೆಯು ಕೇಳಿ ದಳು:—ತಾವೆಲ್ಲಿಗೆ ಹೋಗಬೇಕು?

ಆಕೆಯು ನಿಸ್ಸಂಕೋಚವಾಗಿ ನನ್ನೊಡನೆ ಮಾತನಾಡುತ್ತಿರುವದನ್ನು ನೋಡಿ, ನಾಚುವುದು ಉಚಿತವಲ್ಲವೆಂದು ನಾನೂ ನಿರ್ಭಯದಿಂದ ಮಾತ

ನಾಡತೊಡಗಿದೆನು. ಆ ಪ್ರೌಢ ಹೆಂಗಸಿನೊಡನೆ ಸಂಭಾಷಣೆ ಮಾಡುವದರಿಂದ ಆ ಸುಂದರಿಯ ಹೆಸರು, ಸ್ಥಳ, ವಿವಾಹವಾಗಿದೆಯೋ ಇಲ್ಲವೋ ಮುಂತಾದುದನ್ನು ತಿಳಿಯಬಹುದೆಂದು ನನ್ನ ಯೋಚನೆಯಿದ್ದಿತು.

ನಾನು ಉತ್ತರವಿತ್ತೆನು:—ಕಲ್ಕತ್ತೆಗೆ ಹೋಗಬೇಕು.

ಆಕೆಯು ಹೇಳಿದಳು:—ಓಹೊ! ಹೀಗೊ? ಹಾಗಾದರೆ ಸೀತಾರಾಂಪುರದ ವರೆಗೂ ನಮ್ಮ ಜೊತೆಯಲ್ಲಿರುತ್ತೀರಿ ನೀವು. ನಾವಿಬ್ಬರೂ ಸೀತಾರಾಂಪುರದಲ್ಲಿಳಿದು ಅಲಹಾಬಾದಿಗೆ ಹೋಗುವೆವು.

ಒಡನೆಯೆ ನನ್ನ ಬಾಯಿಂದ ಹೊರಟಿತು:-ಏನು, ಅಲಹಾಬಾದಿಗೊ?

ಆಕೆ--ಅದೇನು, ಅಲಹಾಬಾದಿನ ಹೆಸರು ಕೇಳಿ ಆಶ್ಚರ್ಯಪಟ್ಟಿರಿ?

ನಾನು ಮಾತನಾಡುತ್ತಿದ್ದುದು ಆ ಪ್ರೌಢ ಹೆಂಗಸಿನೊಡನೆಯಾದರೂ ಆ ಸುಂದರಿ ಮಧ್ಯೆ ಮಧ್ಯೆ ನನ್ನನ್ನು ಓರೆಗಣ್ಣಿನಿಂದ ನೋಡುತ್ತ, ನಮ್ಮ ಸಂಭಾಷಣೆಯನ್ನು ಆದರದಿಂದ ಕಿವಿಗೊಟ್ಟು ಕೇಳುತ್ತಿದ್ದಳು.

ನಾನು ಹೇಳಿದೆನು:—ಆಶ್ಚರ್ಯಕ್ಕೆ ಕಾರಣವಿದು: ನನ್ನ ವಾಸಸ್ಥಳವೂ ಅಲಹಾಬಾದೇ ಇರುವದು.

ಆಮೇಲೆ ಬಹು ಹೊತ್ತಿನ ವರೆಗೆ ಆ ಪ್ರೌಢ ಹೆಂಗಸಿನೊಡನೆ ಏನೇನೊ ಮಾತನಾಡುತ್ತ ಇದ್ದೆನು. ಮಧ್ಯದಲ್ಲೆಲ್ಲಾದರೂ ಒಂದೊಂದು ಬಾರಿ ಆ ಸುಂದರಿಯೂ ಮಾತನಾಡುತ್ತಿದ್ದಳು; ಆದರೆ ಅದು ನನ್ನೊಡನೆ ಅಲ್ಲ; ಆ ಪ್ರೌಢಳೊಡನೆ. ಈಗಿನ ಕಾಲದ ಸ್ಕೂಲ್‌ಗಳಲ್ಲಿ ಓದಿ ಶಿಕ್ಷಿತಳೆನಿಸಿದ್ದರೂ ಕೂಡ ಆಕೆಯು ಗುರತಿಲ್ಲದವರೊಡನೆ ಮಾತನಾಡುವದು ಉಚಿತವಲ್ಲವೆಂದು ತಿಳಿದಿರುವಂತೆ ತೋರುತ್ತಿದ್ದಿತು. ಪ್ರೌಢ ಹೆಂಗಸಿನಿಂದ ಆ ಸುಂದರಿಯ ಎಲ್ಲ ಸಂಗತಿಯೂ ಸಾಮಾನ್ಯವಾಗಿ ಹೀಗೆ ತಿಳಿಯಿತು:—

ಆ ಸುಂದರಿಯು ಅಲಹಾಬಾದಿನವಳು. ಪ್ರೌಢ ಹೆಂಗಸಿಗೆ ಆಕೆಯು ಅಕ್ಕನ ಮಗಳಾಗಬೇಕು. ಸುಂದರಿಯು ಬಹಳ ಕಾಲದಿಂದ ನೋಡದೇ ಇದ್ದ ತನ್ನ ಅತ್ತೆಯನ್ನು ನೋಡಿಕೊಂಡು ಬರುವದಕ್ಕಾಗಿ ಆಕೆಯಿರುವ ಕ್ವಿಲನ್ ಎಂಬ ಊರಿಗೆ ಹೋಗಿದ್ದಳು. ಅಲಹಾಬಾದಿನಲ್ಲಿ ನಿನಗೆ ವಿವಾಹವು ನಿಶ್ಚಯವಾಗಿದೆ; ಮನೆಗೆ ಬಾ, ಎಂದು ಸುಂದರಿಯ ತಂದೆಯು ಆಕೆಗೆ ತಂತಿ ಕಳುಹಿಸಿದ್ದನು. ಸೀತಾರಾಂಪುರದಲ್ಲಿ ಆಕೆಯ ಇನ್ನೊಬ್ಬ ಸಂಬಂಧಿಕರ ಮನೆ

ಯಿದ್ದಿತು. ಅಲ್ಲಿಗೆ ಹೋಗಿ, ಅಲ್ಲಿಂದ ಅಲಹಾಬಾದಿಗೆ ಹೋಗಬೇಕೆಂದು ನಿಶ್ಚಯವಾಗಿದ್ದಿತು. ಬರುವ ವಿವಾಹ ಮುಹೂರ್ತಗಳಲ್ಲಿ ಮೊದಲನೇ ಮುಹೂರ್ತದಲ್ಲಿಯೇ ಆಕೆಯ ವಿವಾಹವಾಗುವದು. ವರನೂ ಅಲಹಾಬಾದಿನವನೇ ಇರುವನು.

ಇವಿಷ್ಟು ಸಂಗತಿಗಳು ಅವಳ ಸಂಭಾಷಣೆಯಿಂದ ತಿಳಿದುಬಂದವು. ನಾನು ಆ ಸುಂದರಿಯನ್ನು ಚೆನ್ನಾಗಿ ನೋಡಿ ನಿಶ್ಚಯವಾಗಿ ತಿಳಿದೆನು:— ನಾನು ಮಣ್ಣಿನ ಹೆಂಟೆಯಲ್ಲಿ ಈಕೆಯನ್ನೇ ನೋಡಿದುದು. ಅಲ್ಲಿ ನೋಡಿದುದಕ್ಕಿಂತಲೂ ಸಾವಿರ ಪಾಲಿನಷ್ಟು ಹೆಚ್ಚಾಗಿರುವ ಸೌಂದರ್ಯವು ಸಾಕ್ಷಾತ್ತಾಗಿ ನೋಡುವ ಆಕಾರದಲ್ಲಿ ಕಾಣಿಸುತ್ತಿದೆ; ಮತ್ತು ಮನದಲ್ಲಿ ಆಲೋಚಿಸಿದೆನು:—ಆ ಮಹಾತ್ಮನು ನುಡಿದಂತೆ ಎಲ್ಲವೂ ನಡೆದಿದೆ. ಇದೊಂದು ಮಾತ್ರ ಬಾಕಿಯಿದೆ; ಆದರೆ ಈಕೆಯ ವಿವಾಹವು ಅಲಹಾದಿನಲ್ಲಿರುವ ವರನೊಡನೆ ಆಗುವದೆಂದು ಈ ಹೆಂಗಸು ಹೇಳುತ್ತಾಳೆ. ಇದೇನು! ಇಲ್ಲಿಯವರೆಗೆ ಮಹಾತ್ಮನ ಮಾತೆಲ್ಲವೂ ನಿಜವಾಗಿ ಪರಿಣಮಿಸಿ, ಮುಖ್ಯವಾದ ಫಲದಲ್ಲಿಯೇ ನನ್ನ ದುರದೃಷ್ಟದಿಂದ ಸುಳ್ಳಾಗುವದೇ? ಈ ಸುಂದರಿಯೊಡನೆ ನನಗೆ ವಿವಾಹವಾಗದೇ ಹೋದರೆ, ಖಂಡಿತವಾಗಿಯೂ ಆ ಮಹಾತ್ಮನು ಮೋಸಗಾರನೆಂದೆಣಿಸುವೆನು.

ಕ್ವಿಲನ್ ಸ್ಟೇಶನ್ನಿನಿಂದ ಸೀತಾರಾಂಪುರದ ವರೆಗೆ ನನ್ನ ಪ್ರಯಾಣವು ಆ ಹೆಂಗಸರೊಡನೆ ಸುಖವಾಗಿ ಜರುಗಿತು.

ತಿರುಗಿ ಮನಸ್ಸಿನಲ್ಲಿ ಆಲೋಚಿಸಿದೆನು:-ಈಕೆಯ ತಂದೆಯ ಹೆಸರು ಸ್ಥಳ ಮುಂತಾದುದು ನನಗೆ ತಿಳಿದೇ ಇದೆ. ಆತನು ಅಲಹಾಬಾದಿನಲ್ಲಿಯೇ ವಾಸ ಮಾಡುತ್ತಾನೆ. ಆತನು ಈಕೆಯನ್ನು ನನಗೆ ಕೊಟ್ಟು ವಿವಾಹ ಮಾಡುವಂತೆ ಏನಾದರೂ ಪ್ರಯತ್ನವನ್ನು ನಾನು ಈಗ ಮಾಡಲೇಬೇಕಾಯಿತು. ಇರಲಿ. ನಮ್ಮ ತಾಯಿಗೆ ಈ ವಿಚಾರವನ್ನು ತಿಳಿಸುತ್ತೇನೆ. ಹೇಗಾದರೂ ಮಾಡಿ ಆ ಮಹಾತ್ಮನ ನುಡಿಯು ನಿಜವಾಗುವಂತೆ ಪ್ರಯತ್ನ ಮಾಡಬೇಕು.

ಹೀಗೆ ಆಲೋಚಿಸುತ್ತಿದ್ದಾಗಲೇ ಸೀತಾರಾಮಪುರವು ಬಂದುಬಿಟ್ಟಿತು. ರೈಲಿನಿಂದಿಳಿಯುವಾಗ ತಿರುಗಿ ಆ ಪ್ರೌಢ ಹೆಂಗಸಿನ ಹತ್ತಿರ ಆ ಸುಂದರಿಯ ತಂದೆಯ ಹೆಸರು, ಸ್ಥಳ ಮುಂತಾದುದನ್ನು ಕೇಳಿದೆನು. ಆಕೆಯೂ ಶಂಕಿಸದೆ

ತಿರುಗಿ ಹೇಳಿದಳು. ರೈಲಿನಿಂದಿಳಿಯುವಾಗ ಆ ಸುಂದರಿಯು ನಾಚಿಕೆ ಪಡುತ್ತ ನನ್ನ ಮೇಲೆ ಕಡೆಗಣ್ಣಿನ ನೋಟವನ್ನು ಬೀರಿ ಮೆಲ್ಲಮೆಲ್ಲನೆ ಇಳಿದಳು. ಆಕೆಯ ವಿಷಯದಲ್ಲಿ ನಾನೆಷ್ಟು ಉತ್ಕಂಠಿತನಾಗಿರುವೆನೆಂಬುದನ್ನು ಆಕೆಯು ಹೇಗೆ ತಾನೇ ತಿಳಿದಾಳು?

ಈ ಸಂಗತಿಯು ನಡೆದು ಕೆಲವು ದಿನಗಳು ಕಳೆದು ಹೋದುವು. ಆ ಸುಂದರಿಯುನ್ನೂ ಮತ್ತು ಆ ಪ್ರೌಢ ಹೆಂಗಸನ್ನೂ ನಾನು ಮರೆಯಲಿಲ್ಲ. ಒಂದು ತಿಂಗಳಾದ ಮೇಲೆ ನಾನು ಅಲಹಾಬಾದಿಗೆ ಹೋದೆನು. ಮನಸ್ಸಿನಲ್ಲಿ ರೈಲಿನಲ್ಲಿ ಕಂಡಿರುವ ಸುಂದರಿಯ ಸಂಗತಿಯನ್ನು ತಾಯಿಯ ಹತ್ತಿರ ಹೇಳಿ ಆಕೆಯನ್ನಲ್ಲದೆ ಬೇರೆ ಯಾರನ್ನೂ ವಿವಾಹವಾಗಲಾರನೆಂದೇ ಹೇಳುವೆನು. ಆಗ ಏನಾದರೂ ಉಪಾಯ ಮಾಡಿ ತಾಯಿಯು ನನ್ನ ಮಾತನ್ನು ನಡೆಸುವಳು, ಎಂದು ಆಲೋಚಿಸಿಕೊಂಡಿದ್ದೆನು. ಮನೆಗೆ ಹೋದ ಮಾರನೇ ದಿನ ತಾಯಿಯೊಡನೆ ಗುಟ್ಟಾಗಿ ಮಾತನಾಡುವ ಅವಕಾಶವು ದೊರೆಯಿತು.

ಆಕೆಯು ಆಶ್ಚರ್ಯದಿಂದ ಕೇಳಿದಳು:—ಏನು, ಏನು ಹೇಳುವೆ?

ನಾನು ಹೇಳಿದೆನು:—ನೀನು ನಿಶ್ಚಯಮಾಡಿದ ವಿವಾಹದ ವಿಷಯದಲ್ಲಿಯೇ ಸ್ವಲ್ಪ ಹೇಳಬೇಕೆಂದಿರುವೆನು.

ಆಕೆಯು ಹೇಳಿದಳು:—ಏನೋ, ವಿವಾಹದ ವಿಷಯದಲ್ಲಿ ಏನು ಹೇಳಬೇಕೆಂದಿರುವೆ? ತಿರುಗಿ ಸಾಧ್ಯವಿಲ್ಲವೆಂದು ಹೇಳಬೇಕೆಂದಿರುವೆಯಾ?

ನಾನು ಹೇಳಿದೆನು:-ಇಲ್ಲ-ಇಲ್ಲ; ಅಮ್ಮಾ, ಹಾಗಲ್ಲ. ನೀನು ನಿಶ್ಚಯ ಮಾಡಿದ ಹುಡಿಗಿಯೊಡನೆ ವಿವಾಹವಾಗುವುದು ನನಗೆ ಇಷ್ಟವಿಲ್ಲ.

ಆಶ್ಚರ್ಯದಿಂದಾಕೆ-ಏನು ಕಾರಣ? ಆಕೆಯಲ್ಲಿ ಏನಾದರೂ ದೋಷವಿರುವದನ್ನು ನೀನು ನೋಡಿರುವಿಯಾ? ಅಥವಾ ಕೇಳಿರುವೆಯಾ? ನಾನೇನೋ ಆಕೆಯ ಕುಲ, ನಡೆ, ನುಡಿ, ವಿದ್ಯಾ, ಬುದ್ಧಿ ಎಲ್ಲವನ್ನೂ ಚೆನ್ನಾಗಿ ನೋಡಿ, ವಿಚಾರಿಸಿಯೇ ನಿರ್ಧರಿಸಿರುವೆನು. ಆ ಹುಡುಗಿಯು ತುಂಬಾ ಸುಶೀಲಳು. ಹೀಗಿರುವಾಗ್ಯ ಬೇಡವೆನ್ನಲು ಕಾರಣವೇನು? ಹೇಳು.

ನಾನು ಹೇಳಿದೆನು:—ಇಲ್ಲ-ಇಲ್ಲ. ಆಕೆಯ ಗುಣದೋಷಗಳ್ಯಾವುವನ್ನೂ ನಾನು ಕಂಡಿಲ್ಲ; ಕೇಳಿಯೂ ಇಲ್ಲ. ಅದಲ್ಲ, ನಿಜವಾದ ಸಂಗತಿಯು ಇದು; ನಾನಾಗಿಯೇ ಬೇರೊಬ್ಬ ಹುಡುಗಿಯನ್ನು ನಿಶ್ಚಯ ಮಾಡಿರುವೆನು.

ತಾಯಿಯು ಈ ನನ್ನ ಮಾತಿನಿಂದ ಆಕಾಶದಿಂದ ಕೆಳಗೆ ಬಿದ್ದಂತಾದಳು. ಆಕೆಯು ಆಶ್ಚರ್ಯದಿಂದ ಕೇಳಿದಳು:-ಮಗೂ, ಮಧುರ, ಎಲ್ಲವೂ ಚೆನ್ನಾಗಿದೆ. ಹೇಳು, ಇದೆಲ್ಲ ಹೇಗಾಯಿತು? ಮೊದಲು ನೀನು ವಿವಾಹವನ್ನೇ ಒಪ್ಪುತ್ತಿರಲಿಲ್ಲ. ಈಗಲಾದರೋ ನೀನಾಗಿಯೇ ಹುಡುಗಿಯ ನಿಶ್ಚಯವನ್ನು ಮಾಡಿಬಿಟ್ಟೆಯಾ? ಬಹಳ ಚೆನ್ನಾಗಿದೆ. ಈಗಿನ ಕಾಲದ ಹುಡುಗರು ತಾಯಿ-ತಂದೆಗಳು ನಿರ್ಧರಿಸಿದ ಹೆಂಡತಿಯನ್ನು ಕೂಡ ಒಪ್ಪದೇ ಇರುವಷ್ಟು ಬುದ್ಧಿವಂತರಾಗಿ ಬಿಟ್ಟಿರುತ್ತಾರೆ ಮಾಡುವುದೇನು? ನಮ್ಮ ಅದೃಷ್ಟ! ಇರಲಿ. ಹೇಳು, ಆ ಹುಡುಗೆಯು ಯಾರು?

ನಾನು ನಾಚುತ್ತ ಹೇಳಿದೆನು:-ಇಲ್ಲಿಯವಳೇ ಇರುವಳು. ನಾನು ಪಾಟ್ನಾಕ್ಕೆ ಹೋಗಿ ಹಿಂತಿರುಗಿ ಬರುತ್ತಿದ್ದಾಗ ರೈಲಿನಲ್ಲಿ ನೋಡಿದೆನು. ನಾರಾಯಣಸ್ವಾಮಿ ಬೀದಿಯ ರಾಘವೇಂದ್ರರಾಯರ ಮಗಳು.

ತಾಯಿಯು ಸ್ವಲ್ಪ ಹೊತ್ತು ಆಶ್ಚರ್ಯದಿಂದ ನನ್ನ ಮುಖವನ್ನು ನೋಡಿದಳು. ಆ ಮೇಲೆ ಗಟ್ಟಿಯಾಗಿ ನಕ್ಕುಬಿಟ್ಟಳು ತಾಯಿಯು ಹಾಗೆ ಕಾರಣವಿಲ್ಲದೆ ನಗುವುದನ್ನು ನೋಡಿ ನಾನು ತುಂಬಾ ಗಾಬರಿಯಾದೆನು. ನಾನು ಹೇಳಿದುದರಲ್ಲಿ ನಗುವುದಕ್ಕೆ ಕಾರಣವೇನೂ ಇರಲಿಲ್ಲ. ಆ ಮೇಲೆ ತಾಯಿಯು ಎದ್ದು ಒಳಗೆ ಹೋಗಿ, ಒಂದು ಫೋಟೋವನ್ನು ಕೈಯಲ್ಲಿ ಹಿಡಿದುಕೊಂಡು ಬಂದು ನನ್ನ ಕೈಗೆ ಕೊಟ್ಟು ನಗುತ್ತಾ ಹೇಳಿದಳು:-ನೀನಿದೇ ಹುಡುಗಿಯನ್ನು ಹೇಳುತ್ತಿರುವೆಯಾ?

ನನಗೆ ಆಶ್ಚರ್ಯವಾಗಿ ಏನನ್ನು ಹೇಳುವದಕ್ಕೂ ತೋರಲಿಲ್ಲ. ತಾಯಿಯು ಕೊಟ್ಟ ಫೋಟೋ ನಾನು ನೋಡಿದ ಸುಂದರಿಯದೇ ಆಗಿದ್ದಿತು. ರೋಗಿ ಬಯಸಿದುದೂ ಹಾಲು; ವೈದ್ಯ ಕೊಟ್ಟಿರುವದೂ ಹಾಲು ಎಂಬಂತಾಯಿತು! ನಾನು ನಡುಗುವ ಸ್ವರದಿಂದ ಕೇಳಿದೆನು:-ಅಮ್ಮಾ, ಈ ಫೋಟೋ ನಿನ್ನ ಹತ್ತಿರಕ್ಕೆ ಎಲ್ಲಿಂದ ಬಂದಿತು? ನಿನಗೀ ಹುಡುಗಿಯ ಗುರತಿರುವುದೇ?

ತಾಯಿಯು ತಲೆಯಾಡಿಸುತ್ತ ನುಡಿದಳು:— ಗುರುತಿಲ್ಲದೆ ಏನು? ಚನ್ನಾಗಿ ಗುರಿತಿದೆ. ನನಗಿಲ್ಲದೇ ಇದ್ದರೆ ಇನ್ಯಾರಿಗಿದ್ದೀತು? ಈಕೆಯೊಡನೆಯೇ ನಿನಗೆ ವಿವಾಹ ಮಾಡಬೇಕೆಂದು ನಿರ್ಧರಿಸಿದುದು. ನಿನಗೆ ತೋರಿ

ಘುವದಕ್ಕಾಗಿಯೇ ನಾನೀ ಫೋಟೋ ತರಿಸಿ ಇಟ್ಟುಕೊಂಡಿದ್ದೆ. ನಾನು ಕಾಗದದಲ್ಲಿ ಇದನ್ನೂ ಬರೆದಿದ್ದೆನು; ನಿನಗೆ ನೆನಪಿಲ್ಲವೇ?

ನಾನೇನು ಹೇಳಲಿ? ಒಂದು ವರ್ಷದಿಂದ ಈಕೆಯನ್ನು ಹೃದಯದಲ್ಲಿ ಧರಿಸಿರುವೆನೆಂದು ಹೇಗೆ ಹೇಳಲಿ? ಆದರೆ ಈ ಯೋಗವು ತುಂಬಾ ಅದ್ಭುತವಾಗಿದೆ. ಮಹಾತ್ಮನ ನುಡಿಯು ಎಲ್ಲ ವಿಷಯದಲ್ಲಿಯೂ ಹೇಗೆ ನಿಜವಾಗಿಬಿಟ್ಟಿತು? ಆಶ್ಚರ್ಯ! ಏನಿದು, ಪರಮಾತ್ಮನ ಅಪಾರ ದಯೆಯೇ ಅಥವಾ ನನ್ನ ಸೌಭಾಗ್ಯವೆ? ಅಥವಾ ಆ ಮಹಾತ್ಮನ ಸಿದ್ಧಿ ಪ್ರಭಾವವೇ!

.... .... .... ....

ನನ್ನ ವಿವಾಹವು ಆ ಮೇಲೆ ಅದೇ ಹುಡುಗಿಯೊಡನೆ ನಡೆಯಿತು.

ನಾನು ನಿಶ್ಚಯವಾಗಿಯೂ ತಿಳಿದೆನು-ಮಹಾತ್ಮನು ಹೇಳಿದುದು ತೋರಿಸಿದುದು ಎಲ್ಲವೂ ನಿಜ ಎಂದು. ಅದರಲ್ಲಿ ಸ್ವಲ್ಪವೂ ಕೂಡ ಸುಳ್ಳಾಗಲಿಲ್ಲ.

ಯಾವ ಶಕ್ತಿಯಿಂದ, ಯಾವ ಬಲದಿಂದ ಮಹಾತ್ಮನು ಅದನ್ನು ಹೇಳಿದನು-ತೋರಿಸಿದನೆಂಬುದು ಮಾತ್ರ ಕಡೆಗೂ ತಿಳಿಯಲಿಲ್ಲ.

ನಾನು ಆ ಮಹಾತ್ಮನನ್ನು ತಿರುಗಿ ನೋಡಲಾಗಲಿಲ್ಲ.; ಹುಡುಕಿದರೂ ಸಿಗಲಿಲ್ಲ. ಆತ ಗಂಗಾತೀರವನ್ನು ಬಿಟ್ಟು ಹೋಗಿ ಬಹಳ ದಿನಗಳಾಗಿದ್ದವು. ಆ ಮೊದಲ್ಗೊಂಡು ನಾನು:—ಧರ್ಮ-ಕರ್ಮಾದಿಗಳು ಮೋಸಗಾರರವು, ಎಂದು ಹೇಳುವದನ್ನು ಬಿಟ್ಟುಬಿಟ್ಟೆನು. ಅಂದಿನಿಂದ ನನಗೆ ಸಾಧು-ಸಜ್ಜನರಲ್ಲಿ ನಂಬಿಕೆಯು ಸ್ಥಿರವಾಗಿ ನಿಂತಿತು. ಇದನ್ನು ತಿಳಿದುಕೊಂಡೆನು:—ಈ ಜಗತ್ತಿನಲ್ಲಿ ಮೋಸಗಾರರು ಬಹಳ ಜನರಿರುತ್ತಾರೆ;ಆದರೂ ಕೆಲವೆಡೆಯಲ್ಲಿ ನಿಜವಾದ ಮಹಾತ್ಮರೂ ಇರುತ್ತಾರೆ. ಶಾಸ್ತ್ರಗಳು, ಧರ್ಮ, ಕರ್ಮಗಳೆಲ್ಲವೂ ನಿಜವಾದ ಹಿತವನ್ನು ಸೂಚಿಸುವವು ಎಂದು.

ಒಂದು ದಿನ ರಾಮಚಂದ್ರನು ಹಿಂದೆ ನಡೆದ ಘಟನೆಯ ವಿಷಯವಾಗಿ ಕೇಳಿದನು:—ಏನೋ ಮಧುರ, ಈಗಲಾದರೂ ಸಾಧು, ಸಜ್ಜನ, ಮಹಾತ್ಮರಲ್ಲಿ ನಂಬಿಕೆಯುಂಟಾಯಿತೋ- ಇಲ್ಲವೊ?

ನಾನು ಉತ್ತರವಿತ್ತೆನು:—ಖಂಡಿತವಾಗಿಯೂ ನಂಬುತ್ತೇನೆ. ಅವರು ಮಾತ್ರ ನಿಜವಾದ ಮಹಾತ್ಮರಿರಬೇಕು. ಕೃತಕರನ್ನು ನಂಬಲಾರೆನು...

(ದಿವ್ಯ ದೃಷ್ಟಿಯಿಂದ ಸಂಗ್ರಹ)

ಸಂಪೂರ್ಣ

"ಅದು ಬಹಳ ಹಿಂದಿನ ಮಾತು ಮಗೂ. ನಿನ್ನ ತಾಯಿ ಅಡಿಗೆ ಮಾಡುವದಕ್ಕೆ ಪ್ರಾರಂಭಿಸಿದ ಮೇಲೆ ನಾನು ಹಸಿದುಕೊಂಡ ದಿವಸವೇ ಇಲ್ಲ."

"ಮುಂದೆ ಹೇಳು, ದಯವಿಟ್ಟು" ಎಂದು ನುಡಿದಳು ಪಾಲಿ.

"ನಾನು ಮಾಡಿದ ಕೆಲಸದ ಅರಿವಾದ ಮೇಲೆ ನನಗೆ ನಿಜವಾಗಿಯೂ ಬಹಳ ಭಯವಾಯಿತು. ನನ್ನ ಹೊಟ್ಟೆ ತುಂಬಿತ್ತೇನೋ ನಿಜ. ಹೃದಯದಲ್ಲಿ ತುಂಬ ನೋವಾಗಿತ್ತು. ನನ್ನ ತೊಡೆಯಮೇಲೆ ಬಟ್ಟಲನ್ನು ಇಟ್ಟುಕೊಂಡು ಕುಳಿತಾಗ, ನನ್ನ ತಲೆಯಲ್ಲಿ ಅನೇಕ ವಿಚಾರಗಳು ಬಂದವು. ಸಿಂಪಿಗನ ಹೆಂಡತಿ ಆ ಬಾತುಕೋಳಿಯನ್ನು ಸಂಪಾದಿಸಲು ಎಷ್ಟು ಕಷ್ಟ ಪಟ್ಟಿದ್ದಳೋ! ಹೆಚ್ಚಾಗಿ ಬೆಂಕಿ ಇರುವ ನೆರಮನೆಯಲ್ಲಿ ಅದನ್ನು ಕೊಟ್ಟು ಬೇಯಿಸಿಕೊಂಡು ಬಂದಿದ್ದಳು! ಇಷ್ಟೆಲ್ಲ ನನ್ನ ಕಣ್ಣಮುಂದೆ ಕಟ್ಟಿದಂತಾಯಿತು. ನನ್ನ ಮೂಲೆಯನ್ನು ಬೇರ್ಪಡಿಸಿಕೊಳ್ಳಲು ಹಳೆಯ ಜಮಖಾನೆಯನ್ನು ತೂಗ ಬಿಟ್ಟಿದ್ದರು. ಮಕ್ಕಳನ್ನು ಅಲ್ಲಿ ಹೋಗುವದಕ್ಕೆ ಬಿಡುತ್ತಿರಲಿಲ್ಲ. ಆ ಸಿತಾರು ಹುಡುಗನಿಗಿಂತ ನನ್ನ ಮೇಲೆ ಹೆಚ್ಚು ವಿಶ್ವಾಸವಿಟ್ಟು ನನ್ನ ಮೂಲೆಯಲ್ಲಿ ಅವಳು ತಂದಿರಿಸಿದ್ದಳು. ತನಗಾಗಿ ಕ್ರಿಸ್‌ಮಸ್‌ನ್ನೆ ಹಾಳುಮಾಡಿಕೊಂಡ ಆವಳ ಮೋರೆಯನ್ನು ನೋಡುವದು ಹೇಗೆ. ಆದ್ದರಿಂದ ನಾನು ಜೋಡುಗಳನ್ನು ಹಾಕಿಕೊಂಡು ಪಟ್ಟಣಕ್ಕೆ ಹೊರಟುಬಿಟ್ಟೆ. ನಾನು ಅಂಥ ಹುಡುಗನಾಗಿರಲಿಲ್ಲವೆಂದು ಊಹಿಸುತ್ತೇನೆ.

"ಆಗ ಹನ್ನೆರಡು ಘಂಟೆಯಾಗಿತ್ತು. ಭಯಂಕರ ಚಳಿ ಮೈ ಕೊರೆಯುತ್ತಿತ್ತು. ಇಡೀ ರಾತ್ರಿ ಲಂಡನ ನಗರದಲ್ಲಿ ಓಡಾಡಿದೆ. ತುಸು ಹೊತ್ತು ನದಿಯ ದಡದ ಮೇಲೆಲ್ಲಾ ಓಡಾಡಿದೆ. ಅಲ್ಲಿ ಬಹಳ ಜನ ಗಂಡಸರೋ ಹೆಂಗಸರೋ ಕುಡಿದವರಿದ್ದರು. ಪೋಲಿಸರಿಂದ ದೂರವಿರಲು ಸ್ವಲ್ಪ ಮುಂದುವರಿದೆ. ಸ್ಟ್ರೆಂಡಿಗೆ ಹೋದೆ. ಮುಂದೆ ನ್ಯೂ ಆಕ್ಸಫೋರ್ಡ್ ಬೀದಿಗೆ ಹೋದೆ. ಅಲ್ಲಿ ನದಿಯ ಗುಂಟವೇ ಒಂದು ಜರ್ಮನ್ ಹೊಟೆಲ್ ಇದ್ದಿತ್ತು. ಸುಂದರವಾದ ದೊಡ್ಡ ಕಿಟಕಿಗಳೊಳಗಿಂದ ಒಳಗಡೆ ಜನರು ಉಪಹಾರ ತೆಗೆದುಕೊಳ್ಳುತ್ತಿದ್ದುದನ್ನು ನೋಡಿದೆ. ನಾನು ಒಳಗಡೆಗೆ ನೋಡುತ್ತಿದ್ದಂತೆ ಇಬ್ಬರು ಗಂಡಸರೂ, ಇಬ್ಬರು ಹೆಂಗಸರೂ ಹೊರಗೆ ಬಂದರು. ಇಡೀ ದಿನ ಕುಡಿಯುವದು,

ತಿನ್ನುವದು ಮಾಡಿ ಸುಖವಾಗಿ ನಗುತ್ತ ಮಾತನಾಡುತ್ತಿದ್ದರು. ಅವರು ಜೆಕ್ ಭಾಷೆಯಲ್ಲಿ ಮಾತನಾಡುತ್ತಿದ್ದರು. ಆಸ್ಟ್ರಿಯನ್‌ರಂತಲ್ಲ, ಊರಿನಲ್ಲಿರುವ ಜನರಂತೆಯೇ ಮಾತನಾಡುತ್ತಿದ್ದರು.

"ನನಗೆ ಹುಚ್ಚು ಹಿಡಿದಂತಾಗಿರಬೇಕು. ಅದರಿಂದ ಎಂದೂ ಮಾಡಬಾರದನ್ನು ಮಾಡಿಬಿಟ್ಟೆ. ಅವರ ಬಳಿ ಒಮ್ಮೆಲೇ ಹೋಗಿ 'ನಮ್ಮ ದೇಶವಾಸಿಗಳೇ ನನಗೆ ದಯವಿಟ್ಟು ಒಂದು ಬಾತುಗೋಳಿಗೆ ಆಗುವಷ್ಟು ಹಣ ಕೊಡಿರಿ' ಎಂದು ಬೇಡಿದೆ.

ಗಂಡಸರು ನಕ್ಕರು ಅನ್ಯೋನ್ಯ. ಆದರೆ ಹೆಂಗಸರು ನನ್ನ ಮೇಲೆ ಕರುಣೆ ತೋರಿದರು. ಅವರು ನನ್ನನ್ನು ತಿರುಗಿ ಹೋಟಲಿಗೆ ಕರೆದೊಯ್ದು ಬಿಸಿ ಕಾಫಿ ತಿಂಡಿಯನ್ನು ಕೊಡಿಸಿದರು. ನಾನು ಲಂಡನ್ನಿಗೆ ಹೇಗೆ ಬಂದೆ, ಏನು ಮಾಡುತ್ತಾ ಇದ್ದೇನೆ, ನಾನು ಕೆಲಸಮಾಡುವ ಅಂಗಡಿ, ನನ್ನ ಕೆಲಸ, ಅಂಗಡಿಯ ವಿಳಾಸವನ್ನು ಬರೆದುಕೊಂಡರು. ನಂತರ ಆ ಇಬ್ಬರು ಹೆಂಗಸರು ನನಗೆ ಹತ್ತು ಶಿಲಿಂಗುಗಳನ್ನು ಕೊಟ್ಟರು. ಅಲ್ಲಿಂದ ಕವೆಂಟಗಾರ್ಡನದಲ್ಲಿಯ ದೊಡ್ಡ ಪೇಟೆ ದೂರವಿರಲಿಲ್ಲ. ಅದು ಇನ್ನೂ ತೆರೆದೇ ಇತ್ತು. ನಾನು ಅಲ್ಲಿಗೆ ಹೋದೆ. ಒಂದು ದೊಡ್ಡ ಬಾತುಕೋಳಿ, ಹಂದಿಯ ಮಾಂಸ, ಬಟಾಟೆ, ಆಲೂಗಡ್ಡೆ, ತಿಂಡಿಗಳು, ಮಕ್ಕಳಿಗಾಗಿ ಕಿತ್ತಳೆ ಹಣ್ಣು—ನನ್ನಿಂದ ಸಾಧ್ಯವಾದಷ್ಟನ್ನು ಕೊಂಡೆ. ನಾನು ಮನೆಗೆ ಮರಳಿದಾಗ ಎಲ್ಲರೂ ಮಲಗಿ ನಿದ್ರಿಸುತ್ತಿದ್ದರು. ನಾನು ತಂದುದೆಲ್ಲವನ್ನೂ ಅಡಿಗೆ ಮನೆ ಮೇಜಿನ ಮೇಲಿರಿಸಿ, ಹೋಗಿ ಮಲಗಿಕೊಂಡೆ. ಮರುದಿನ ಸಿಂಪಿಗನ ಹೆಂಡತಿ ಎಚ್ಚತ್ತು ಅಡಿಗೆ ಮನೆಗೆ ಬಂದು ಮೇಜಿನ ಮೇಲಿದ್ದುದನ್ನು ಕಂಡು,ಅವಳು ಕಿರಚಿಕೊಂಡಾಗಲೇ ನನಗೆ ಎಚ್ಚರ. ಅವಳ ಆಶ್ಚರ್ಯವನ್ನು ಎಷ್ಟೆಂದು ಹೇಳಲಿ? ಅವಳು ಏಕಕಾಲದಲ್ಲಿ ಅಳುವದನ್ನೂ ನಗುವವನ್ನೂ ಮಾಡಿದಳು. ನನ್ನನ್ನು ಅಪ್ಪಿಕೊಂಡಳು. ಮಕ್ಕಳನ್ನೆಲ್ಲ ಎಬ್ಬಿಸಿದಳು. ಅವಳು ಸ್ವಲ್ಪವೂ ತಡಮಾಡಲಿಲ್ಲ. ಕ್ರಿಸ್‌ಮಸ್ ಊಟವನ್ನು ಬೆಳಿಗ್ಗೆಯೇ ತಯಾರಿಸಿದಳು. ನಾವೇ ಕುಳಿತುಕೊಂಡು ಹೊಟ್ಟೆತುಂಬ ಊಟಮಾಡಿದೆವು. ಆ ಸಿತಾರಿನ ಹುಡುಗ ಅಷ್ಟು ಊಟಮಾಡಿದ್ದನ್ನು ನಾನು ನೋಡಿಯೇ ಇರಲಿಲ್ಲ.

"ಎರಡು ಮೂರು ದಿನಗಳ ನಂತರ ಇಬ್ಬರು ನನ್ನನ್ನು ಹುಡುಕುತ್ತ

ಒಂಪರು. ಯಜಮಾನನ ಹತ್ತಿರ ನನ್ನ ವಿಚಾರವಾಗಿ ವಿಚಾರಿಸಿದರು. ನನ್ನ ವಿಚಾರವಾಗಿ ಆತ ಒಳ್ಳೆಯ ಮಾತನ್ನೇ ಹೇಳಿದ. ಆ ಬೊಹಿಮಿಯರಲ್ಲಿ, ಒಬ್ಬ ನೋಡುವದಕ್ಕೆ ತುಂಬ ಚುರುಕಾಗಿದ್ದ. ನ್ಯೂಯಾರ್ಕಿನಲ್ಲಿ ಬೊಹಿಮಿಯನ್ ಭಾಷೆಯ ಪತ್ರಿಕೆಯನ್ನೇ ಹೊರಡಿಸುತ್ತಿದ್ದ. ಇನ್ನೊಬ್ಬನು ಸಾಮಾನುಗಳನ್ನು ಆಮದು ಮಾಡುವ ಸಿರಿವಂತ. ಅವರಿಬ್ಬರೂ ಜೊತೆಯಾಗಿ ಪ್ರಯಾಣ ಮಾಡುತ್ತಿದ್ದರು. ಅವರು 'ನ್ಯೂಯಾರ್ಕದಲ್ಲಿ ಜೀವನ ತುಂಬ ಸುಲಭ' ಎಂದು ಹೇಳಿದರು. ತಾವು ನ್ಯೂಯಾರ್ಕಕ್ಕೆ ಹಿಂದಿರುಗುವಾಗ ನನ್ನ ಸಲುವಾಗಿ ಹಡಗಿನಲ್ಲಿ ಒಂದು ಟಿಕೇಟ ಕೊಂಡುಕೊಳ್ಳುವುದಾಗಿ ಹೇಳಿದರು. ನನ್ನ ಯಜಮಾನ "ನೀನು ಹೋಗು. ಇಲ್ಲಿ ನಿನಗೆ ಸರಿಯಾದ ಕೆಲಸವಿಲ್ಲ. ನೀನು ಮುಂದಕ್ಕೆ ಹೋಗುವದು ಬಹಳ ಒಳ್ಳೆಯದು, ಅದರಿಂದ ನನಗೆ ತುಂಬ ಸಂತೋಷ" ಎಂದ. ನಾನು ನ್ಯೂಯಾರ್ಕಿಗೆ ಬಂದುದು ಹೀಗೆ."

ಆ ರಾತ್ರಿ ರುಡೊಲ್ಫ, ಪಾಲಿ ಕೈ ಕೈ ಹಿಡಿದುಕೊಂಡು ಮನೆಗೆ ಹೊರಟ್ಟರು. ಚಳಿಗಾಳಿ ಅವರ ಬೆನ್ನ ಹಿಂದೆ ಮೊರೆಯುತ್ತಿತ್ತು. ಅವಳು ಹೊಸ ವರುಷದ ಮೊದಲ ರಾತ್ರಿ ಮನೆಯವರನ್ನೆಲ್ಲ ತಮ್ಮ ಮನೆಗೆ ಊಟಕ್ಕೆ ಕರೆಯೋಣವೆಂದು ಸೂಚಿಸಿದಾಗ ರುಡೊಲ್ಫನ ಹೃದಯ ಸಂತೋಷದಿಂದ ಕುಣಿಯಿತು. "ಒಳ್ಳೆ ಊಟವನ್ನು ತಯಾರಿಸೋಣ. ನಿಮ್ಮ ತಾಯಿಗೆ ಕೆಲಸ ಮಾಡುವದಕ್ಕೆ ಬಿಡಬಾರದು. ಅವಳು ಜತೆಯಲ್ಲಿ ಕುಳಿತು ಊಟಮಾಡಲಿ" ಎಂದು ಅಂದಳು ಪಾಲಿ.

"ನೀನು ಬಹು ಒಳ್ಳೆಯವಳು ಪಾಲಿ" ಅವನು ಮೆತ್ತಗೆ ನುಡಿದ.

ಅವನು ಸರಳ ಹಾಗೂ ಪ್ರಾಮಾಣಿಕನಾದ ಹುಡುಗ. ಅವನಿಗೆ ತನ್ನ ಮನೆಯವರಿಗಿಂತ ಪಾಲಿ ಮತ್ತು ಅವಳ ಅಕ್ಕ-ತಂಗಿಯರಿಗೆ ಜಗತ್ತಿನಲ್ಲಿ ಹೆಚ್ಚು ಅನುಭವವಿದೆ ಎಂದು ತೋರಿತು.

— ೬ —

ಆ ಸಲದ ಚಳಿಗಾಲ ಒಕ್ಕಲಿಗನಿಗೆ ಸುಖದಾಯಕವಾಗಿರಲಿಲ್ಲ. ಚಳಿ ವಿಪರೀತವಾಗಿತ್ತು. ಕ್ರಿಸ್‌ಮಸ್‌ಗೆ ಮೊದಲೇನೋ ಸ್ವಲ್ಪ ಹಿಮ ಬಿದ್ದಿತ್ತು. ಆದರೆ ಆ ಮೇಲೆ ಹಿಮ ಬೀಳಲೇ ಇಲ್ಲ. ಮಳೆಯೂ ಬೀಳಲಿಲ್ಲ. ಫೇಬ್ರುವರಿ

ಯಂತೆಯೇ ಮಾರ್ಚ ತಿಂಗಳೂ ಕಳೆಯಿತು. ಹೀಗೆ, ಗಾಳಿ ದೇಶಕ್ಕೆಲ್ಲ ಕಷ್ಟ ವನ್ನು ತರುತ್ತಿದ್ದಾಗ ರೋಜಕಿ ತನ್ನ ಕಿಟಕಿಯಲ್ಲಿ ಕುಳಿತಿರುತ್ತಿದ್ದ. ಅವನೂ ಅವನ ಮಕ್ಕಳೂ ಸೇರಿ ಒಂದು ದೊಡ್ಡ ಹೊಲ ತುಂಬ ಗೋದಿಯನ್ನು ಬಿತ್ತಿ ದ್ದರು. ಬೀಜವೆಲ್ಲ ನೆಲದಲ್ಲಿಯೇ ಹಿಮದಿಂದ ಹೆಪ್ಪುಗಟ್ಟಿ ಹೋಗಿತ್ತು. ಇನ್ನು ಆ ಭೂಮಿಯನ್ನೆಲ್ಲ ಇನ್ನೊಮ್ಮೆ ಉತ್ತು ದನಕರುಗಳಿಗಾಗಿ ಜೋಳವನ್ನು ಬಿತ್ತ ಬೇಕು. ಹಿಂದೆಯೂ ಒಮ್ಮೆ ಹೀಗೆಯೇ ಆಗಿತ್ತು. ಆಗ ಮಕ್ಕಳೆಲ್ಲ ಚಿಕ್ಕವರು. ಆಗ ರೋಜಕಿ ತನ್ನ ಬಗ್ಗೆ ಹೆಚ್ಚು ಯೋಚನೆ ಮಾಡಿರಲೇಇಲ್ಲ. ತಾನು ಮತ್ತು ಮೇರಿಯ ವಿಷಯದಲ್ಲಿ ಅವನಿಗೆ ತುಂಬ ನಂಬಿಕೆಯಿತ್ತು. ಏನು ಬಂದರೂ ಸಹಿಸುವದಕ್ಕೆ ಅವರಿಬ್ಬರೂ ಸಿದ್ಧರೇ. ಹೇಗಾದರೂ ಮಾಡಿ ಜೀವನ ವನ್ನು ಸಾಗಿಸಿಕೊಂಡು ಹೋಗಬಲ್ಲರು. ಆ ಧೈರ್ಯ ಅವರಿಗೆ ಇತ್ತು. ಅವರ ಮಕ್ಕಳ ವಿಚಾರವಾಗಿಯೇ ಅವರಿಗೆ ನಂಬಿಕೆ ಇರಲಿಲ್ಲ. " ರುಡೊಲ್ಫ ಮತ್ತು ಪಾಲಿ ಸಂಸಾರ ಆರಂಭಿಸುವಾಗಲೇ ಹೀಗಾಯಿತಲ್ಲ" ಎಂಬ ಕೊರಗು ಅವನಿಗೆ.

ಗಾಳಿ ಬೀಸಿ ಕಿಟಕಿಯ ಬಾಗಿಲುಗಳೆಲ್ಲ ಬಡಿದುಕೊಳ್ಳುತ್ತಿದ್ದಂತೆ ರೋಜಕಿ ಕಿಟಕಿಯ ಬಳಿ ಕುಳಿತು ವಿಚಾರ ಮಾಡುವನು. ನ್ಯೂಯಾರ್ಕಿನಲ್ಲಿ ಕಟ್ಟಿಗೆಯ ಕೆಲಸದಲ್ಲಿರುವಾಗಲೂ ಹೀಗೆಯೇ ಆದಿತ್ಯವಾರ ಅವನು ಯೋಚಿಸುತ್ತಿದ್ದ. ಅಂದಿನಿಂದ ಅವನಿಗೆ ಈ ಯೋಚನೆ ಕಾಡುತ್ತಿರಲಿಲ್ಲ. ಆಗಿನ ಯೋಚನೆ ತನ್ನೊಬ್ಬನನ್ನು ಕುರಿತಾಗಿತ್ತು. ಈಗಲಾದರೆ ಮಕ್ಕಳ ಸುಖವನ್ನು ಕುರಿತು ಯೋಚನೆ. ತನ್ನ ನಂತರ ಅವನ ಮಕ್ಕಳು ಇಲ್ಲಿಯೇ ನಿಂತು ಕಷ್ಟಪಟ್ಟು ದುಡಿಯಬೇಕೆಂದು ಅವನು ಇಷ್ಟೆಲ್ಲ ಹಸಿವು ತಾಪಗಳನ್ನೆಲ್ಲ ಅನುಭ ವಿಸುತ್ತಿರುವದು.

ಅವರೆಲ್ಲ ಬಹಳಷ್ಟು ಕಷ್ಟಪಟ್ಟು ದುಡಿಯಬೇಕಾಗಬಹುದು. ಅದರಿಂದ ಬದುಕನ್ನು ತಳ್ಳುವದು ಹೊರತಾಗಿ ಹೆಚ್ಚೇನೂ ಅವರಿಗೆ ದೊರೆಯಲಾರದು. ಆದರೆ ಭೂಮಿಯ ಕೆಲಸದಲ್ಲಿಯೇ ಅವರಿದ್ದರೆ ಅವರು ಇನ್ನೊಬ್ಬರ ಹಂಗಿಗೆ ಒಳಪಡಬೇಕಾಗಿಲ್ಲ. ಕಷ್ಟವೇನೋ ಇದೆ. ಬೆಳೆಗಳೆಲ್ಲ ಬೆಳೆದು ನಿಂತಾಗ,ಕಾಳು ಚಳಿಯಿಂದ ಹೆಪ್ಪುಗಟ್ಟಿ ಕಷ್ಟ ತೋರಬಹುದು. ದನಗಳಿಗೆ ಆಹಾರವಿಲ್ಲದೇ ದನಗಳನ್ನು ಮಾರಬೇಕಾಗಿ ಬಂದು ಕಷ್ಟವಾಗಬಹುದು. ಆದರೆ ಉಳಿದ

ವರ್ಷಗಳಲ್ಲಿ ಎಲ್ಲವೂ ಚನ್ನಾಗಿ ನಡೆದಾಗ ಏನೂ ಕಷ್ಟವಿಲ್ಲ. ಬೆಳೆದುದೆಲ್ಲ ನಮ್ಮದೇ. ಕಾರ್ಖಾನೆಗಳಲ್ಲಾದರೆ ಒಡೆಯರು, ದಬ್ಬಾಳಿಕೆ ಮಾಡುವವರು, ಇವರಲ್ಲಿ ಯಾರ ಪಕ್ಷ ವಹಿಸಿದರೂ ಕಷ್ಟ; ಹೀಗೆ ಇಲ್ಲಿ ಅಂಥದೇನೂ ಇಲ್ಲ. ಅಪ್ರಾಮಾಣಿಕರೂ, ದುಷ್ಟರೂ ಆದ ಜನರ ಸಂಬಂಧವಿಲ್ಲ. ಆ ಭಯಂಕರ ಕಹಿಯಾದ ಅನುಭವಗಳನ್ನೆಲ್ಲ ಅವನು ಅನುಭವಿಸಿದ್ದ. ಅಪ್ರಾಮಾಣಿಕರೂ ವಂಚಕರೂ ಆದ ಗಂಡಸರು, ಕುಹಕಿಗಳೂ ದುಷ್ಟರೂ ಆದ ಹೆಂಗಸರ ರೂಪ ವನ್ನು ಅವನು ಕಂಡಿದ್ದ.

ಹಳ್ಳಿಯಲ್ಲಿ ಒಬ್ಬ ಕೆಟ್ಟ ಮನುಷ್ಯನಿದ್ದರೆ ಅವನಿಂದ, ಅವನ ಭೂಮಿ ಯಿಂದ, ನಾವು ದೂರವಿದ್ದು ಬಿಡಬಹುದು. ಪಟ್ಟಣದಲ್ಲಾದರೆ ನಮ್ಮ ನೆರೆಯ ವರ ಕಷ್ಟ ಕಾರ್ಪಣ್ಯ, ನೀಚತನಗಳು ನಮ್ಮ ಬದುಕಿನ ಅಂಗವಾಗಿ ನಿಲ್ಲು ತ್ತವೆ. ತನ್ನ ಬಾಳಿನಲ್ಲಿ ಕಂಡ ಅತಿ ನೀಚರೆಂದರೆ ಮನುಷ್ಯರು ಎಂದು ಅವನು ಅನುಭವ ಪಟ್ಟಿದ್ದ. ದುಷ್ಟ ವಿಷಕಾರಕ ಜನರು, ಲಂಡನ್ ನಗರದಲ್ಲಿ ಕಂಡ ಕೆಲವು ಭಯಂಕರ ಮೋರೆಗಳು ಇಂದಿಗೂ ಅವನ ಕಣ್ಣಮುಂದೆ ಕಟ್ಟಿದಂತಿವೆ. ಕೆಟ್ಟ ಜನ ಎಲ್ಲೆಡೆಯೂ ಇದ್ದಾರೆ. ಅವನ ಹಳ್ಳಿಯಲ್ಲೂ ಇದ್ದಾರೆ. ಆದರೆ ಪಟ್ಟಣದ ರಕ್ತ ಹೀರುವ, ಮೋಸ ಮಾಡುವ, ವಿಷಪೂರಿತ ಮನುಷ್ಯರ ಹಾಗೆ ಈ ಹಳ್ಳಿಗರೆಲ್ಲ 'ಹದಗೊಳಿಸಲ್ಪಟ್ಟವರಲ್ಲ.' ಅಷ್ಟು ಕಠಿಣ ಹೃದಯದವರಲ್ಲ. ಹೊಲಿಗೆಯ ಉದ್ಯೋಗ ಮಾಡುವ ಇಬ್ಬರಿಗೆ ಸಹಾಯ ಮಾಡಿದ್ದ. ಈ ಸಂಘ ಟಿತ ಉದ್ಯಮಗಳೆಂದುಕೊಂಡು ಉಳಿದವರನ್ನು ತಳ್ಳಿ, ಒಬ್ಬ ಮೇಲಕ್ಕೆ ಬರು ವದರಲ್ಲಿ ಅವನಿಗೆ ನಂಬಿಕೆ ಇರಲಿಲ್ಲ. ಇಲ್ಲಿ ಆರೋಗ್ಯ ಚನ್ನಾಗಿಲ್ಲದಿದ್ದರೆ ಡಾಕ್ಟರ ಎಡ್ ನೋಡಿಕೊಳ್ಳುವದಕ್ಕಿದ್ದಾನೆ. ಸತ್ತರೆ ಆ ಬೊಜ್ಜು ದೇಹದ ದಯಾಳುವಾದ ಹೆಕಾಕ್ ನಿನ್ನನ್ನು ಸಮಾಧಿ ಮಾಡುತ್ತಾನೆ.

ತನ್ನ ಮಕ್ಕಳಂಥ ಪ್ರಾಮಾಣಿಕ ಮಕ್ಕಳು ಹೊಲದಲ್ಲಿ ದುಡಿಯಬೇಕು. ಎಷ್ಟೇ ಕಷ್ಟ ಬಂದರೂ ಪಟ್ಟಣಕ್ಕೆ ಹೋಗಿ ಸುಖಪಡುವದು ಬೇಡವೆಂದು ರೋಜಕಿಗೆ ತೋರುತ್ತಿತ್ತು. ತನ್ನ ಮಕ್ಕಳಲ್ಲಿ ಯಾವನಾದರೂ ಒಬ್ಬ ವಂಚಕ ನಾಗಿ ಇತರ ತಮ್ಮಂದಿರನ್ನು ಮೋಸಗೊಳಿಸುವವನಿದ್ದರೆ ಅವನನ್ನು ಪಟ್ಟ ಣಕ್ಕೆ ಸಾಗಹಾಕಬಹುದು. ಆದರೆ ಅವನಿಗೆ ಅಂಥ ಮಕ್ಕಳಿರಲಿಲ್ಲ. ರುಡೋ ಲ್ಫ ಅತೃಪ್ತನಾಗಿರಬಹುದು. ಆದರೆ ಅವನಿಗೆ ಮೆಚ್ಚುವಂಥ ಮಾತನ್ನು ಯಾರಾ

ದರೂ ಆಡಿದರೆ ತಾನು ತೊಟ್ಟುಕೊಂಡ ಅಂಗಿಯನ್ನೇ ಅವರಿಗೆ ಕೊಟ್ಟು ಬಿಟ್ಟಾನು. ತನ್ನ ಮಕ್ಕಳಿಲ್ಲ ಈ ಜಗತ್ತಿನಲ್ಲಿದ್ದ ಮಾನವರಲ್ಲಿಪ್ಪ ಕಾರಿಣ್ಯದ ಪರಿಚಯಮಾಡಿಕೊಳ್ಳದೆಯೇ ಬಾಳನ್ನು ಪ್ರವೇಶಿಸಬೇಕು, ಎಂಬದೇ ಅವನಿಗೆ ಬೇಕಾದುದು. ಅವರ ತಾಯಿಯೂ ತಾನೂ ಅವರಿಗೆ ಅಂಥ ಶಿಕ್ಷಣವನ್ನು ಕೊಟ್ಟಿಲ್ಲವೆಂದು ಆಗಾಗ ಅಂದುಕೊಳ್ಳುವನು.

ಈ ವಿಚಾರಗಳು ಆತನ ಅನುಭವವನ್ನು ನೆನಪಿಗೆ ತರುತ್ತಿದ್ದವು. ಎಷ್ಟು ಸ್ವಲ್ಪದರಲ್ಲಿ ತಪ್ಪಿತ್ತು.! ಅವನು ಒಮ್ಮೆ ಒಬ್ಬ ಹಸಿದ ಮಗುವಿನ ಕೈಯಿಂದ ಹಣವನ್ನು ಎತ್ತಿಕೊಂಡಿದ್ದ. ಆಗ ಆ ಮಗು ಆಸೆಯಿಂದ ಅದನ್ನು ಹಿಡಿದು ಕೊಂಡಿತ್ತು. ಅದು ಆ ಹಣವನ್ನು ಯಜಮಾನನಿಗೆ ಕೊಡಬೇಕಾಗಿತ್ತು. ಅಂದಿ ನಿಂದ ಇಂದಿನ ವರೆಗೆ ಎಂಥ ಕಷ್ಟಬಂದರೂ ಯಾರಿಂದಲೂ ಒಂದು ಸೆಂಟ್ ಹಣ ವನ್ನು ತೆಗೆದುಕೊಂಡಿರಲಿಲ್ಲ. ಹಸಿವು ಸಂಕಟಗಳಿಂದ ಕಂಗೆಟ್ಟು ತೊಳ ಲಂತಾದಾಗ ಯಾರ ಕಾಲಿಗೆ ಬೀಳುವದಕ್ಕೂ ಹೋಗಿರಲಿಲ್ಲ. ಈ ವಿಚಾರಗಳು ಅವನ ತಲೆಯಲ್ಲಿ ಬಂದಾಗಲೆಲ್ಲ ರೋಜಕಿ ತನ್ನ ಟೊಪ್ಪಿಗೆ, ಜಾಕೀಟು ಧರಿಸಿ ಕೊಟ್ಟಿಗೆಯ ಕಡೆಗೆ ಹೋಗುವನು. ಅಲ್ಲಿ ಕೆಲಸದ ಕುದುರೆಗಳಿಗೆ ಒಂದಿಷ್ಟು ಹೆಚ್ಚಾಗಿ ಓಟಧಾನ್ಯವನ್ನು ಕೊಡುವನು. ಅವು ತನ್ನ ಕೈಯಿಂದ ತೆಗೆದು ಕೊಂಡು ಮೆಲ್ಲುತ್ತಿರುವ ರೀತಿಯನ್ನು ನೋಡುತ್ತ ನಿಲ್ಲುವನು. ಅವು ಸಂತೋಷದಿಂದ ಕೆನೆಯುವಂತೆ ಮಾಡುವನು. ಅದೇ ಅವನು ತನ್ನ ವಿಚಾರ ವನ್ನು ವ್ಯಕ್ತಪಡಿಸುವ ರೀತಿ.

ವಸಂತಕಾಲ ಬಂದಿತು. ಆಕಾಶ ನೀಲ ಬಣ್ಣಕ್ಕೆ ತಿರುಗಿತು. ಆದರೆ ಎಲ್ಲೆಡೆಯಲ್ಲೂ ಹವೆ ರುಕ್ಷವಾಗಿತ್ತು. ಮಕ್ಕಳು ದನಕರುಗಳ ಮೇವಿನ ಜೋಳದ ಸಸಿಗಳನ್ನು ನಡುವದಕ್ಕೆ, ಗೋದಿಯ ಹೊಲವನ್ನು ಉಳುವದಕ್ಕೆ ಪ್ರಾರಂಭಿಸಿದ್ದರು. ರೋಜಕಿ ಬೇಲಿಯ ಮೂಲೆಯಲ್ಲಿ ನಿಂತು ಅದನ್ನೆಲ್ಲ ನೋಡುತ್ತಿದ್ದ. ನೆಲ ಒಣಗಿತ್ತು. ಕಂದು ಬಣ್ಣದ ಧೂಳು ದಟ್ಟವಾಗಿ ಹಾರಿ ಕುದುರೆ, ನೇಗಿಲು ಹೊಡೆಯುವವ, ಇವರ ಮೇಲೆ ಆವರಿಸಿಕೊಂಡುಬಿಟ್ಟಿತ್ತು. ಅದು ಕೆಟ್ಟ ಲಕ್ಷಣ.

ಮನೆಗೂ ರುಡೋಲ್ಫನ ಮನೆಗೂ ನಡುವೆ ಇರುವ ಹೊಲದಲ್ಲಿ ಹಸಿರು ಕಾಣಿಸತೊಡಗಿತ್ತು. ಆದರೆ ಚಳಿಗಾಲದಲ್ಲಿ ಬೀಸಿದ ಗಾಳಿಯ ಜೊತೆಯಲ್ಲಿ

ರಶಿಯನ್ ಕಾಡುತುಂಬೆಯ ಬೀಜಗಳು ಸಿಡಿದು ಬಂದು ಹೊಲದ ತುಂಬೆಲ್ಲ ಹುಟ್ಟಿಕೊಂಡಿದ್ದವು. ಅವನು ಅವುಗಳನ್ನು ಕಿತ್ತು ಹಾಕುವಂತೆ ಮಕ್ಕಳಿಗೆ ಹೇಳಿದ್ದ. ಅವು ಚನ್ನಾಗಿ ಬೇರೂರಿ ಇಡೀ ಹೊಲವನ್ನೇ ಆಕ್ರಮಿಸುತ್ತವೆಯೋ ಎಂದು ಭಯ ಅವನಿಗೆ. ಆದರೆ ರುಡೋಲ್ಫನು 'ಇದು ಮರುಳು' ಎಂದು ಬಿಟ್ಟಿದ್ದ. ಮಕ್ಕಳು ದನಕರುಗಳ ಮೇವಿಗಾಗಿ ಜೋಳವನ್ನು ನೆಡುವದಕ್ಕೆ ಕಷ್ಟ ಪಡುವದನ್ನು ನೋಡಿ, ರೋಜಕಿ ಅವರಿಗೆ ಈ ಕಾಡು ತುಂಬೆಯ ಗಿಡದ ಬಗ್ಗೆ ತೊಂದರೆ ಕೊಡುವದು ಸರಿಯಲ್ಲವೆಂದುಕೊಂಡ. ಆ ದೊಡ್ಡ ಹೊಲದಿಂದ ಸಾಕಷ್ಟು ಬೆಳೆ ಬಂದೀತು ಎಂದು ಅವನಿಗೆ ನಂಬಿಕೆ. ಇದರಿಂದ ದನಕರುಗಳ ಆಹಾರದ ಭಯವೊಂದು ತಪ್ಪುತ್ತದೆ. ಆ ವಿಚಾರವಾಗಿ ಅಸ್ಪಷ್ಟವಾಗಿದ್ದರೂ ಗಾಢವಾದ ನಂಬಿಕೆ ಇದ್ದಿತು. ಆ ಸಸಿಗಳ ವಿಲಕ್ಷಣವಾದ ಹಸಿರು ಬಣ್ಣ ಆ ಮುದುಕನಾದ ರೋಜಕಿಯ ಹೃದಯದಲ್ಲಿ ಹಿಂದಿನ ದಿನದ ಸವಿನೆನಪುಗಳನ್ನು ತರುತ್ತಿದ್ದವು. ಅವನು ಚಿಕ್ಕವನಾಗಿದ್ದಾಗ ಅಂಥ ಹಸಿರು ಬಣ್ಣದಿಂದೊಪ್ಪುವ ಆ ಹೊಲಗಳಲ್ಲಿ ಆಟವಾಡಿದ್ದ.

ಒಂದು ದಿನ ರುಡೋಲ್ಫ ಕಾರಿನಲ್ಲಿ ಪಟ್ಟಣಕ್ಕೆ ಹೋಗಿದ್ದ. ಅವನ ಕೊಟ್ಟಿಗೆಯ ಬಳಿ ಗದ್ದೆಯಲ್ಲಿ ಕೆಲಸದ ಕುದುರೆಗಳು ಸುಮ್ಮನೆ ನಿಂತಿದ್ದವು ರೋಜಕಿಯು ರುಡೋಲ್ಫನ ಮನೆಗೆ ಹೋಗಿ ಆ ಕುದುರೆಗಳನ್ನು ಗಾಡಿಗೆ ಹೂಡಿಕೊಂಡು, ಆ ಕಾಡು ತುಂಬೆಯ ಗಿಡಗಳನ್ನು ಕೀಳ ಹೊರಟ. ಆ ಕೆಲಸವನ್ನು ಮಾಡುವಾಗ ಅವನಲ್ಲಿ ಒಂದು ರೀತಿಯ ಅಪರಾಧಿಯ ಮುನ್ನೆಚ್ಚರಿಕೆಯ ಮನೋಭಾವ ಮೂಡಿಕೊಂಡಿತ್ತು. ಡಾಕ್ಟರ ಎಡ್‌ನ ಕಾವಲು ತಪ್ಪಿಸಿಕೊಂಡು ಈ ಕೆಲಸ ಮಾಡುತ್ತಿದ್ದೇನೆಂದು ಸಂತೋಷ ಅವನಿಗೆ. ಡಾಕ್ಟರ ಎಡ್ ಏಳು ವರ್ಷ ಈ ವೈದ್ಯಕೀ ವ್ಯವಸಾಯದಲ್ಲಿ ಮೊದಲು ಬಾರಿ ಬಿಡುವು ಮಾಡಿಕೊಂಡು ಚಿಕಾಗೋ ನಗರದಲ್ಲಿಯ ಒಂದು ನಗರದ ಆಸ್ಪತ್ರೆಯನ್ನು ನೋಡಲು ಹೋಗಿದ್ದ. ಆ ಕಾಡು ತುಂಬೆಯ ಗಿಡಗಳನ್ನೆಲ್ಲ ಕಿತ್ತುದಾಯಿತು. ಅದನ್ನೆಲ್ಲ ಸುಡಬೇಕಿತ್ತು. ಆಗಲಿಲ್ಲ. ಅದಕ್ಕೆ ಸಮಯಬೇಕು. ಅವನಿಗೆ ಉಸಿರು ಕಟ್ಟಿ ಬಂದಿತ್ತು. ಅದರಿಂದ ಕುದುರೆಗಳನ್ನು ತಿರುಗಿ ಹೊಡೆದುಕೊಂಡು ಹೊರಟ.

ಅವುಗಳನ್ನು ಕೊಟ್ಟಿಗೆಯಲ್ಲಿ ಕೂಡಿದ. ಆದರೆ ಗಾಡಿಯೊಳಗಿನ ತುಂಬೆ

ಗಿಡಗಳನ್ನು ಇಳಿಸಿಕೊಳ್ಳಲಾಗಲಿಲ್ಲ. ಎದೆಯಲ್ಲಿ ನೋವು ತೀವ್ರವಾಗಿತ್ತು. ಅದರಿಂದ ಅವನು ಮನೆಗೆ ಹೊರಟ. ಪ್ರತಿಯೊಂದು ಹೆಜ್ಜೆ ಇಟ್ಟಾಗಲು ಅವನು ಹೆಚ್ಚಾಗಿ ಬಗ್ಗಬೇಕಾಗುತ್ತಿತ್ತು. ಹಲಸಿನ ಕಾಯನ್ನು ಕೊಚ್ಚುವ ಚಾಕು ಕಾಯನ್ನು ಕತ್ತರಿಸುವಂತೆ ಆ ನೋವಿನ ತೀವ್ರತೆ ಅವನನ್ನು ಕೊಯ್ಯುತ್ತಿತ್ತು. ಗಾಳಿಯಚಕ್ರವಿರುವ ಸ್ಥಳಕ್ಕೆ ತಲುಪಿದಾಗ ಅವನು ಆ ಏಣಿಯನ್ನು ಹಿಡಿದುಕೊಂಡು ಸಾವರಿಸಿಕೊಳ್ಳಲು ಯತ್ನಿಸಿದ. ಅವನ ದೇಹ ತುಯ್ಯುತ್ತಿತ್ತು. ದೂರದಲ್ಲಿ ಪಾಲಿ ತೆಳ್ಳಗಿನ ಬೇಟೆ ನಾಯಿಯ ವೇಗದಿಂದ-ಓಡಿಬರುತ್ತಿರುವದು ಅವನಿಗೆ ಕಾಣಿಸಿತು. ಒಂದು ಕ್ಷಣದಲ್ಲಿ ಅವಳು ಅವನ ಕಂಕುಳಲ್ಲಿ ತನ್ನ ಹೆಗಲನ್ನು ಕೊಟ್ಟು ಸಾವರಿಸಿ ಹಿಡಿದಳು.

ಅವಳು " ನನ್ನಮೇಲೆ ಒರಗಿಕೋ. ಬಹಳ ಕಷ್ಟವಾಗುತ್ತದೆಯೇ ? ನಿಧಾನವಾಗಿ ಮನೆಗೆ ಹೋಗೋಣ " ಎಂದಳು.

ದೋಜಕಿಯ ಕಣ್ಣುಗಳು ನೋವಿನಿಂದ ಮಂಜಾಗುತ್ತಿದ್ದವು. ಅವನು ತನ್ನ ಕಾಲುಗಳಮೇಲೆ ತುಂಬಾ ಕಷ್ಟದಿಂದ ನಿಂತಿದ್ದ. ದಾರಿ ಗುರುತಿಸಿ ಹೋಗುವದು ಅವನಿಗೆ ಸಾಧ್ಯವಿರಲಿಲ್ಲ. ಅಂತೂ ಹೇಗೋ ಅವರು ಮನೆಗೆ ತಲುಪಿದರು. ಮುಂದೆ ಪಾಲಿಯ ಹಾಸಿಗೆಯ ಮೇಲೆ ಮಲಗಿದುದು, ಅವಳು ಬೇಗ ಬೇಗ ಬಿಸಿನೀರಿನಲ್ಲಿ ಬಟ್ಟೆಯನ್ನು ಅದ್ದಿ ಅದ್ದಿ ಎದೆಯಮೇಲಿರಿಸುತ್ತಿದ್ದುದು, ಅವನಿಗೆ ನೆನಪು. ಅವಳು ಒಲೆಗೆ ಒಂದಿಷ್ಟು ಇದ್ದಲು ಹಾಕುವದಕ್ಕೆ ಎದ್ದಳು. ಆ ದೊಡ್ಡ ಕಪ್ಪು ಪಾತ್ರೆಯಲ್ಲಿ ನೀರು ಒಂದೇ ಸವನೆ ಕುದಿದು ಮರಳುತ್ತಿದ್ದಿತು. ಅವಳು ಅವನಿಗ ಶಾಕವನ್ನು ಕೊಡುತ್ತಾ ಒಂದು ಗಂಟೆಕಾಲ ಕುಳಿತಿದ್ದಳು. ಅವಳು ಆ ಮೇಲೆ ಹೇಳಿದ ಮಾತು ಇದು. ಅಷ್ಟು ಹೊತ್ತಿನತನಕ ಅವನು ಕಟ್ಟಿಗೆಯಂತೆ ಕೊರಡಾಗಿ, ಕಪ್ಪಾಗಿ ಬಿದ್ದುಕೊಂಡಿದ್ದ. ಮೈಯಿಂದ ಬೆವರು ಒಂದೇ ಸವನೆ ಸುರಿಯುತ್ತಿತ್ತು.

ನೋವಿನ ತೀವ್ರತೆ ಕಡಿಮೆಯಾಗುತ್ತ, ಕಚ್ಚಿದ್ದ ದವಡೆ ಸಡಿಲಾಗುತ್ತ ಬಂತು. ಕಣ್ಣಿನ ಸುತ್ತಲು ಕಪ್ಪು ಕಡಿಮೆಯಾಗುತ್ತ ಸ್ವಾಭಾವಿಕವಾದ ಬಣ್ಣ ಬರತೊಡಗಿತು. ಸೊಸೆ ಅವನ ಅಂಗಿಯ ಗುಂಡಿಗಳನ್ನು ಹಾಕುತ್ತಿದ್ದಾಗ ಅವನಿಗೆ ಎಚ್ಚರ ಹುಟ್ಟಿ ನೀಳವಾದ ಉಸಿರು ಹೊರಗೆ ಬಂದಿತು.

" ಈಗ ನನಗೆ ಸುಖವಾಗಿದೆ ಪಾಲಿ. ಅಬ್ಬಾ ! ಎಂತಹ ಭಯಂಕರ

ವಾದ ನೋವು. ನಿನಗೆ ಬಹಳ ತೊಂದರೆ ಕೊಡಬೇಕಾಯಿತು.

ಪಾಲಿಯ ಮುಖ ಕೆಂಪಾಯಿತು. ಅವಳಲ್ಲಿ ಕಳವಳ ತುಂಬಿಕೊಂಡಿತ್ತು. "ನೋವು ನಿಜವಾಗಿಯೂ ಕಡಿಮೆಯಾಗಿದೆಯೇ? ಮನೆಗೆ ಟೆಲಿಫೋನ ಮಾಡಲೇ?"

ರೋಜಕ ಕಣ್ಣುಗಳನ್ನು ಮುಚ್ಚಿ ತೆರೆಯುತ್ತಿದ್ದ. "ಟೆಲಿಫೋನ ಮಾಡ ಬೇಡ ಪಾಲಿ. ನನ್ನ ಹೆಂಡತಿಗೆ ಭಯ ಹುಟ್ಟಿಸುವದರಿಂದ ಏನೂ ಲಾಭವಿಲ್ಲ. ಇಲ್ಲಿ ಆರಾಮಾಗಿದ್ದೇನೆ. ಇಲ್ಲಿ ಒಳ್ಳೇ ತಂಪಾಗಿದೆ. ನಿನಗೆ ತೊಂದರೆಯಾಗ ದಿದ್ದರೆ ನನಗೆ ಪೂರ್ಣ ಆರಾಮು ಆಗುವ ತನಕ ಇಲ್ಲಿಯೇ ಬಿದ್ದುಕೊಳ್ಳು ತ್ತೇನೆ. ಈಗ ನೋವೇನೂ ಇಲ್ಲ, ಸುಖವಾಗಿ ಇದ್ದೇನೆ."

ಪಾಲಿ ಬಗ್ಗಿ ಅವನ ಮೋರೆಯ ಮೇಲಿನ ಹನಿಗೊಂಡ ಬೆವರನ್ನು ಒರ ಸುತ್ತಿದ್ದಳು. "ಒಮ್ಮೆ ಕಡಿಮೆಯಾಯಿತಲ್ಲ, ಅದೇ ಸಂತೋಷ," ಅವಳ ಧ್ವನಿ ಯಲ್ಲಿ ನಡುಕ ತುಂಬಿಕೊಂಡಿತ್ತು, "ನೀನು ನರಳುವದನ್ನು ನೋಡುವಾಗ ನನ್ನ ಹೃದಯ ಒಡೆದು ಹೋಗುವಂತಾಗುತ್ತಿತ್ತು."

ರೋಜಕ ಅವಳನ್ನು ಚಹದ ಪಾತ್ರೆಯ ಸಮೀಪಕ್ಕೆ ಕುಳಿತುಕೊಳ್ಳಲು ಸನ್ನೆ ಮಾಡಿದ. ಅವಳನ್ನು ವಾತ್ಸಲ್ಯಪೂರ್ಣ ಕಣ್ಣುಗಳಿಂದ ನೋಡುತ್ತಿದ್ದ. "ನೀನು ನನ್ನನ್ನು ಬಹಳ ಚನ್ನಾಗಿ ನೋಡಿಕೊಂಡಿದ್ದೀಯಾ. ನಾನು ಇದನ್ನು ಎಂದೆಂದಿಗೂ ಮರೆಯುವದಿಲ್ಲ. ನಾನು ಕಾಯಿಲೆ ಬಿದ್ದು ನಿನಗೆ ತೊಂದರೆ ಕೊಡುವದು ಬೇಸರ. ಅಲ್ಲಿ ಬಣತದ ಮನೆಯಲ್ಲಿ ಕುಳಿತುಕೊಂ ಡಾಗ, ನೀನು ಹುಡುಗಿ, ರೋಗದ ಪರಿಚಯ ಅಷ್ಟಿಲ್ಲ, ಅಂಜಿಕೊಳ್ಳಬಹುದು. ನೀನು ಗರ್ಭಿಣಿಯೋ ಏನೋ, ಎಂದುಕೊಂಡೆ."

ಪಾಲಿ ಅವನ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡಳು. ಅವನ ಕಣ್ಣುಗಳಲ್ಲಿ ವಾತ್ಸಲ್ಯ, ನಂಬುಗೆ ತುಂಬಿಕೊಂಡಿತ್ತು. ಅದರಿಂದ ಅವನು ಒಂದು ಬಗೆಯ ಆನಂದ ಪಡೆಯುತ್ತಿದ್ದಂತೆ ಅನ್ನಿಸುತ್ತಿತ್ತು. ಅವಳು ತನ್ನ ಅಂದವಾದ ಹುಬ್ಬುಗಳನ್ನು ಒಂದಿಷ್ಟು ಗಂಟು ಹಾಕಿಕೊಂಡು ಅವನನ್ನೇ ನೋಡುತ್ತ ಕ್ಷಣಕಾಲ ಕುಳಿತಿದ್ದಳು. ನಂತರ ಹೂವಿನಂತಹ ಮುಗುಳು ನಗು ವನ್ನು ನಕ್ಕಳು.

"ಹುಂ, ಹಾಗೇನೋ ಆಗುತ್ತಿರಬೇಕು ಅನಿಸುತ್ತದೆ. ಈ ಮಾತನ್ನು

ನನ್ನ ತಾಯಿಗೆ, ರುಡೋಲ್ಫನಿಗೆ ಸಹ ಹೇಳಿಲ್ಲ. ನಿನಗೇ ಮೊದಲು ತಿಳಿವದ್ದು."

ಅವನು ಅವಳ ಕೈಯನ್ನು ಮೃದುವಾಗಿ ಅದುಮಿದ. ಅವನ ಕೈ ತಿರುಗಿ ಬೆಚ್ಚಗಾಗತೊಡಗಿತ್ತು. ಹಳದಿ ಕಪ್ಪುಬಣ್ಣದ ಅವನ ಕಣ್ಣುಗಳಲ್ಲಿ ಹೊಳಪು ಮೂಡತೊಡಗಿತ್ತು.

"ನನಗೆ ಆ ಮಗುವನ್ನು ಕಾಣುವದಕ್ಕೆ ಬಹಳ ಆಸೆ, ಪಾಲಿ" ಅವನು ಇಷ್ಟೇ ನುಡಿದ. ನಂತರ ಕಣ್ಣುಗಳನ್ನು ಮುಚ್ಚಿಕೊಂಡು ಮಲಗಿಕೊಂಡ. ಅವನ ಮುಖದಮೇಲೆ ಮೆಲುನಗು ಸುಳಿಯುತ್ತಿತ್ತು. ಆದರೆ ಪಾಲಿ ಯೋಚಿಸುತ್ತ ಕುಳಿತಳು. ಅವಳ ತಾಯಿ, ರುಡೋಲ್ಫ ಅವಳನ್ನು ಪ್ರೀತಿಸುತ್ತಿದ್ದರು. ಆದರೆ ರೋಜಕಿಗಿಂತಲೂ ಹೆಚ್ಚಾಗಿ ಅವಳನ್ನು ಪ್ರೀತಿಸುವವರು ಯಾರೂ ಇಲ್ಲವೆಂದು ಅವಳಿಗೆ ಅನಿಸತೊಡಗಿತ್ತು. ಅವಳು ಹುಬ್ಬು ಗಂಟಿಕ್ಕಿ ಈ ಸಮಸ್ಯೆಗೆ ಪರಿಹಾರವನ್ನು ಯೋಚಿಸುತ್ತಿದ್ದಳು. ಕೆಲವರಿಗೆ ಸಂಗೀತವನ್ನು ಕೇಳುವ ವಿಶಿಷ್ಟವಾದ ಕಿವಿ, ಚಿತ್ರವನ್ನು ನೋಡಿ ಸಂತೋಷಪಡುವ ವಿಚಿತ್ರವಾದ ಕಣ್ಣುಗಳು ಇರುವಂತೆ, ರೋಜಕಿಗೆ ಜನರನ್ನು ಪ್ರೀತಿಸುವ ಒಂದು ವಿಶಿಷ್ಟವಾದ ಶಕ್ತಿಯಿದೆ ಎಂದು ಅವಳಿಗೆ ತೋರಿತು. ಬಹಳ ಎದ್ದು ಕಾಣಿಸಿಕೊಳ್ಳದೇ ಆ ಗುಣ ಅವನಲ್ಲಿ ಬೆಳೆದು ಬಂದಿತ್ತು. ಅವನ ಕಣ್ಣುಗಳಲ್ಲಿ ಅದನ್ನು ಕಾಣಬಹುದಿತ್ತು. ಅದರಿಂದಲೇ ಆ ಕಣ್ಣುಗಳು ಅಷ್ಟು ಮೋಹಕವಾಗಿದ್ದವು. ಅವನ ಕೈಗಳಲ್ಲಿಯೂ ಅದನ್ನು ಅನುಭವಿಸಬಹುದಿತ್ತು. ಅವನಿಗೆ ನಿದ್ದೆ ಹತ್ತಿದ ನಂತರವೂ ಆವಳು ಅವನ ಕೈಗಳನ್ನು ಹಿಡಿದುಕೊಂಡೇ ಇದ್ದಳು. ಆ ಕೈಗಳು ಬೆಚ್ಚಗಾಗಿ, ಅಗಲವಾಗಿ, ಮೃದುವಾಗಿ ಇದ್ದವು ಅಂಥ ಕೈಗಳನ್ನು ಹಿಂದೆ ಎಲ್ಲಿಯೂ ಕಂಡಿರಲಿಲ್ಲ. ಅವು ಮಾಯದ ಕೈಗಳಂತೆ ಇದ್ದವು. ಅಷ್ಟು ಜೀವ ತುಂಬಿಕೊಂಡು, ಚುರುಕಾಗಿ ಅರ್ಥವತ್ತಾಗಿ ಇದ್ದವು — ಒಬ್ಬ ರೈತನ ಕೈಗಳು ಆ ರೀತಿ ಇರುವದು ವಿಚಿತ್ರ. ಅವಳು ನೋಡಿದ ರೈತರ ಕೈಗಳು ಬಹಳ ಬಿರುಸಾದ ಮುಷ್ಟಿಯಿರುವಂತಹವು. ದೊಡ್ಡ ಕೊಡತಿಗಳಂತೆ ಇದ್ದವು. ಇಲ್ಲವೇ ಗಂಟು ಗಂಟಾಗಿ ಎಲುವುಗಳು ಕಾಣುತ್ತಿದ್ದವು. ನೋಡುವವಕ್ಕೆ ಅಸಹ್ಯವಾಗಿ ಬಿರುಸಾದ ಬೆರಳುಗಳಿಂದ ಕೂಡಿದ್ದವು. ಆದರೆ ರೋಜಕಿಯ ಕೈಗಳು ಮೃದುವಾದ ಪಾದರಸದಂತೆ ಒಳ್ಳೇ ಬಲಿಷ್ಠವಾಗಿ ಹಳೆಯ ಸಿಗರೇಟಿನ ಬಣ್ಣವನ್ನು ತಳೆದಿದ್ದವು. ಅಂಗೈ ತುಂಬ ನೀರವಾದ ನೆರಿಗೆಗಳು ಬಿದ್ದಿದ್ದವು.

ಆವು ಬೆಚ್ಚಗಿದ್ದವು. ಕೆಲಸಮಾಡಿ ಕಂದು ಬಣ್ಣ ಹೊಂದಿದ್ದವು. ಜಾಣತನ ಅವರಲ್ಲಿ ಕಾಣುತ್ತಿತ್ತು. ಆ ಔದಾರ್ಯ ಮತ್ತೇನೋ— ಅದನ್ನೆ ಪಾಲಿ ಮೋಹಕಶಕ್ತಿ ಅನ್ನುತ್ತಿದ್ದುದು. ಅದು ಚುರುಕುತನದ ಸೌಂದರ್ಯದಿಂದ ಕೂಡಿತ್ತು.

ಪಾಲಿ ಆಗ ಕಳೆದ ಸಮಯವನ್ನು ಬಹುದಿನಗಳ ವರೆಗೆ ಮರೆಯಲಿಲ್ಲ. ಆವಳಿಗೆ ಹೊಸ ಪ್ರಕಾಶ ಕಂಡ ಸಮಯವದು. ಬಾಳಿನ ವಿಚಾರವಾಗಿ, ಆ ಕೈಯಿಂದ ಅಂದು ತಿಳಿದಷ್ಟನ್ನು ಆವಳು ಇಷ್ಟು ದಿನಗಳ ವರೆಗೆ ತಿಳಿದಿರಲಿಲ್ಲ. ಆವನ ಆತ್ಮದ ಸ್ವರೂಪದ ಅರಿವಾಯಿತು. ಶಬ್ದಗಳಿಂದ ವರ್ಣಿಸಲಸಾಧ್ಯ ವಾದ ಸಂದೇಶವನ್ನು ಆ ಕೈ ತನಗೆ ಕೊಡುತ್ತಿದ್ದಂತೆ ಅವಳಿಗೆ ಅನಿಸಿತು.

ರುಡೋಲ್ಫ ಕಾರಿನಲ್ಲಿ ಬರುತ್ತಿರುವ ಸಪ್ಪಳ ಕೇಳಿ ಆವನನ್ನು ನೋಡಲು ಓಡಿದಳು.

“ ಓ ರುಡೀ, ನಿನ್ನ ತಂದೆಗೆ ಬಹಳ ಕಾಹಿಲೆಯಾಗಿತ್ತು. ಅವನು ತುಂಬ ಬೇಸರಗೊಂಡಿದ್ದ. ಕಾಡುತುಂಬೆಯ ಗಿಡಗಳನ್ನು ಅವನು ಕಿತ್ತು ಹಾಕಿದ. ನಂತರ ಅವನಿಗೆ ಮನೆಗೆ ಮರಳುವದೇ ಕಷ್ಟವಾಯಿತು ಅವನು ಎಲ್ಲಿ ಜೀವ ಬಿಡುವನೋ ಎಂದು ನನಗೆ ಭಯವಾಯಿತು. ಅವನು ನರಳುವ ರೀತಿ ನೋಡು. ”

ರುಡೋಲ್ಫ ಕಾರಿನಿಂದ ಜಿಗಿದ. “ ಈಗವನು ಎಲ್ಲಿದ್ದಾನೆ? ” ಎಂದು ಕೇಳಿದ.

“ ಹಾಸಿಗೆಯ ಮೇಲೆ. ಅವನಿಗೀಗ ನಿದ್ದೆ ಹತ್ತಿದೆ. ಅವನನ್ನು ನಾನು ಬಹಳವಾಗಿ ಪ್ರೀತಿಸುತ್ತೇನೆ. ಆದುದರಿಂದ ನನಗೆ ಬಹಳ ಭಯವಾಯಿತು. ”

ಇಬ್ಬರೂ ಕೈ ಕೈ ಹಿಡಿದುಕೊಂಡು ಒಳಗೆ ನಡೆದರು. ಆ ಹೊತ್ತು ಸಂಜೆ ಅವರು ರೋಜಕಿಯನ್ನು ಮನೆಗೊಯ್ದು ಹಾಸಿಗೆಯ ಮೇಲೆ ಮಲಗಿಸಿದರು. ‘ತಾನೀಗ ಆರಾಮ ಇದ್ದೇನೆ’ ಎಂದು ಅವನು ಬಹುವಾಗಿ ತಕರಾರು ಮಾಡಿದ.

ಮರುದಿನ ರೋಜಕಿ ಒಳ್ಳೆಯ ಬಟ್ಟೆಗಳನ್ನು ಧರಿಸಿ ಉಪಹಾರ ಮಾಡಿದ ಆ ದಿನದ ಕಾಫಿ ಎಂದಿಲ್ಲದಷ್ಟು ರುಚಿಯಾಗಿದೆ ಎಂದು ಹೇಳಿದ. ಡಾಕ್ಟರ ಎಡ್ ಬಂದಕೂಡಲೇ ಇಲ್ಲದ ಕತೆಗಳನ್ನು ಹೇಳಕೂಡದೆಂದು ಮಕ್ಕಳಿಗೆ ಎಚ್ಚರಿಕೆ ಕೊಟ್ಟ. ಉಪಹಾರದ ನಂತರ ಬಟ್ಟೆಗಳನ್ನು ರಿಪೇರಿ ಮಾಡಿದ.

ಮೇರಿಯನ್ನು ಕರೆದು ಕೋಳಿಗಳಿಗೆ ಆಹಾರವನ್ನು ಕೊಡುವದಕ್ಕೆ ಹೋಗುವ ಮೊದಲು ಸೂಜಿಗೆ ಒಂದಿಷ್ಟು ದಾರ ಪೋಣಿಸಿಕೊಡುವಂತೆ ಹೇಳಿದ.—ಅವಳ ಕಣ್ಣುಗಳು ಅವನ ಕಣ್ಣಿಗಿಂತ ಚನ್ನಾಗಿದ್ದವು. ರೋಜಕಿ ಪೈಪನ್ನು ಹಚ್ಚಿಕೊಂಡು ಜಾನನ ಅಂಗಿಯನ್ನು ಎತ್ತಿಕೊಂಡ. ಮೇರಿ ಬಹಳ ಕಳವಳದಿಂದ ಲವನನ್ನೇ ಸೂಕ್ಷ್ಮವಾಗಿ ನಿರೀಕ್ಷಿಸುತ್ತಿದ್ದಳು. ಮೇರಿ ಒಂದು ಕೊಟ್ಟಿಯಲ್ಲಿ ಬಟ್ಟೆಯನ್ನು ಹಾಕಿಕೊಂಡು ಒಗೆಯುವದಕ್ಕೆ ಹೋದಳು. ಅವಳು ಹೊರಗೆ ಹೋಗುವಾಗ ರೋಜಕಿಯ ಮುಖದಮೇಲೆ ನಗು ಇರುವದನ್ನು ಗಮನಿಸಿದ್ದಳು. ಅವನು ಪಾಲಿಯ ವಿಚಾರವಾಗಿ ಯೋಚಿಸುತ್ತಿರಬೇಕು. ತಾನು ಕಾಯಿಲೆ ಬೀಳದಿದ್ದರೆ ಅವಳ ಹೃದಯದ ಕೋಮಲತೆ ತನಗೆ ಅರ್ಥವಾಗುತ್ತಿತ್ತೇ ಎಂದು ಸಂದೇಹ ಅವನಿಗೆ. ಈಚಿನ ಹೆಣ್ಣುಮಕ್ಕಳನ್ನು ಅರಿಯುವದು ಕಷ್ಟ. ಪಾಲಿಯಲ್ಲಿದ್ದ ಹುಚ್ಚುತನ ಕಡಿಮೆಯಾದಮೇಲೆ ಅವಳು ಒಳ್ಳೇ ಹೆಂಗಸಾಗುವಳೆಂದು ಅವನು ಅರಿತಿದ್ದಾನೆ. ಹೆಂಗಸಿನ ಹೃದಯ ಕೋಮಲವಿರಲಿ ಇಲ್ಲದಿರಲಿ, ಅವರ ಮೋರೆ ನೋಡಿ ಹೇಳುವದು ಸಾಧ್ಯವಿಲ್ಲ. ಅವರ ಹೃದಯ ಕೋಮಲವಿದ್ದರೆ ಕೊನೆಗೆ ಹೊರಗೆ ಕಾಣುವದು ಖಂಡಿತ.

ನಾಲ್ಕಾರು ಹೊಲಿಗೆಗಳನ್ನು ಹಾಕುವಷ್ಟರಲ್ಲಿ ಅವನ ಎದೆಯಲ್ಲಿ ಮೊದಲಿನ ದಿನದಂತೆ ಮತ್ತೆ ನೋವು ಕಾಣಿಸಿಕೊಂಡಿತು. ಅವನು ಬಹು ಜಾಗ್ರತೆಯಿಂದ ತನ್ನ ಪೈಪನ್ನು ಕಿಟಕಿಯಲ್ಲಿರಿಸಿ ಆ ನೋವನ್ನು ಸುಧಾರಿಸಿಕೊಳ್ಳಲು ಬಗ್ಗಿದ. ಏನೂ ಪ್ರಯೋಜನವಾಗುವಂತೆ ಕಾಣಲಿಲ್ಲ ಸಾಧ್ಯವಾದರೆ ಹಾಸಿಗೆಯ ವರೆಗೆ ಹೋಗುವದು ಒಳಿತೆಂದು ತೋರಿತು. ಎದ್ದು ತನಗೆ ಪರಿಚಯವಿರುವ ಆ ನೆಲವನ್ನು ಬಳಸಿಕೊಳ್ಳುತ್ತ ನಡೆದ. ಆ ನೆಲ ಹಳ್ಳ ತಿಟ್ಟುಗಳಿಂದ ತುಂಬಿದಂತೆ ಅವನಿಗೆ ತೋರಿತು. ಬಾಗಿಲ ಬಳಿ ಬರುವ ವೇಳೆಗೆ ಆತ ಮುಂದುವರಿಯಲಾರದೇ ಬಿದ್ದುಬಿಟ್ಟ. ಮೇರಿ ಒಳಗೆ ಬಂದವಳು ರೋಜಕಿ ಅಲ್ಲಿಯೇ ಬಿದ್ದಿರುವದನ್ನು ನೋಡಿದಳು. ಅವಳು ಅವನನ್ನು ಮುಟ್ಟಿದ ಕೂಡಲೇ ಅವನು ಸತ್ತುಹೋಗಿಬಿಟ್ಟಿದ್ದಾನೆಂದು ಅವಳಿಗೆ ಅರಿವಾಯಿತು.

ರೋಜಕಿ ಸತ್ತುಹೋದಾಗ ಡಾಕ್ಟರ ಎಡ್ ಊರಲ್ಲಿ ಇರಲಿಲ್ಲ. ಮನೆಗೆ ಮರಳಿದ ನಂತರ ಕೆಲವು ವಾರಗಳ ವರೆಗೆ ಅವನಿಗೆ ಬಿಡುವಿರಲಿಲ್ಲ. ತಂದೆಯನ್ನು ಕಳೆದುಕೊಂಡ ಸಂಸಾರವನ್ನು ಕಾಣುವದಕ್ಕೆ ಹೋಗಿಬರಬೇಕೆಂದು

ಅವನು ಪ್ರತಿದಿನವೂ ಎಂದುಕೊಳ್ಳುತ್ತಿದ್ದ. ಒಂದು ರಾತ್ರಿ ಬೇಸಿಗೆಯಲ್ಲಿ ಹಿತವಾಗಿ ಬೆಳದಿಂಗಳು ಹರಡಿಕೊಂಡಿತ್ತು. ಆಗ ಅವನು ಹೊಲದಕಡೆ ಹೋದ. ಅವನ ಮನಸ್ಸೇನೋ ಬೇರೆ ಯೋಚನೆಯಲ್ಲಿ ಮುಳುಗಿತ್ತು. ಮಸಣಕ್ಕೆ ಬಂದಾಗ ಅವನಿಗೆ ಎಚ್ಚರವಾಯಿತು. ಹಿಂದಿರುವ ಗುಡ್ಡದಮೇಲೆ ರೋಜಕಿಯನ್ನು ಹೂಳಿರಲಿಲ್ಲ. ಅವನು ಇಲ್ಲಿ ಚನ್ನಾದ ಬೆಳದಿಂಗಳಲ್ಲಿ ಮಲಗಿರುವನೆಂದು ಅವನಿಗೆ ತೋರಿತು. ಅವನು ಕಾರನ್ನು ನಿಲ್ಲಿಸಿ ಒಂದು ಕ್ಷಣಕಾಲ ಅಲ್ಲಿಯೇ ಕುಳಿತುಕೊಂಡ.

ಅವನ ಹೃದಯದಲ್ಲಿ ಒಂದು ರೀತಿಯ ಶಾಂತತೆ ಒಮ್ಮೆಲೇ ಆವರಿಸಿಕೊಂಡಂತೆ ಅನಿಸಿತು. ಅಲ್ಲೆಲ್ಲ ಏನೋ ಚಲಿಸುತ್ತಿರುವಂತೆ ಆವನಿಗೆ ಅನಿಸಿತು. ಇದು ಏನನ್ನು ಸೂಚಿಸುತ್ತದೆ ಎಂದು ಅವನು ಹೇಳಲಾರ. ತಂತಿಯ ಬೇಲಿಯ ಹತ್ತಿರವೇ ರೋಜಕಿಯ ಯಂತ್ರ ನಿಂತಿತ್ತು. ಮಧ್ಯಾಹ್ನದಲ್ಲಿ ಅವನ ಮಕ್ಕಳಲ್ಲಿ ಒಬ್ಬ ಅದರಿಂದ ದನಗಳ ಆಹಾರವನ್ನು ಕತ್ತರಿಸುತ್ತಿರಬೇಕು. ಅವನ ಕೆಲಸದ ಕುದುರೆಗಳು ಅಲ್ಲಿ ತಿರುಗುತ್ತಿದ್ದವು. ಕತ್ತರಿಸಿದ ಹೊಸ ಹುಲ್ಲಿನಿಂದಾಗಿ ಹವೆಯಲ್ಲಿ ಒಂದು ತರದ ಪರಿಮಳ ತುಂಬಿಕೊಂಡಿತ್ತು. ಮಸಣದ ಭೂಮಿಯ ಮೇಲೆಲ್ಲ ಬೆಳೆದು ಅದನ್ನು ಮುಚ್ಚಿರುವ ಉದ್ದವಾದ ಹುಲ್ಲು, ಚಂದ್ರ ಪ್ರಕಾಶದಲ್ಲಿ ಬೆಳ್ಳಗಾಗಿ ಬೆಳ್ಳಿಯಂತೆ ಹೊಳೆಯುತ್ತಿತ್ತು. ಕೆರೆಯಲ್ಲಿ ಬಿದ್ದ ನೆರಳಿನಂತೆ ಕೆಲವು ಹಸಿ ಮರಗಳು ಅಲ್ಲಲ್ಲಿ ಬೆಳೆದು ನಿಂತಿದ್ದವು. ಆಕಾಶ ನೀಲವಾಗಿ ಸುಂದರವಾಗಿತ್ತು. ಹುಣ್ಣಿಮೆಯ ಬೆಳ್ದಿಂಗಳಲ್ಲಿ ನಕ್ಷತ್ರಗಳೆಲ್ಲ ಮಸಕಾಗಿದ್ದವು.

ಡಾಕ್ಟರ ಎಡ್‌ನಿಗೆ ಈ ಮಸಣಭೂಮಿ ಮೊದಲನೇ ಬಾರಿಗೆ, ಸುಂದರವಾಗಿ ಇದೆ ಎಂದು ಅನಿಸಿತು. ಪಟ್ಟಣದ ಮಸಣದ ಭೂಮಿಯನ್ನು ಅವನು ನೆನೆದುಕೊಂಡ. ಮುಳ್ಳು ಕಂಟಿಗಳಿಂದ ತುಂಬಿದ ನೆಲ, ಅಲ್ಲಿ ನೆಲಸಿರುವ ಕಲ್ಲುಗಳು ನಿಂತಿರುವ ರೀತಿ, ಜೀವಂತ ಜಗತ್ತಿನಲ್ಲಿ ಎಲ್ಲಿಯೂ ಕಾಣಸಿಕ್ಕವು. ಅವು ನಿಜವಾಗಿಯೂ ಸತ್ತವರ ಪಟ್ಟಣಗಳು. ಮರೆತುಹಾಕಬೇಕಾದ ವ್ಯಕ್ತಿಗಳ ಪಟ್ಟಣಗಳವು. ಜಗತ್ತಿನಿಂದ ಹೊರದೂಡಲ್ಪಟ್ಟ ಪಟ್ಟಣಗಳವು. ಆದರೆ ಇದು ಚನ್ನಾಗಿ ಬಯಲು ಬಯಲಾಗಿ ಇರುವ ನೆಲ. ಎತ್ತರವಾದ ಹುಲ್ಲು ಬೆಳೆಯುವ ಈ [illegible] ಭೂಮಿಯ ಮೇಲೆಲ್ಲಾ ಗಾಳಿ ಎಡೆಬಿಡದೆ ಬೀಸುತ್ತದೆ.

ತಲೆಯಮೇಲೆ ಆಕಾಶದ ಹೊರತಾಗಿ ಬೇರೇನಿಲ್ಲ. ಸುತ್ತಲೂ ಬಣ್ಣ ಬಣ್ಣದ ಹೊಲಗಳ ಸಾಲು ನೀಳವಾಗಿ ಕಣ್ಣಿಗೆ ಕಾಣುವಷ್ಟು ದೊಡ್ಡದಾಗಿ ಚಾಚಿಕೊಂಡು ಹಬ್ಬಿಕೊಂಡಿದೆ. ಬೇಸಿಗೆಯಲ್ಲಿ ಕುದುರೆಗಳು ಇಲ್ಲೆಲ್ಲ ಕೆಲಸ ಮಾಡುತ್ತವೆ. ಹಳ್ಳಿಯ ನೆರೆಯವರು ಪಟ್ಟಣಕ್ಕೆ ಹೋಗುವಾಗ ಈ ದಾರಿಯಲ್ಲಿಯೇ ಹೋಗುತ್ತಾರೆ. ಹತ್ತಿರದಲ್ಲಿಯೇ ದನಕರುಗಳ ಮೇವಿನ ಜೋಳದ ಹೊಲದಲ್ಲಿ ರೋಜಕಿಯ ದನಗಳು ಚಳಿಗಾಲದಲ್ಲಿ ಮೇವನ್ನು ತಿನ್ನುತ್ತ ನಿಲ್ಲುವವು. ಸಾವು ಇಲ್ಲದ ಸ್ಥಳ ಇದಕ್ಕಿಂತ ಬೇರೆ ಇಲ್ಲವೆಂದು ಕಾಣುತ್ತಿತ್ತು. ದೊಡ್ಡ ಪಟ್ಟಣಗಳನ್ನು ಕಟ್ಟುವದಕ್ಕೆ ಸಹಾಯಮಾಡಿ, ತಾನು ಬಯಲು ಸ್ಥಳದಲ್ಲಿ ಬದುಕಲು ಹೆಣಗಿದ ಮನುಷ್ಯನೊಬ್ಬನಿಗೆ ಕೊನೆಯಲ್ಲಿ ಇದಕ್ಕಿಂತ ಒಳ್ಳೆಯ ಸ್ಥಳ ದೊರಕುವದು ಸಾಧ್ಯವಿಲ್ಲ. ರೋಜಕಿಯ ಜೀವನ ತುಂಬು ಜೀವನ ಮತ್ತು ಸುಖಮಯವಾದ ಜೀವನ ಎಂದು ಆತನಿಗೆ ತೋರಿತು.

# ಅತಿಮಾನವ

ಸ್ಟೀಫನ್ ವಿನ್ಸೆಂಟ ಬೆನೆಟ್

ಅನು: ಜಿ. ಆರ್. ಹೆಗಡೆ

## ಸ್ಟೀಫನ್ ವಿನ್ಸೆಂಟ ಬೆನೆಟ್ ( 1898—1943 )

ಈತನು ಅಮೇರಿಕೆಯ ಬರಹಗಾರರಲ್ಲಿ ಬಹು-ಮುಖ ಪ್ರತಿಭೆಯುಳ್ಳವ; ಲೋಕಶಾಹಿಯಲ್ಲಿ ಅಚಲ ಶ್ರದ್ಧೆಯುಳ್ಳವ. ಅವಿರತವಾದ ಯುದ್ಧ-ಪ್ರಚಾರ ಕಾರ್ಯದ ಭಾರದಿಂದ ಈತನು ಅಕಾಲ ಮರಣಕ್ಕೆ ತುತ್ತಾದನು. ಈತನೂ, ಸಹೋದರನಾದ ವಿಲಿಯ ರೋಸ ಬೆನೆಟನೂ ಸೈನಿಕ ಹಾಗೂ ಸಾಹಿತ್ಯಿಕ ಕುಟುಂಬಕ್ಕೆ ಸೇರಿದವರು. ಈತನು ಬೆತ್ಲಹೆಮ್ ( ಪೆನಿಸಿಲ್ವಾನಿಯಾ ಪ್ರಾಂತದ ) ದಲ್ಲಿ ಹುಟ್ಟಿದ. ಯೇಲ ಯುನಿವ್ಹರ್ಸಿಟಿಯ ಪದವೀಧರ. ನಂತರ ಫ್ರಾನ್ಸಕ್ಕೆ ಹೋದಲ್ಲಿ ಶ್ರೀಮತಿ ಬೆನೆಟಳನ್ನು ಭೆಟ್ಟಿಯಾದ. ಅಲ್ಲಿಯೇ ತನ್ನ ಸಾಹಿತ್ಯಜೀವನವನ್ನು ಪ್ರಾರಂಭಿಸಿದ. ಅವನ " ಜಾನ ಬ್ರೌನ್ನ ಬೊಡಿ " ಎನ್ನುವ ಕವನ ಸಂಗ್ರಹಕ್ಕೆ ಪುಲಿಟರ್ಝರ ಬಹುಮಾನವು ದೊರೆಯಿತು.(1929). ಆ ಬಹುಮಾನವು ಪುನಃ ಎಂದರೆ 1943ರಲ್ಲಿ ಆತನು ಅಮೇರಿಕದ ಪ್ರಗತಿಯನ್ನು ಕುರಿತು ಬರೆದ 'ವೆಸ್ಟರ್ನ ಸ್ಟಾರ' ಎನ್ನುವ ಅವನ ಮರಣಾನಂತರ ಪ್ರಕಟವಾದ ಗ್ರಂಥಕ್ಕೆ ದೊರೆಯಿತು. ಆತನ ಕಾದಂಬರಿಗಳಾದ " ಬಿಗಿನಿಂಗ್ಸ ಆಫ್ ವಿಸ್‌ಡಮ್ " ಮತ್ತು " ಸ್ಪಾನಿಶ್ ಬೆಯೊನೆಟ್ " ಅಷ್ಟೇನು ಯಶಸ್ವಿಯಾಗಲಿಲ್ಲ. ಆದರೆ ಆತನ ಸಣ್ಣ ಕತೆಗಳು ಆತನ ಕಾವ್ಯದಂತೆ ಚಿರವಾಗಿ ಬಾಳಬಹುದು. ಇಲ್ಲಿ ಅನುವಾದಿಸಿದ ಅವನ ಅತಿಮಾನವ ಕತೆಯೂ ಸುಪ್ರಸಿದ್ಧವಾದ ಗೀತನಾಟಕವಾಗಿಯೂ, ಚಲಚ್ಚಿತ್ರವಾಗಿಯೂ ಅಮೇರಿಕದ ಜನಮನವನ್ನು ರಂಜಿಸಿದೆ.

# ಅತಿಮಾನವ

ಇದು ಜನ ಹೇಳುತ್ತಿದ್ದ ಕತೆ. ಮೆಸೆಚ್ಯುಸೆಟ್ಸ್ ಪ್ರಾಂತವು ವರ್ಮಂಟ್ ಮತ್ತು ನ್ಯೂ ಹೆಂಪಸ್ಟೈರ ಪ್ರಾಂತಗಳನ್ನು ಕೂಡುವ ಗಡಿಭಾಗ ದಲ್ಲಿ ಜನರು ಹೇಳುತ್ತಿದ್ದ ಒಂದು ಕತೆಯಿದು.

ಹೌದು ಡೇನಿಯಲ್ ವೆಬ್‌ಸ್ಟರ್ ಈಗ ಇಲ್ಲ. ಈಗ ಅವನನ್ನು ಸಮಾಧಿ ಮಾಡಿದ್ದಾರೆ. ಮಾರ್ಷಫೀಲ್ಡಿನ ಸುತ್ತಲೂ ಬಿರುಗಾಳಿ ಬೀಸಿದಾಗ ಆಕಾಶ ದಲ್ಲಿ ಅವನ ಗಂಭೀರ ಧ್ವನಿಯ ಘೋಷವು ಈಗಲೂ ಕೇಳುತ್ತಿದೆ ಎನ್ನು ತ್ತಾರೆ. ಅವನ ಗೋರಿಯ ಬಳಿ ನೀವು ಹೋಗಿ ದೊಡ್ಡ ಧ್ವನಿಯಿಂದ ಸ್ಪಷ್ಟ ವಾಗಿ ಡೇನಿಯಲ್ ವೆಬ್‌ಸ್ಟರ್–ಡೇನಿಯಲ್ ವೆಬ್‌ಸ್ಟರ್ ಎಂದು ಕೂಗಿದರೆ ಸುತ್ತಲಿನ ಭೂಮಿಯಲ್ಲಿ ಕಂಪನ ಹುಟ್ಟಿ ಗಿಡಮರಗಳೆಲ್ಲ ಅಲುಗಿದಂತೆ ಭಾಸವಾಗುವದು. ತುಸು ಹೊತ್ತಿನ ನಂತರ ಎಲ್ಲಿಂದಲೋ ಒಂದು ಆಳ ವಾದ ಧ್ವನಿಯನ್ನು ನೀವು ಕೇಳುವಿರಿ. "ಗೆಳೆಯಾ ದೇಶದ ಪರಿಸ್ಥಿತಿ ಹೇಗಿದೆ?" ಆಗ ನೀವು 'ದೇಶ ಮೊದಲಿನಂತೆಯೇ ಭವ್ಯವಾದ ನೆಲಗಟ್ಟಿನಮೇಲೆ ಎತ್ತರ ವಾದ ತಾಮ್ರದ ಶಿಖರವನ್ನು ಹೊತ್ತು ಹೆಮ್ಮೆಯಿಂದ ನಿಂತಿದೆ' ಎನ್ನಬೇಕು. ಹಾಗೆ ಮಾಡುವದಕ್ಕೆ ತಪ್ಪಿದರೆ ಭೂಮಿಯೊಡೆದು ಆತ ಹೊರಗೆ ಬರುತ್ತಾನೆ, ಎಂದು ಅಲ್ಲಿಯ ಜನ ನಾನು ಚಿಕ್ಕವನಿದ್ದಾಗ ಹೇಳುತ್ತಿದ್ದರು.

ಸ್ವಲ್ಪಕಾಲ ಅವನು ದೇಶದಲ್ಲಿಯೇ ಅತ್ಯಂತ ದೊಡ್ಡ ಮನುಷ್ಯನಾ ಗಿದ್ದ. ಅವನು ರಾಷ್ಟ್ರಪತಿಯಾಗದಿದ್ದರೂ ಅವನಷ್ಟು ದೊಡ್ಡ ಮನುಷ್ಯ ಇನ್ನೊಬ್ಬನಿರಲಿಲ್ಲ. ಸರ್ವಶಕ್ತನಾದ ಭಗವಂತನ ನಂತರ ಅವನ ಅಗಾಧ ಶಕ್ತಿಯಲ್ಲಿ ಸಾವಿರಾರು ಜನ ಭರವಸೆ ಇಟ್ಟಿದ್ದರು. ಅವನನ್ನು ಕುರಿತು ಕತೆ ಗಳನ್ನು ಹೇಳುತ್ತಿದ್ದರು. ದೊಡ್ಡ ಅವತಾರ ಪುರುಷರ ವಿಚಾರವಾಗಿ ಹೇಳು ವಂಥ ಕತೆಗಳವು. ಅವನು ಮಾತನಾಡುವದಕ್ಕೆ ನಿಂತರೆ ಆಕಾಶದಿಂದ ತಾರೆ ಗಳು ಉದುರುತ್ತಿದ್ದವಂತೆ. ಒಂದುಸಲ ನದಿಯನ್ನು ಶಪಿಸಿದಾಗ ನದಿಯ ನೀರೆಲ್ಲ ನೆಲದಲ್ಲಿ ಇಂಗಿ ಹೋಯಿತಂತೆ. ಅವನು ಗಾಳ ತೆಗೆದುಕೊಂಡು

ಮೀನು ಹಿಡಿಯಲು ಹೊರಟರೆ ಅವನ ಬಳಿ ಕಲಹ ಕಟ್ಟಿಕೊಂಡು ಉಳಿಗಾಲ ವುಂಟೇ, ಎಂದು ಮೀನುಗಳು ತಾವಾಗಿಯೇ ಬಂದು ಅವನ ಕಿಸೆಯಲ್ಲಿ ಬೀಳು ತ್ತಿದ್ದವಂತೆ. ಅಂಥ ಮಹಾ ಪುರುಷನವನು. ಮಾರ್ಷ್‌ಫೀಲ್ಡಿನಲ್ಲಿದ್ದ ಅವನ ದೊಡ್ಡ ಭೂಮಿ ಅವನ ಯೋಗ್ಯತೆಗೆ ತಕ್ಕುದಾಗಿತ್ತು. ಅವನು ಸಾಕಿದ ಕೋಳಿ ಗಳು ಬೆಳ್ಳಗಾಗಿ ಮೈಯಲ್ಲಿ ಮಾಂಸ ತುಂಬಿಕೊಂಡಿರುತ್ತಿದ್ದವು. ಅವನು ಆಕಳುಗಳನ್ನು ಮಕ್ಕಳಂತೆ ಸಾಕುತ್ತಿದ್ದ. ಅವನು ಸಾಕಿದ 'ಗೋಲಿಯತ್' ಎಂಬ ಟಗರಿನ ಕೋಡುಗಳು ತಲೆಯಮೇಲೆ ಸುತ್ತಿಕೊಂಡು ಬೇಗಿನಲ್ಲಿ ಲತೆ ಗಳು ಸುಳಿ ಸುಳಿಯಾಗಿ ಸುತ್ತಿಕೊಂಡಂತೆ ಕಾಣುತ್ತಿದ್ದವು. ಆದರೂ ಕಬ್ಬಿ ಣದ ಬಾಗಿಲನ್ನಾದರೂ ಒಡೆಯುವಷ್ಟು ಶಕ್ತಿ ಆ ಕೋಡುಗಳಲ್ಲಿತ್ತು. ಡೇನಿ ಯಲ್ ಈಗಿನ ನಿಮ್ಮ ಪೇಟೆಯ ರೈತನಂತಲ್ಲ. ಭೂಮಿಯ ಕೆಲಸಗಳನ್ನು ಚನ್ನಾಗಿ ಬಲ್ಲ. ನಸುಕು ಹರಿಯುವ ಮೊದಲೇ ಎದ್ದು ಕೆಲಸ ಬೊಗಸೆಗಳನ್ನು ಸರಿಯಾಗಿ ನೋಡಿಕೊಳ್ಳುವನು. ಅವನ ಬಾಯಿ ಕಾಡು ನಾಯಿಯ ಹಾಗೆ, ಹುಬ್ಬುಗಳು ಪರ್ವತದ ಸಾಲಿನ ಹಾಗೆ, ಕಣ್ಣುಗಳು ಉರಿಯುತ್ತಿರುವ ಧ್ರುವ ಗಳಂತಿದ್ದವು. ಅವನ ತಾರುಣ್ಯದಲ್ಲಿ ಒಂದು ಬಹು ದೊಡ್ಡ ಕೇಸನ್ನು ಗೆದ್ದಿದ್ದ. ಅದನ್ನು ಯಾವ ಪುಸ್ತಕದಲ್ಲಿಯೂ ಬರೆದಿಲ್ಲ. ಯಾಕಂದರೆ ಅವನು ದಾನವ ಶಕ್ತಿಯ ವಿರುದ್ಧ ಹೋರಾಡಿದ್ದ. ಅದರಲ್ಲಿ ಅವನು ಸಂಪೂರ್ಣ ಜಯಶಾಲಿ ಯಾಗಿದ್ದ — ಹೀಗೆಲ್ಲ ಅವನ ಬಗೆಗೆ ಜನರು ಹೇಳುತ್ತಿದ್ದರು.

ಜೆಬೆಜ್ ಸ್ಟೋನ್ ಎಂಬವನೊಬ್ಬ ನ್ಯೂಹೆಂಪಶಾಯರ್‌ದ ಕ್ರಾಸ ಕಾರ್ನ ರಿನಲ್ಲಿ ವಾಸಿಸುತ್ತಿದ್ದ. ವಾಸ್ತವವಾಗಿ ಅವನು ಕೆಟ್ಟವನಲ್ಲ. ಆದರೆ ದುರ್ದೈವಿ. ಅವನು ಧಾನ್ಯವನ್ನು ನಟ್ಟರೆ ಅವು ಜೊಳ್ಳಾಗುತ್ತಿದ್ದವು. ಆಲೂಗಡ್ಡೆ ಬೆಳೆ ಯಲು ಹೋದರೆ ಅವು ಕೆಟ್ಟು ಹೋಗುತ್ತಿದ್ದವು. ಅವನಿಗೆ ಸಾಕಷ್ಟು ಭೂಮಿ ಯಿತ್ತು. ಆದರೆ ಅದರಿಂದ ಅವನಿಗೆ ಏನೊಂದೂ ಪ್ರಯೋಜನವಾಗುತ್ತಿರಲಿಲ್ಲ. ಅವನಿಗೆ ಒಳ್ಳೆಯ ಹೆಂಡತಿ, ಮಕ್ಕಳಿದ್ದರು. ಮಕ್ಕಳಾಗುತ್ತ ಹೋದಂತೆ ಅವ ರನ್ನು ಪೋಷಿಸುವದು ಅವನಿಗೆ ದುಸ್ತರವಾಯಿತು. ಅವನ ನೆರೆಯವನ ಹೊಲ ದಲ್ಲಿ ಸಣ್ಣ ಸಣ್ಣ ಹರಳುಗಳಿದ್ದರೆ ಇವನ ಹೊಲದಲ್ಲಿ ತುಂಬಾ ದೊಡ್ಡ ದೊಡ್ಡ ಬಂಡೆಗಳು ಕಾಣಿಸಿಕೊಳ್ಳುತ್ತಿದ್ದವು. ಅವನ ಕುದುರೆಯ ಕಾಲಿನ ಗಂಟೆಗೆ ನೋವು ಬಂದಿದೆಯೆಂದು ಅವನ್ನೂ ಮಾರಿ ಮೇಲಿಷ್ಟು ಹಣಕೊಟ್ಟು

ಬೇರೆ ಕುದುರೆಯನ್ನು ಖರೀದಿಮಾಡಿ ತಂದ. ಅದು ಇವನ ಮನೆಗೆ ಬಂದಮೇಲೆ ಅದಕ್ಕೆ ಹೆಜ್ಜೆ ಇಡುವವೇ ಕಷ್ಟವಾಗುತ್ತಿತ್ತು. ಅವನ ಹಾಗೆ ಒಮ್ಮೊಮ್ಮೆ ಕೆಲ ವರಿಗೆ ಆಗುತ್ತದೆ. ಇವೆಲ್ಲ ನೋಡಿ ಜೆಬೆಜ್ ಸ್ಟೋನಿಗೆ ತುಂಬಾ ಬೇಸರ ವಾಯಿತು.

ಆ ದಿನ ಬೆಳಿಗ್ಗೆ ಆತ ಹೊಲವನ್ನು ಉಳುತ್ತಿದ್ದಾಗ ನೇಗಿಲು ಒಂದು ಕಲ್ಲಿಗೆ ತಾಗಿ ಮುರಿದುಹೋಯಿತು. ಆ ಕಲ್ಲು ಮೊದಲಿನ ದಿನ ಅಲ್ಲಿರಲಿಲ್ಲವೆಂದು ಅವನಿಗೆ ಖಚಿತವಾಗಿತ್ತು. ಮುರಿದುಹೋದ ನೇಗಿಲನ್ನು ನೋಡುತ್ತಾ ಅವನು ನಿಂತುಕೊಂಡ. ನೇಗಿಲನ್ನು ಎಳೆಯುತ್ತಿದ್ದ ಕುದುರೆ ಕೆಮ್ಮತೊಡಗಿತು.— ಆ ಕೆಮ್ಮು ಎಂದರೆ ಕುದುರೆಗಳಿಗೆ ಕೆಟ್ಟ ಲಕ್ಷಣ. ಇನ್ನು ಕುದುರೆಯನ್ನು ಡಾಕ್ಟರರ ಬಳಿ ತೆಗೆದುಕೊಂಡು ಹೋಗಬೇಕು. ಮನೆಯಲ್ಲಿ ಅವನ ಎರಡು ಮಕ್ಕಳು ಟಿಡಿಬು ಜ್ವರದಿಂದ ಮಲಗಿದ್ದವು. ಅವನ ಹೆಂಡತಿ ರೋಗದಿಂದ ಬಳಲುತ್ತಿದ್ದಳು. ಸ್ವತಃ ಸ್ಟೋನನ ಹೆಬ್ಬೆರಳಿಗೆ ಗಂಟಾಗಿತ್ತು. ಸ್ಟೋನನಿಗೆ ಇನ್ನು ತಡೆಯಲಾಗಲಿಲ್ಲ. ಇಷ್ಟಾದರೆ ಮನುಷ್ಯನು ಪಿಶಾಚಿ ಆಗದೆ ಏನು ಮಾಡುತ್ತಾನೆ. "ಎರಡು ಸೆಂಟುಗಳಿಗೆ ನಾನು ನನ್ನನ್ನು ಯಾವದೇ ಪಿಶಾಚಿಗೆ ಮಾರಿಕೊಳ್ಳಲು ಸಿದ್ಧ. ಇದಕ್ಕೆ ತಪ್ಪುವದಿಲ್ಲ" ಎಂದ.

ಅವನಿಗೇ ತಾನು ಆಡಿಕೊಂಡ ಮಾತಿಗೆ ಆ ಮೇಲೆ ಒಂದು ತರಹ ಎನಿಸಿತು. ಆದರೂ ಅವನು ನ್ಯೂ ಹೆಂಪಶಾಯರ್‌ನವನಾದುದರಿಂದ ಆಡಿದ ಮಾತಿಗೆ ಹಿಂತೆಗೆದುಕೊಳ್ಳುವವನಲ್ಲ ಸಂಜೆಯ ತನಕ ತನ್ನ ಮಾತಿನಿಂದ ಕೆಟ್ಟದೇನೂ ಘಟಿಸದೇ ಇದ್ದುದರಿಂದ ಅವನ ಮನಸ್ಸು ಸ್ವಲ್ಪ ಸಮಾಧಾನ ಗೊಂಡಿತು. ಅವನು ಸ್ವಲ್ಪ ವೈದೀಕ ಮನುಷ್ಯನಾದುದರಿಂದ ಅವನ ಮನಸ್ಸು ಸ್ವಲ್ಪ ಹುಳು ಹುಳು ಎಂದಿತು ಅಷ್ಟೇ. ಆದರೆ ಅಂಥ ವಿಚಾರ ಬೇಗವಾಗಲೀ ಸಾವಕಾಶವಾಗಲೀ, ಪರಿಣಾಮವಾಗದೇ ಹೋಗುವದೇ ಇಲ್ಲವೆಂದು ಧರ್ಮ ಗ್ರಂಥ ಹೇಳುತ್ತಿದೆ. ಸಂಜೆ ಊಟದ ಹೊತ್ತಿಗೆ ಕರಿಯ ವಸ್ತ್ರ ಧರಿಸಿದ ಮೆತ್ತಗೆ ಮಾತನಾಡುವ ಹೊಸಬನೊಬ್ಬ ಸುಂದರವಾದ ಕುದುರೆ ಗಾಡಿಯಲ್ಲಿ ಆ ಊರಿಗೆ ಬಂದು ಜೆಬೆಜ್ ಸ್ಟೋನನ ಬಗ್ಗೆ ವಿಚಾರಿಸಿದ.

ಸ್ಟೋನ ತನ್ನ ಮನೆಯವರಿಗೆ 'ಬಂದವನು ಒಂದು ಮರಣದ ಶಾಸನದ ವಿಷಯವನ್ನು ಕುರಿತು ಮಾತನಾಡಲು ಬಂದ ವಕೀಲ' ನೆಂದು ಹೇಳಿದನು.

ಆದರೆ ಅವನಿಗೆ ಆತನು ಯಾರು ಎಂಬುದು ಗೊತ್ತಿತ್ತು. ಆ ಹೊಸಬನ ಮುಖ ಚರ್ಯೆ, ಹಲ್ಲು ತೋರಿಸಿ ನಗುವ ರೀತಿ, ಇವು ಸ್ಟೋನನಿಗೆ ಸೇರಲಿಲ್ಲ. ಅವನ ಹಲ್ಲುಗಳು ಬೆಳ್ಳಗಿದ್ದವು— ಕೆಲವರು ಅವು ಬಹಳ ಹದನವಾಗಿದ್ದವು ಎಂದು ಹೇಳುತ್ತಾರೆ. ಆದರೆ ನಾನು ಆ ವಿಷಯದ ಬಗ್ಗೆ ಏನೂ ಖಚಿತವಾಗಿ ಹೇಳ ಲಾರೆ. ಸ್ಟೋನನ ನಾಯಿ ಹೊಸಬನನ್ನು ನೋಡಿದೊಡನೆಯೇ ಕುಯ್‌ಗುಟ್ಟಿ ಓಡಿ ಹೋಯಿತು. ಇದರಿಂದ ಅವನಿಗೆ ಮತ್ತಷ್ಟು ಬೇಸರವಾಯಿತು. ಆದರೆ ಒಮ್ಮೆ ಆಡಿದ ಮಾತನ್ನು ಸ್ಟೋನ್ ಬಿಟ್ಟುಕೊಡಲಿಲ್ಲ. ಕಣಜದ ಹಿಂದುಗಡೆಗೆ ಇಬ್ಬರೂ ಹೋಗಿ ವ್ಯವಹಾರ ಮುಗಿಸಿದರು. ಸ್ಟೋನ್ ಸಹಿ ಹಾಕುವಾಗ ತನ್ನ ಬೆರಳಿನ ಮೇಲಾದ ಗಂಟನ್ನು ತುರಿಸಿಕೊಂಡ. ಆ ಹೊಸಬ ಆ ಗಂಟನ್ನು ಕೆರೆಯುವದಕ್ಕೆ ಸ್ಟೋನನಿಗೆ ಒಂದು ಬೆಳ್ಳಿಯ ಸೂಜಿಯನ್ನು ತೆಗೆದು ಕೊಟ್ಟ. ಆ ಗಾಯ ಬೇಗ ಮಾಯಿತು. ಆ ಜಾಗದಲ್ಲಿ ಒಂದು ಚಿಕ್ಕ ಬಿಳಿ ಗುರುತು ನಿಂತಿತು.

ಇದಾದ ನಂತರ ಒಮ್ಮೆಲೇ ಅಕಸ್ಮಾತ್ತಾಗಿ ಜೆಬೆಜ್ ಸ್ಟೋನನ ಅದೃಷ್ಟವು ತೆರೆಯಿತು. ಆಕಳುಗಳು ಪುಷ್ಟವಾಗಿ ಬೆಳೆದುಕೊಂಡವು. ಕುದುರೆ ಗಳು ಚುರುಕಾದವು. ಅವನ ಬೆಳೆ ಕಂಡು ನೆರೆಯವರು ಅಸೂಯೆ ಪಡುವಂತಾ ಯಿತು. ಅವನು ವಾಸಿಸಿದ ಕಣಿವೆಯಲ್ಲೆಲ್ಲಾ ಸಿಡಿಲು ಬಡಿದರೂ ಅವನ ಕಣಜ ಸುರಕ್ಷಿತವಾಗಿಯೇ ಇತ್ತು. ಬಹು ಬೇಗ ಅವನು ದೇಶದ ಅನುಕೂಲಸ್ಥ ರಲ್ಲಿ ಒಬ್ಬನಾದ. ಜನ ಅವನನ್ನು ಊರಿನ ಪಂಚನಾಗುವದಕ್ಕೆ ಹೇಳಿದರು. ಅವನು ಒಪ್ಪಿದ. ಪ್ರಾಂತದ ರಾಜ್ಯ ಸಭೆಗೆ ಅವನನ್ನು ಆರಿಸಿ ಕಳುಹಿಸಬೇ ಕೆಂಬ ಮಾತುಕತೆಗಳು ನಡೆಯತೊಡಗಿದವು. ಹಾಲಿನ ಮನೆಯಲ್ಲಿ ಬಿಟ್ಟ ಬೆಕ್ಕಿನಂತೆ ಸ್ಟೋನನ ಕುಟುಂಬ ಸುಖವಾಗಿತ್ತು. ಆದರೆ ಆತನಿಗೆ ಆ ಸುಖ ಅನುಭವಿಸುವ ಯೋಗವಿರಲಿಲ್ಲ.

ಮೊದಲಿನ ಕೆಲವು ವರುಷ ಅವನು ಸುಖವಾಗಿಯೇ ಇದ್ದ. ಕಷ್ಟದ ದಿನಗಳು ಕಳೆದಾಗ ಬರುವ ತೃಪ್ತಿಯದು. ಅಂಥ ಪ್ರಸಂಗದಲ್ಲಿ ನಮ್ಮ ತಲೆಯೊಳಗಿನ ಅನೇಕ ಸಂಗತಿಗಳು ಹೋಗಿಬಿಡುತ್ತವೆ. ಆಗಾಗ ಮಳೆಗಾಲ ದಲ್ಲಿ ಬೆರಳಿನ ಮೇಲಿದ್ದ ಬಿಳಿಯ ಕಲೆ ಅವನಿಗೆ ನೆನಪು ಕೊಡುತ್ತಿತ್ತು. ಪ್ರತಿ ವರುಷ ಗಡಿಯಾರದಂತೆ ನಿಯಮಿತವಾಗಿ ಸುಂದರವಾದ ರಥದಲ್ಲಿ

ಕುಳಿತು ಆ ಹೊಸಬ ಬರುತ್ತಿದ್ದ. ಆರನೇ ವರ್ಷ ಆ ಹೊಸಬ ಬಂದು ಹೋದ ನಂತರ ಸ್ಟೋನನ ಶಾಂತಿ ಅವನ ಜೊತೆಯಲ್ಲಿಯೇ ಹೊರಟುಹೋಯಿತು.

ಹೊಸಬನು ಕೆಳಗಿನ ಹೊಲದೊಳಗಿಂದ ಹಾಯ್ದು ಬರುತ್ತಿದ್ದ. ಬರುವಾಗ ಕೈಯಲ್ಲಿಯ ಬೆತ್ತವನ್ನೂ ಆಗಾಗ ಬೂಟ್ಸಗಳಿಗೆ ಬಡಿಯುತ್ತಿದ್ದ. ಸ್ಟೋನನಿಗೆ ಆ ಬೂಟ್ಸಗಳ ಹಿಮ್ಮಡ ಕಂಡರೆ ಆಗದು. ಆ ದಿನ ಅವನು "ಸ್ಟೋನ್ನ, ಒಬ್ಬ ತಮಾಷೆಗಾರನಾಗಿರುವೆ. ಈಗ ಇಲ್ಲಿ ಒಳ್ಳೇ ಆಸ್ತಿ ಮಾಡಿಕೊಂಡಿದ್ದೀಯಲ್ಲವೆ " ಎಂದು ಕೇಳಿದ.

"ಒಳ್ಳೇದು. ಕೆಲವರಿಗೆ ಇದು ಸೇರುತ್ತದೆ. ಕೆಲವರಿಗೆ ಇದು ಸಹನೆ ಆಗುವದಿಲ್ಲ" ಜೆಬೆಜ್ ಸ್ಟೋನ್ ನ್ಯೂ ಹೆಂಪಶಾಯರವನಾದ್ದರಿಂದ ಹೀಗೆ ಹೇಳಿದ.

ಹೊಸಬ ಹಲ್ಲು ತೆಗೆದು ನಗುತ್ತ " ನೀನು ಮಾಡಿದ ಶ್ರಮವನ್ನು ಅಲ್ಲಗಳೆಯುವ ಯತ್ನ ಮಾಡಬೇಡ. ಈಗ ಏನಾಗಿದೆಯೋ ಅದು ನಮ್ಮ ಕರಾರಿನಂತೆ ನಡೆದುಬಂದಿದೆ. ಆದ್ದರಿಂದ ಆ ಆಧಾರದ ಸಾಲವನ್ನು ಮುಂದಿನ ವರುಷ ತೀರಿಸಬೇಕು. ನಿನಗೇನು ಆ ಬಗ್ಗೆ ವ್ಯಸನವಾಗಲಿಕ್ಕಿಲ್ಲ."

ಸ್ಟೋನ ಸುತ್ತಮುತ್ತ ಭೂಮಿ ಆಕಾಶಗಳನ್ನು ಸಹಾಯಕ್ಕಾಗಿ ನೋಡುತ್ತಾ " ಆ ಪತ್ರದ ವಿಷಯವಾಗಿ ....... .. ಅಂ..........ನನಗೆ ಒಂದೆರಡು ಶಂಕೆಗಳುಂಟಾಗಿವೆ."

"ಶಂಕೆಗಳು?" ಹೊಸಬನ ಧ್ವನಿ ಸಾಕಷ್ಟು ಮೆತ್ತಗಾಗಿರಲಿಲ್ಲ. "ಹೂಂ. ಹೌದು" ಜೆಬೆಜ್ ಸ್ಟೋನ್ ನುಡಿದ. ಗಂಟಲನ್ನು ಸರಿಪಡಿಸಿಕೊಂಡು ಧೈರ್ಯ ತಂದುಕೊಂಡ. "ಇದು ಅಮೇರಿಕಾ ದೇಶ. ನಾನು ಯಾವಾಗಲೂ ವೈದೀಕ ಮನುಷ್ಯ. ನನಗೆ ಆ ಕರಾರುಪತ್ರ ಕೋರ್ಟಿನಲ್ಲಿ ಸ್ಥಿರಪಡಬಹುದೇ ಎಂದು ಸಂಶಯ ಬರತೊಡಗಿದೆ."

"ಊರಲ್ಲೆಲ್ಲ ಬೇಕಷ್ಟು ಕೋರ್ಟುಗಳಿವೆ" ಎನ್ನುತ್ತ ಹೊಸಬ ತನ್ನ ಹಲ್ಲುಗಳನ್ನು ತೋರಿಸಿದ. "ನಮ್ಮ ಮೊದಲಿನ ಕರಾರುಪತ್ರವನ್ನು ನೋಡೋಣ?" ಎನ್ನುತ್ತ ಕಿಸೆಯಿಂದ ದೊಡ್ಡ ಕರಿಯ ಪುಸ್ತಕವನ್ನು ಹೊರತೆಗೆದ. ಅದರ ತುಂಬ ಕಾಗದಗಳಿದ್ದವು. 'ಶರ್ವಿನ್–ಸ್ಲೇಟರ್–ಸ್ಟಿವೆನ್ಸ್–ಸ್ಟೋನ್,' ಎಂದು ಗುಣುಗುಡುತ್ತ ಇವನ ಕಾಗದ ತೆಗೆದು "ನಾನು, ಜೆಬೆಜ್ ಸ್ಟೋನ್ನ,

ಏಳು ವರ್ಷಗಳ ವಾಯಿದೆ ಇದೆಯಲ್ಲವೆ.......ಇದು ಸರಿಯಾಗಿದೆಯಲ್ಲ"ಎಂದ.

ಆದರೆ ಜೆಬೆಜ್ ಸ್ಟೋನ್ ಇದೆಲ್ಲ ಕೇಳುತ್ತಿರಲಿಲ್ಲ. ಆ ಕರಿಯ ಪುಸ್ತಕ ದಿಂದ ಏನೋ ಒಂದು ಹೊರ ಬಿದ್ದು ಹಾರತೊಡಗಿತು. ಆ ಕಡೆಗೆ ಅವನ ದೃಷ್ಟಿ ಹೋಗಿತ್ತು. ಅದು ಒಂದು ಮಿಡಿತೆಯ ಹಾಗೆ ಕಾಣುತ್ತಿತ್ತು. ಆದರೆ ಅದು ಮಿಡಿತೆಯಾಗಿರಲಿಲ್ಲ. ಜೆಬೆಜ್ ಸ್ಟೋನ್ ಅದರ ಕಡೆಗೆ ನೋಡುತ್ತಿದ್ದಂತೆ ಅದು ಬಹು ಸಣ್ಣ ಧ್ವನಿಯಲ್ಲಿ ಮನುಷ್ಯ ಭಾಷೆಯಲ್ಲಿ ಮಾತಾಡಿದಂತೆ ಕೇಳಿಸಿತು. "ಗೆಳೆಯಾ, ಸ್ಟೋನ್ ! ಸಹಾಯ ಮಾಡು. ದಯವಿಟ್ಟು ಸಹಾಯ ಮಾಡು."

ಜೆಬೆಜ್ ಸ್ಟೋನ್ ಕೈಕಾಲುಗಳನ್ನು ಅಲ್ಲಾಡಿಸುವದಕ್ಕಿಂತ ಮೊದಲೇ ಆ ಹೊಸಬನು ಒಂದು ದೊಡ್ಡ ಕರವಸ್ತ್ರವನ್ನು ಬೀಸಿ ಆ ಮಿಡಿತೆಯನ್ನು ಹಿಡಿದು ಕರವಸ್ತ್ರದಲ್ಲಿ ಕಟ್ಟತೊಡಗಿದ.

"ಮಧ್ಯದಲ್ಲಿ ತಡೆದ ಬಗ್ಗೆ ಕ್ಷಮಿಸಿ, ನಾನು ಹೇಳುತ್ತಿದ್ದ ಹಾಗೆ....... ಜೆಬೆಜ್ ಸ್ಟೋನ್ ಚಳಿಹಿಡಿದ ಕುದುರೆಯಂತೆ ನಡುಗತೊಡಗಿದ. "ಅದು ಮೈಜರ್‌ಸ್ಟೀವನ್‌ಸನ ಧ್ವನಿ. ನೀನು ಅವನನ್ನು ಕರವಸ್ತ್ರದಲ್ಲಿ ಹಿಡಿದಿದ್ದೀಯಾ" ಒಣಗಿದ ಧ್ವನಿಯಲ್ಲಿ ಆತ ಕೇಳಿದ.

ಹೊಸಬ ಸ್ವಲ್ಪ ಗಡಿಬಿಡಿಗೊಂಡವನಂತೆ ತೋರಿದ.

"ಹೌದು, ನಾನು ಅವನನ್ನು ಪೆಟ್ಟಿಗೆಯಲ್ಲಿ ಸೇರಿಸಬೇಕಿತ್ತು. ಆದರೆ ಅಲ್ಲಿ ಹೊಸ ಹೊಸ ಮಾದರಿಗಳಿವೆ. ಮತ್ತು ನನಗೆ ಎಲ್ಲವನ್ನೂ ಒಂದೇ ಕಡೆಗೆ ಸೇರಿಸುವದು ಬೇಡವಾಗಿದೆ. ಒಳ್ಳೆಯದು, ಒಳ್ಳೆಯದು."

"ನೀವು ಹೇಳಿದ ಮಾತು ನನಗೆ ಅರ್ಥವಾಗುತ್ತಿಲ್ಲ. ಆದರೆ ಅದು ಮೈಜರ್ ಸ್ಟೀವನ್ಸ್‌ನ ಧ್ವನಿ. ಅವನಿನ್ನೂ ಸತ್ತಿಲ್ಲ. ಸತ್ತಿರುವನೆಂದು ನೀವು ಹೇಳಲಾರಿರಿ. ಆತ ಒಳ್ಳೇ ಹಕ್ಕಿಯಂತೆ ಇದ್ದುದನ್ನು ಮಂಗಳವಾರ ಕಂಡಿದ್ದೇನೆ."

"ಜೀವನದ ಮಧ್ಯದಲ್ಲಿ" ಹೊಸಬ ಈ ಮಾತನ್ನು ಹೇಳುತ್ತಿದ್ದ ಹಾಗೆ ತಡೆದು "ಕೇಳು" ಎಂದ. ದೂರದಲ್ಲಿ ಕಣಿವೆ ಚರ್ಚಿನಲ್ಲಿ ಘಂಟೆ ಬಾರಿ ಸುವದನ್ನು ಜೆಬೆಜ್ ಸ್ಟೋನ ಕೇಳಿದ. ಅವನ ಮೋರೆಯ ಮೇಲೆ ಬೆವರು ಸುರಿ ಯತೊಡಗಿತು. ಅದು ಮೈಜರ್ ಸ್ಟೀವನ್ಸ್‌ನ ಮರಣ ಸೂಚಕ ಗಂಟೆ

ಎಂಬುದು ಸ್ಟೋನನಿಗೆ ಖಚಿತವಾಯಿತು.

" ಈ ಹಳೆಯ ವಿಚಾರಗಳನ್ನು ಮುಗಿಸುವದಕ್ಕೆ ನಾನು ಇಷ್ಟಪಡುವದಿಲ್ಲ. ಆದರೆ ವ್ಯವಹಾರ ಎಂದರೆ ವ್ಯವಹಾರ " ಹೊಸಬ ನಿಟ್ಟುಸಿರು ಬಿಟ್ಟ.

ಅವನ ಕೈಯಲ್ಲಿ ಇನ್ನೂ ಕರವಸ್ತ್ರವಿತ್ತು. ಅದರ ಒಳಗೆ ಆ ಪುಟ್ಟ ಜೀವ ಹೊರಗೆ ಬರಲು ಹೆಣಗುವದರ ಅನುಭವವಾಗಿ ಜೆಬೆಜ್ ಸ್ಟೋನನಿಗೆ ಕಸಿವಿಸಿಯಾಯಿತು.

" ಎಲ್ಲವರೂ ಅಷ್ಟೇ ಚಿಕ್ಕವರೇ ? " ಎಂದ ಅವನು.

" ಸಣ್ಣದು ? ಓಹೋ ! ನೀವು ಹೇಳುವದರ ಅರ್ಥವಾಯಿತು. ಯಾಕೆ? ಅವುಗಳಲ್ಲಿಯೂ ಚಿಕ್ಕವೂ, ದೊಡ್ಡವೂ ಅವೆ. " ಅವನು ಕಣ್ಣಿನಿಂದ ಜೆಬೆಜ್ ಸ್ಟೋನನನ್ನು ತಲೆಯಿಂದ ಕಾಲತನಕ ಅಳತೆ ಮಾಡಿದಂತೆ ನೋಡಿ ಹಲ್ಲು ತೋರಿಸಿದ. " ನೀನು ಬೇಸರಪಡಬೇಡ. ನೀನು ಒಳ್ಳೇ ಸ್ಥಾನಕ್ಕೆ ಹೋಗುವೆ. ನಿನ್ನನ್ನು ಪೆಟ್ಟಿಗೆಯಲ್ಲಿ ಇಡುವದಿಲ್ಲ. ಡೇನಿಯಲ್ ವೆಬ್‌ಸ್ಟರನಿಗಾಗಿ — ಆ ಒಂದು ಬೇರೆ ಪೆಟ್ಟಿಗೆಯನ್ನೇ ಮಾಡಬೇಕಾದೀತು. ಹಾಗಾದರೂ ಅವನ ಗರಿಗಳನ್ನು ಅಗಲ ಮಾಡಿದಾಗ ನಿಮಗೆ ಅಚ್ಚರಿಯಾಗಬಹುದು. ಅವನನ್ನು ಹಿಡಿದರೆ ಅಮೂಲ್ಯ ಸಂಗ್ರಹವಾಗುವದು. ಅವನನ್ನು ಹಿಡಿಯುವದಕ್ಕೆ ಸರಿಯಾದ ದಾರಿ ನೋಡುತ್ತಿದ್ದೇನೆ. ಆದರೆ ನಿಮ್ಮ ವಿಷಯ ನಾನು ಹೇಳುತ್ತಿದ್ದಂತೆ........"

" ಆ ಕರವಸ್ತ್ರವನ್ನು ದೂರ ಸರಿಸಿರಿ " ಮತ್ತೆ ಅವನು ಬೇಡಿಕೊಳ್ಳ ತೊಡಗಿದ. ಎಲ್ಲ ಮಾತುಕತೆಗಳ ಕೊನೆಯಲ್ಲಿ ಮತ್ತೆ ಮೂರು ವರ್ಷಗಳ ಹೆಚ್ಚಿಗೆ ವಾಯಿದೆ ದೊರೆಯಿತು. ಅದರಂತೆ ಕರಾರಾಯಿತು.

ಆದರೆ ಅಂಥ ಕರಾರು ಮಾಡಿಕೊಂಡ ಮೇಲೆಯೇ ನಾಲ್ಕು ವರ್ಷ ಹೇಗೆ ಕಳೆದು ಹೋಗುತ್ತವೆ ಎಂಬುದನ್ನು ತಿಳಿಯಬಹುದು. ಆ ಅವಧಿಯ ಕೊನೆಯ ತಿಂಗಳು ಬರುವಾಗ ಜೆಬೆಜ್ ಸ್ಟೋನನ ಹೆಸರು ಪ್ರಾಂತದಲ್ಲೆಲ್ಲಾ ಹಬ್ಬಿತ್ತು. ಅವನನ್ನು ಪ್ರಾಂತದ ಹಿರಿಯ ಅಧಿಕಾರಿಯನ್ನಾಗಿ ಮಾಡುವ ಮಾತುಕತೆಗಳು ನಡೆದಿದ್ದವು. ಆದರೆ ಅವೆಲ್ಲ ಅವನ ಪಾಲಿಗೆ ನೀರಸವಾಗಿದ್ದವು. ಪ್ರತಿದಿನ ಬೆಳಿಗ್ಗೆ ಎದ್ದಾಗ 'ಒಂದು ರಾತ್ರಿ ಕಳೆದುಹೋಯಿತು.' ಎಂದುಕೊಳ್ಳುವನು. ಪ್ರತಿ ರಾತ್ರಿ ಮಲಗಿಕೊಳ್ಳುವಾಗ ಆ ದೊಡ್ಡ ಕರಿಯ ಪುಸ್ತಕ, ಸ್ಟೀವನ್ಸನ ಜೀವದ ನೆನಪಾಗುವದು. ಆಗ ಅವನ ಹೃದಯದ ಬಡಿತ ನಿಂತಂತೆನಿಸುವುದು.

ಕೊನೆಗೆ ಅವನಿಗೆ ತಡೆಯುವದಾಗಲಿಲ್ಲ. ಕೊನೆಯ ವರ್ಷದ ಕೊನೆಯ ದಿನ ಒಂದು ಕುದುರೆಯ ಮೇಲೆ ಕುಳಿತು ಡೇನಿಯಲ್ ವೆಬ್‌ಸ್ಟರನಿದ್ದಲ್ಲಿ ಪಯಣ ಬೆಳೆಸಿದ. ಡೇನಿಯಲ್ ಕ್ರಾಸಕಾರ್ನರಿಗೆ ಸ್ವಲ್ಪ ದೂರದಲ್ಲಿದ್ದ ನ್ಯೂ ಹೆಂಪಶಾಯರದವ. ಅವನಿಗೆ ತನ್ನ ನೆರೆ ಹೊರೆಯವರ ಬಗ್ಗೆ ಪ್ರೀತಿ ಎಂಬುದು ಎಲ್ಲವರಿಗೂ ಗೊತ್ತಿದ್ದ ಮಾತಾಗಿತ್ತು.

ಮಾರ್ಶಫೀಲ್ಡಿಗೆ ಸ್ಟೋನ್ ತಲುಪಿದಾಗ ಮಾತ್ರ ಬೆಳಗಾಗುತ್ತಿತ್ತು. ಆಗಲೇ ಡೇನಿಯಲ್ ಎದ್ದು ಆಳುಗಳಿಗೆ ಅಪ್ಪಣೆ ಕೊಡುತ್ತಿದ್ದ. ಗೋಲಿಯತ್ ಕುರಿಯೊಂದಿಗೆ ಕುಸ್ತಿಮಾಡುತ್ತಿದ್ದ. ಒಂದು ಹೊಸ ಕುದುರೆಯನ್ನು ಪಳಗಿಸುವದರಲ್ಲಿ ತೊಡಗಿದ್ದ. ಜಾನ್ ಸಿ ಕೋಲ್‌ಹೌನನ ವಿರುದ್ಧ ಭಾಷಣವನ್ನೂ ಸಿದ್ಧಪಡಿಸಿಕೊಳ್ಳುತ್ತಿದ್ದ. ಆದರೆ ಒಬ್ಬ ಹೆಂಪಶಾಯರದವ ತನ್ನನ್ನು ಕಾಣುವದಕ್ಕೆ ಬಂದಿದ್ದಾನೆ ಎಂದು ಕೇಳಿದೊಡನೆಯೇ ಆರಂಭಿಸಿದ ಕೆಲಸವನ್ನು ಅಲ್ಲಿಯೇ ಬಿಟ್ಟುಬಂದ. ಸ್ಟೋನನನ್ನು ಇದಿರುಗೊಂಡು ಕರೆದುಕೊಂಡು ಹೋಗಿ ಐದು ಜನ ತಿಂದರೂ ಮುಗಿಯದಷ್ಟು ಉಪಹಾರವನ್ನು ಕೊಟ್ಟ. ಅವನ ಊರಿನಲ್ಲಿರುವವರ ಹೆಸರುಗಳನ್ನೆಲ್ಲ ಕೇಳಿ ಅವರ ಸುದ್ದಿಯನ್ನು ತಿಳಿದುಕೊಂಡ. ಕೊನೆಗೆ ತಾನು ಏನಾದರೂ ಮಾಡಬೇಕೇ ಎಂದು ಕೇಳಿದ. ಡೇನಿಯಲ್‌ನ ರೀತಿಯೇ ಹಾಗೆ.

ಜೆಬೆಜ್ ಸ್ಟೋನನು ತನ್ನ ಕರಾರು ಪತ್ರದ ಪ್ರಕರಣದಲ್ಲಿ ಸಹಾಯ ಮಾಡಬೇಕೆಂದು ಕೇಳಿಕೊಂಡ.

" ಒಳ್ಳೇದು, ಕರಾರು ಪತ್ರದ ಪ್ರಕರಣಗಳನ್ನು ನಾನು ಕೈಗೆ ತೆಗೆದುಕೊಳ್ಳದೇ ಬಹುದಿನಗಳಾದವು. ಸುಪ್ರೀಮ್ ಕೋರ್ಟಿನಲ್ಲಿ ಬಿಟ್ಟು ಬೇರೆಲ್ಲಿಯೂ ನಾನು ವಾದಿಸುವದಿಲ್ಲ. ಆದರೂ ನಿನಗೆ ಸಹಾಯ ಮಾಡುವದಾದರೆ ಮಾಡುವಾ " ಎಂದ ಡೇನಿಯಲ್.

" ಕಳೆದ ಹತ್ತು ವರ್ಷಗಳಲ್ಲಿ ನನಗೆ ಮೊದಲನೇ ಸಲ ಜೀವ ಬಂದಂತಾಯಿತು " ಜೆಬೆಜ್ ಸ್ಟೋನ್ ತನ್ನ ಕರಾರು ಪತ್ರದ ಕತೆಯನ್ನೆಲ್ಲಾ ಹೇಳಿದ.

ಇದನ್ನು ಕೇಳುತ್ತಿದ್ದಂತೆಯೇ ಡೇನಿಯಲ್ ಕೈ ಕಟ್ಟಿಕೊಂಡು ಶತಪಥ ತಿರುಗಾಡುತ್ತಿದ್ದ. ಮಧ್ಯೆ ಮಧ್ಯೆ ಪ್ರಶ್ನೆಗಳನ್ನು ಕೇಳುತ್ತಿದ್ದ. ಆಗಾಗ ತಲೆ ಕೆಳಗೆ ಮಾಡಿ ನೆಲವನ್ನು ನೋಡುತ್ತಿದ್ದ. ಜೆಬೆಜ್ ಸ್ಟೋನ್ ತನ್ನ ಕತೆಯನ್ನು

ಮುಗಿಸಿದಾಗ ಡೇನಿಯಲ್ ಉಸಿರುಬಿಟ್ಟ. ಅವನು ಜೆಬೆಜ್ ಸ್ಟೋನನ ಕಡೆಗೆ ಮುಖ ತಿರುವಿದಾಗ ಅವನ ಮೋರೆಯ ಮೇಲೆ ಮೃದುವಾದ ನಗು ಮೂಡಿತ್ತು, ಪರ್ವತಾಗ್ರದ ಮೇಲೆ ಸೂರ್ಯ ಮೂಡಿದ ಹಾಗೆ.

"ನೀನು ಪೂರ್ತಿಯಾಗಿ ಪಿಶಾಚಿಯ ಕೈಯಲ್ಲಿ ಸಿಕ್ಕು ಬಿದ್ದಿದ್ದೀಯೆ. ಆದರೂ ಈ ಕೇಸನ್ನು ನಾನು ತೆಗೆದುಕೊಳ್ಳುವೆನು." ಎಂದು ಅವನು ನುಡಿದ.

"ನೀನು ತೆಗೆದುಕೊಳ್ಳುವಿಯಾ?" ಜೆಬೆಜ್ ಸ್ಟೋನನಿಗೆ ನಂಬಿಕೆಯುಂಟಾಗಲಿಲ್ಲ.

"ಹಾಂ, ನನಗೆ ಎಪ್ಪತ್ತೈದು ಬೇರೆ ಕೆಲಸಗಳಿವೆ. ಆ ಮಿಸ್ಸೂರಿಯ ಒಪ್ಪಂದವನ್ನು ಸರಿಪಡಿಸಬೇಕಾಗಿದೆ. ಆದರೂ ನಿನ್ನ ಕೆಲಸವನ್ನು ತೆಗೆದುಕೊಳ್ಳುವೆ. ಇಬ್ಬರು ನ್ಯೂ ಹೆಂಪಶಾಯರದ ಜನಗಳಿಗೆ ಆ ಪಿಶಾಚಿಯನ್ನು ಎದುರಿಸಲಾಗದಿದ್ದರೆ ನಮ್ಮ ದೇಶವನ್ನು ತಿರುಗಿ ರೆಡ್ (ಕೆಂಪು) ಇಂಡಿಯನ್ನರಿಗೆ ಬಿಟ್ಟುಕೊಡುವದು ಒಳಿತು."

ಅನಂತರ ಸ್ಟೋನನನ್ನು ನೋಡಿ, "ನೀನು ಬರುವಾಗ ಶೀಘ್ರವಾಗಿ ಬಂದೆಯಾ?" ಡೇನಿಯಲ್ ಕೇಳಿದ.

"ನಾನು ಬರುವದು ಸ್ವಲ್ಪ ಸಾವಕಾಶವಾಯಿತು" ಸ್ಟೋನನು ನುಡಿದ.

"ನೀನು ಬೇಗ ಹೋಗುವಿಯಂತೆ," ಡೇನಿಯಲ್ ಆಳುಗಳನ್ನು ಕರೆದು ಕಾನ್ಸ್ಟಿಟ್ಯೂಶನ್ ಮತ್ತು ಕಾನ್‌ಸ್ಟೆಲೇಶನ್ ಕುದುರೆಗಳನ್ನು ಬಂಡಿಗಳಿಗೆ ಕಟ್ಟಿಸಿದ.

ಬೂದು ಬಣ್ಣದ ಆ ಕುದುರೆಗಳ ಮುಂದಿನ ಒಂದು ಕಾಲು ಬೆಳ್ಳಗಿತ್ತು. ಅವುಗಳ ವೇಗವು ಮಿಂಚನ್ನು ಮೀರಿಸುತ್ತಿತ್ತು.

ಅವರು ತಲುಪಿದಾಗ ಇಡೀ ಸ್ಟೋನನ ಕುಟುಂಬವೇ ಉತ್ಸಾಹ, ಸಂತೋಷದಿಂದ ಡೇನಿಯಲ್‌ನನ್ನು ಎದುರುಗೊಂಡಿತು. ಅಂಥ ಅತಿಥಿಯನ್ನು ಸ್ವಾಗತಿಸುವದಕ್ಕೆ ತುಂಬಾ ಸಂತೋಷವಾಗಿತ್ತು ಅವರಿಗೆ. ಸ್ಟೋನನ ಹ್ಯಾಟು ದಾರಿಯಲ್ಲಿ ಹಾರಿಹೋಗಿತ್ತು. ಆವನು ಅದನ್ನು ಹೆಚ್ಚಾಗಿ ಹಚ್ಚಿಕೊಳ್ಳಲಿಲ್ಲ. ಊಟವಾದೊಡನೆಯೇ ಡೇನಿಯಲ್ ಹತ್ತಿರ ತುಂಬ ಮಾತನಾಡುವದಿದ್ದುದರಿಂದ ಮನೆಯವರನ್ನು ಒಳಗೆ ಕಳುಹಿಸಿ ಸ್ಟೋನನು ಮುಂದಿನ ಜಗುಲಿಯ ಮೇಲೆ ಕುಳಿತುಕೊಳ್ಳೋಣವೆಂದ. ಡೇನಿಯಲ್‌ನಿಗೆ ಜಗುಲಿಗಳ

ತೊಂದರೆ ಗೊತ್ತಿದ್ದುದರಿಂದ ಅಡಿಗೆ ಮನೆಯನ್ನೇ ಆರಿಸಿದ. ಹೊಸಬನು ಕರಾರಿನಂತೆ ಸರಿಯಾಗಿ ಮಧ್ಯರಾತ್ರಿಗೆ ಬರಬೇಕಾಗಿತ್ತು. ಹೀಗಾಗಿ ಆ ಹೊಸಬನಿಗಾಗಿ ಅವರು ಅಲ್ಲಿಯೇ ಕಾಯುತ್ತ ಕುಳಿತರು. ಮೇಜಿನಮೇಲೆ ಒಂದು ಹೂಜೆತುಂಬ ಪಾನೀಯ, ಒಲೆಯಲ್ಲಿ ಸಾಕಷ್ಟು ಬೆಂಕಿ ಇರಿಸಿಕೊಂಡು ಅವರು ಕಾಯುತ್ತ ಕುಳಿತಿದ್ದರು.

ಡೇನಿಯಲ್ ಮತ್ತು ಒಂದು ಹೂಜೆ ತುಂಬ ಪಾನೀಯ ಇಟ್ಟಿದ್ದರೆ ಬೇರೆ ಯಾರೂ ಮಿತ್ರರು ಬೇಡವೆನಿಸುತ್ತದೆ. ಆದರೆ ಪ್ರತಿ ನಿಮಿಷಕ್ಕೂ ಜೆಬೆಜ್ ಸ್ಟೋನನ ಹೃದಯ ದುಃಖದಿಂದ ಭಾರವಾಗುತ್ತ ನಡೆದಿತ್ತು. ಅವನ ಕಣ್ಣುಗಳು ಅತ್ತಿತ್ತ ಚಲಿಸುತ್ತಿದ್ದವು. ಅವನು ಪಾನೀಯವನ್ನು ಒಂದೆರಡು ಸಲ ಗುಟುಕಿಸಿ ರುಚಿ ನೋಡಿದ. ಅವನ ನಾಲಿಗೆ ಮರವಟ್ಟು ಹೋಗಿತ್ತು.

" ವೆಬ್‌ಸ್ಟರ–ವೆಬ್‌ಸ್ಟರ್ " ಸ್ಟೋನನ ಧ್ವನಿ ನಿರಾಶೆ ಭಯಗಳಿಂದ ಕಂಪಿಸುತ್ತಿತ್ತು. " ವೆಬ್‌ಸ್ಟರ, ದಯವಿಟ್ಟು ನೀನು ಕುದುರೆಗಳನ್ನು ಹೂಡಿಕೊಂಡು ಈಗ ನಿನ್ನಿಂದ ಸಾಧ್ಯವಿರುವಾಗಲೇ ಹೋಗಿಬಿಡು. "

ಡೇನಿಯಲ್ ವೆಬ್‌ಸ್ಟರ ಅತ್ಯಂತ ಶಾಂತ ಚಿತ್ತದಿಂದ ಪಾನೀಯವನ್ನು ಕುಡಿಯುತ್ತ "ನನ್ನನ್ನು ಅಷ್ಟು ದೂರದಿಂದ, ' ನಿನ್ನ ಸಹವಾಸ ಸೇರುವದಿಲ್ಲ ' ಎಂದು ಹೇಳಲು ಇಲ್ಲಿಗೆ ಕರೆತಂದೆಯಾ ? " ಎಂದ.

" ಪಾಪಿ ನಾನು; ನಿನ್ನನ್ನು ಪಿಶಾಚಿಗಳ ಕೈಯಲ್ಲಿ ಕೊಡಲು ತಂದಿರುವೆ. ಈಗ ನಾನು ಮಾಡಿದ ತಪ್ಪಿನ ಅರ್ಥವಾಗುತ್ತದೆ. ಅವನು ನನ್ನನ್ನು ಬೇಕಾದರೆ ಒಯ್ಯಲಿ. ನಾನು ನನ್ನ ಜೀವದ ಬಗ್ಗೆ ಆಶೆ ಪಡುವದಿಲ್ಲ. ಎಲ್ಲ ಕಷ್ಟಗಳನ್ನೂ ಅನುಭವಿಸುವೆ. ನೀನು ನಮ್ಮ ದೇಶದ ಆಧಾರಸ್ತಂಭವಾಗಿರುವವನು. ನೀನು ಹೆಂಪ್‌ಶಾಯರಕ್ಕೆ ಒಂದು ಹೆಮ್ಮೆ. ಆ ಪಿಶಾಚಿ ನಿನ್ನನ್ನು ಹಿಡಿದುಕೊಳ್ಳಬಾರದು. "

ಬೆಂಕಿಯ ಬೆಳಕಿನಲ್ಲಿ ಬಿಳಿ ಕೂದಲಿನ, ನಡುಗುತ್ತಿದ್ದ, ಕುಸಿದುಹೋದ ಈ ಮನುಷ್ಯನನ್ನು ಡೇನಿಯಲ್ ವೆಬ್‌ಸ್ಟರ ನೋಡಿದ. ಆತನ ಬೆನ್ನಮೇಲೆ ಕೈಯಿರಿಸಿದ.

" ನಿನ್ನ ಈ ತ್ಯಾಗದ ಯೋಜನೆಗೆ ಕೃತಜ್ಞತೆಗಳು. ಮೇಜಿನಮೇಲೆ ಪಾನೀಯವಿದೆ. ಕೈಯಲ್ಲಿ ಕೇಸಿದೆ. ನನ್ನ ಜೀವನದಲ್ಲಿ ಪಾನೀಯವನ್ನಾಗಲೀ

ಕೇಸನ್ನಾಗಲೀ ಅರ್ಧಕ್ಕೆ ಬಿಟ್ಟಿದ್ದುದೇ ಇಲ್ಲ."

ಅದೇ ಸಮಯಕ್ಕೆ ಸರಿಯಾಗಿ ಬಾಗಿಲನ್ನು ಗಟ್ಟಿಯಾಗಿ ತಟ್ಟಿದ ಸದ್ದು ಕೇಳಿಸಿತು.

"ಹಾಂ!" ಡೇನಿಯಲ್ ವೆಬ್‌ಸ್ಟರ ಶಾಂತನಾಗಿ "ನಿಮ್ಮ ಗಡಿಯಾರ ಸ್ವಲ್ಪ ಸಾವಕಾಶವಾಗಿ ಹೋಗುತ್ತದೆ ಎಂದು ಎನಿಸಿತು" ಎನ್ನುತ್ತ ಅವನು ಬಾಗಿಲತನಕ ಹೋಗಿ ಬಾಗಿಲನ್ನು ತೆರೆದ. "ಬನ್ನಿ, ಒಳಗೆ ಬನ್ನಿ." ಹೊಸಬ ಒಳಗೆ ಕಾಲಿರಿಸಿದ. ಬೆಂಕಿಯ ಬೆಳಕಿನಲ್ಲಿ ಆತ ಎತ್ತರವಾಗಿ ಕಪ್ಪಾಗಿ ಕಂಡ. ಅವನ ಕಂಕುಳದಲ್ಲಿ ಕರಿಮರದ ಪೆಟ್ಟಿಗೆಯಿತ್ತು. ಅದರ ಮುಚ್ಚಳದಲ್ಲಿ ರಂಧ್ರಗಳಿದ್ದವು. ಆ ಪೆಟ್ಟಿಗೆಯನ್ನು ಕಂಡೊಡನೆಯೇ ಜೆಬೆಜ್ ಸ್ಟೋನ್ ನರಳಿ ಕೊಠಡಿಯ ಮೂಲೆಯಲ್ಲಿ ಮುದುರಿಕೊಂಡ.

"ವೆಬ್‌ಸ್ಟರ ಎಂದು ತೋರುತ್ತದೆ" ಬಹಳ ನಮ್ರನಾಗಿ ಹೊಸಬ ನುಡಿದ. ಆದರೆ ಅವನ ಕಣ್ಣುಗಳು ದಟ್ಟವಾದ ಕಾಡಿನಲ್ಲಿರುವ ನರಿಗಳ ಕಣ್ಣಂತಿದ್ದವು.

"ನಾನು ಜೆಬೆಜ್ ಸ್ಟೋನನ ವಕೀಲ. ತಮ್ಮ ಹೆಸರನ್ನು ನಾನು ಕೇಳಬಹುದೇ?" ಅವನ ಕಣ್ಣುಗಳೂ ಹೊಳೆಯುತ್ತಿದ್ದವು.

"ನನಗೆ ಅನೇಕ ಹೆಸರುಗಳಿವೆ. ಈದಿನ ರಾತ್ರಿಮಟ್ಟಿಗೆ ಸ್ಕ್ರೇಚ್ ಎಂದು ಇಟ್ಟುಕೊಳ್ಳಿ. ಈಚೆ ನನ್ನನ್ನು ಹಾಗೆಯೇ ಕರೆಯುತ್ತಾರೆ" ಹೊಸಬ ನಿರ್ಲಕ್ಷನಾಗಿದ್ದ.

ಹೊಸಬ ಮೇಜಿನ ಬಳಿ ಕುಳಿತು ಹೂಜೆಯಿಂದ ಒಂದುಗ್ಲಾಸ್ ಪಾನೀಯವನ್ನು ಸುರಿದುಕೊಂಡ. ಹೂಜೆಯಲ್ಲಿದ್ದ ಪಾನೀಯ ತಣ್ಣಗಿತ್ತು. ಆದರೆ ಅವನು ಗ್ಲಾಸಿನಲ್ಲಿ ಸುರಿದುಕೊಂಡಾಗ ಬಿಸಿಯಾಗಿ ಆವಿಯಾಡುವದಕ್ಕೆ ಪ್ರಾರಂಭಿಸಿತು.

ಹೊಸಬ ನಕ್ಕು ತನ್ನ ಹಲ್ಲುಗಳನ್ನು ತೋರಿಸುತ್ತಾ "ನ್ಯಾಯವನ್ನು ಮನ್ನಿಸುವ ನಾಗರಿಕನಂತೆ ತಾವು ನನಗೆ ಸೇರಿದ್ದನ್ನು ನನ್ನ ವಶಕ್ಕೆ ತೆಗೆದುಕೊಳ್ಳಲು ಸಹಾಯ ಮಾಡುವಂತೆ ತಮಗೆ ಕೇಳಿಕೊಳ್ಳುತ್ತೇನೆ."

ಇಲ್ಲಿಂದ ವಾದ ಪ್ರಾರಂಭವಾಯಿತು. ಬಿಸಿ ಬಿಸಿಯಾಗಿ ತೂಕವಾಗಿ ಮಾತುಕತೆಗಳು ನಡೆದವು. ಆರಂಭದಲ್ಲಿ ಜೆಬೆಜ್ ಸ್ಟೋನನಿಗೆ ಒಂದಿಷ್ಟು,

ಆಸೆಯಿತ್ತು. ಆದರೆ ಡೇನಿಯಲ್ ವೆಬ್‌ಸ್ಟರನನ್ನು ಒಂದಾದಮೇಲೆ ಒಂದು ವಾದದಲ್ಲಿ ಸೋಲಿಸುತ್ತ ಬಂದ ಹಾಗೆಲ್ಲ ಅವನು ತನ್ನ ಮೂಲೆಯಲ್ಲಿ ಸುಮ್ಮನೆ ಮುದುಡಿಕೊಂಡು ಆ ಕರಿಯ ಮರದ ಪೆಟ್ಟಿಗೆಯನ್ನು ದಿಟ್ಟಿಸಿ ನೋಡುತ್ತಿದ್ದ. ಕರಾರುಪತ್ರ, ಸಹಿ ಇವುಗಳಬಗ್ಗೆ ಏನೊಂದೂ ಸಂಶಯವಿರಲಿಲ್ಲ. ಅದು ವಾದದಲ್ಲಿ ಅತ್ಯಂತ ಕೆಟ್ಟ ಭಾಗವಾಗಿತ್ತು. ಡೇನಿಯಲ್ ವೆಬ್‌ಸ್ಟರ ವಾದ ವನ್ನು ತಿರುವಿದ. ಮೇಜನ್ನು ಗುದ್ದಿ ನೋಡಿದ. ಆದರೆ ವಾದವನ್ನು ಹೊರಳಿಸ ಲಾರದಾದ. ಒಂದು ಒಪ್ಪಂದಕ್ಕೆ ಬರೋಣವೆಂದ. ಹೊಸಬ ಕೇಳಲಿಲ್ಲ. ಅವನು ಆಸ್ತಿಯ ಬೆಲೆ ಹೆಚ್ಚಾದ್ದನ್ನು ತೋರಿಸಿ ಪ್ರಾಂತದ ಪ್ರತಿನಿಧಿ ಎಂದಾದಮೇಲೆ ಅದರ ಬೆಲೆ ಮತ್ತಿಷ್ಟು ಹೆಚ್ಚಾಗಬೇಕು ಎಂದು ತೋರಿಸಿದ. ಹೊಸಬ ಕಾಯ ದೆಗೆ ಅಕ್ಷರಶಃ ಅಂಟಿಕೊಂಡ. ಡೇನಿಯಲ್ ವೆಬ್‌ಸ್ಟರನು ದೊಡ್ಡ ವಕೀಲ ನಾಗಿದ್ದನು. ಆದರೆ ಬೈಬಲ್ ಹೇಳುವ ಹಾಗೆ ವಕೀಲರೆಲ್ಲರಿಗೆ ಅರಸನಾ ರೆಂದು ಯಾರೂ ಹೇಳಬೇಕಾಗಿಲ್ಲ. ಡೇನಿಯಲ್ ವೆಬ್‌ಸ್ಟರ ತನ್ನ ಜೀವನದಲ್ಲಿ ಮೊಟ್ಟ ಮೊದಲನೇ ಬಾರಿ ತನಗೆ ಸರಿಯಾದ ಎದುರಾಳಿಯನ್ನು ಕಂಡ.

ಕೊನೆಯಲ್ಲಿ ಹೊಸಬ ಸ್ವಲ್ಪ ಆಕಳಿಸಿದ. “ವೆಬ್‌ಸ್ಟರ, ತಮ್ಮ ಪಕ್ಷ ಗಾರನ ಪರವಾಗಿ ಮಾಡಿದ ಬಿರುಸಾದ ವಾದ ತಮಗೆ ಶ್ರೇಯಸ್ಸನ್ನು ತರು ವದು. ಇನ್ನು ತಮಗೆ ಮಂಡಿಸುವದಕ್ಕೆ ವಾದಗಳಿಲ್ಲದಿದ್ದರೆ ನನಗೆ ಸಮಯ ವಿಲ್ಲ.” ಜೆಬೆಜ್ ಸ್ಟೋನನು ಕುಳಿತಲ್ಲಿಯೇ ನಡುಗುತ್ತಿದ್ದ.

ಡೇನಿಯಲ್ ವೆಬ್‌ಸ್ಟರನ ಹುಬ್ಬುಗಳು ಗುಡುಗುವ ಮೋಡಗಳಂತೆ ಕಪ್ಪಾಗಿ ಕಂಡವು.

“ಸಮಯವಿರಲಿ ಇಲ್ಲದಿರಲಿ. ತಮಗೆ ಈ ಮನುಷ್ಯ ದೊರೆಯುವದಿಲ್ಲ. ಸ್ಟೋನನು ಅಮೇರಿಕನ್ ನಾಗರಿಕ. ಅಮೇರಿಕನ್ ನಾಗರಿಕನನ್ನು ಬೇರೆ ರಾಜ್ಯದಲ್ಲಿ ಕೆಲಸಮಾಡುವದಕ್ಕೆ ಯಾರೂ ಒತ್ತಾಯ ಪಡಿಸಲಾರರು. ಅದಕ್ಕಾಗಿಯೇ ನಾವು ಇಂಗ್ಲಂಡ ವಿರುದ್ಧವಾಗಿ '೧೨ ರಲ್ಲಿ ಹೋರಾಡಿದೆವು. ಅದಕ್ಕಾಗಿಯೇ ಇನ್ನೊಂದು ಹೋರಾಟ ನಡೆಯುವದಾದರೆ ನಡೆಯಲಿ.”

“ಬೇರೆ ದೇಶ ! ಯಾರು ನನ್ನನ್ನು ಪರಕೀಯನೆಂದು ಹೇಳುತ್ತಾರೆ?” ಹೊಸಬ ಕೇಳಿದ.

“ಒಂದು ಪಿಶಾ— ತಾವು ಅಮೇರಿಕನ್ ನಾಗರಿಕತೆ ಪಡೆದದ್ದು

ನಾನಂತೂ ಕೇಳಲಿಲ್ಲ." ಡೇನಿಯಲ್ ವೆಬ್‌ಸ್ಟರ ಆಶ್ಚರ್ಯಪಟ್ಟು ಹೇಳಿದ.

ಹೊಸಬ, ವಾಡಿಕೆಯ ಭಯ ಹುಟ್ಟಿಸುವ ನಗುವನ್ನು ನಗುತ್ತ, "ನನಗಿಂತಲೂ ಯಾರಿಗೆ ಹೆಚ್ಚು ಹಕ್ಕು ಇದೆ? ಮೊದಲನೇ ಇಂಡಿಯನ್ನರಿಗೆ ಅನ್ಯಾಯವಾದಾಗ ನಾನು ಅಲ್ಲಿದ್ದೆ. ಮೊದಲನೆಯ ಗುಲಾಮನನ್ನು ಕಾಂಗೋಕ್ಕೆ ಕಳಿಸುವಾಗ ನಾನು ಹಡಗಿನ ಮೇಲೆ ನಿಂತಿದ್ದೆ. ನಿಮ್ಮ ಪುಸ್ತಕಗಳಲ್ಲಿ, ಕತೆಗಳಲ್ಲಿ, ನಂಬಿಕೆಗಳಲ್ಲಿ ನಾನು ಇಲ್ಲವೆ? ನಿಮ್ಮ ಮೊದಲನೇ ವಸಾಹತಿನಿಂದಲೂ ಇದ್ದೇನೆ. ನನ್ನ ವಿಷಯವಾಗಿ ನ್ಯೂ ಇಂಗ್ಲಂಡದ ಚರ್ಚಗಳಲ್ಲಿ ಮಾತುಕತೆಗಳು ನಡೆಯುವದಿಲ್ಲವೇ? ಉತ್ತರದವರು ನನ್ನನ್ನು ದಕ್ಷಿಣ ದೇಶದವನೆನ್ನುತ್ತಾರೆ. ದಕ್ಷಿಣದವರು ನನ್ನನ್ನು ಉತ್ತರದವನೆನ್ನುತ್ತಾರೆ. ಈ ಎರಡೂ ಮಾತುಗಳು ಸರಿಯಲ್ಲ. ನಾನೂ ತಮ್ಮ ಹಾಗೆ ಪ್ರಾಮಾಣಿಕ ಅಮೇರಿಕದವ; ಒಳ್ಳೇ ಕುಲದವ. ನಿಜವಾಗಿ ಹೇಳಬೇಕಾದರೆ– ಜಂಭದ ಮಾತಲ್ಲ– ನನ್ನ ಹೆಸರು ಈ ದೇಶದಲ್ಲಿ ನಿಮಗಿಂತ ಹಿಂದಿನಿಂದಲೂ ಪರಿಚಿತವಾದದ್ದು."

"ಹಾಂ, ನಾನು ರಾಜ್ಯಘಟನೆಗೆ ಅಂಟಿಕೊಳ್ಳುವವ. ನನ್ನ ಕಕ್ಷಿಗಾರನ ವಿಚಾರಣೆ ನಡೆಯಲೇಬೇಕೆಂದು ನಾನು ಹೇಳಿಕೊಳ್ಳುತ್ತೇನೆ." ಡೇನಿಯಲ್ ವೆಬ್‌ಸ್ಟರನ ಹಣೆ ನೆರಿಗೆ ಗಟ್ಟಿಕೊಂಡಿತು.

"ಈ ಕೇಸು ಸಾಮಾನ್ಯದ್ದಲ್ಲ." ಹೊಸಬ ಈ ಮಾತುಗಳನ್ನು ನುಡಿಯುವಾಗ ಅವನ ಕಣ್ಣುಗಳು ಮಿಂಚುತ್ತಿದ್ದವು. "ಆದರೆ, ಈ ಅಪರಾತ್ರಿಯಲ್ಲಿ— "

"ಅದು ಯಾವ ನ್ಯಾಯಸ್ಥಾನದಲ್ಲಿಯೋ ನಡೆಯಲಿ. ಅಮೇರಿಕೆಯ ನ್ಯಾಯಾಧೀಶ ಅಮೇರಿಕೆಯ ಪಂಚರು ಇರುತ್ತಾರಲ್ಲ! ಅವರು ಬದುಕಿದವರಿರಲಿ, ಸತ್ತವರಿರಲಿ, ನಾನು ಅವರ ನಿರ್ಣಯಕ್ಕೆ ತಲೆ ಬಾಗುತ್ತೇನೆ." ಡೇನಿಯಲ್ ವೆಬ್‌ಸ್ಟರ ಹೆಮ್ಮೆಯಿಂದ ಹೇಳಿದ.

"ತಾವು ಈ ಮಾತನ್ನು ಹೇಳಿದ್ದೀರಿ." ಹೊಸಬ ಬಾಗಿಲ ಕಡೆಗೆ ಬೆರಳು ತೋರಿಸಿದ. ಒಡನೆಯೇ ಹೊರಗಡೆಗೆ ಗಾಳಿ ಭರದಿಂದ ಬೀಸುವದು ಕೇಳಿಸಿತು. ಹೆಜ್ಜೆಗಳ ಸಪ್ಪಳ ಕೇಳಿಸತೊಡಗಿತು. ರಾತ್ರಿಯಲ್ಲಿ ಆ ಶಬ್ದಗಳು ಅತ್ಯಂತ ಸ್ಪಷ್ಟವಾಗಿ ಕೇಳಿಸುತ್ತಿದ್ದವು. ಅವು ಜೀವಂತ ಮನುಷ್ಯರ ಹೆಜ್ಜೆಗಳಂತಿರಲಿಲ್ಲ.

" ಅಯ್ಯೋ! ದೇವರೇ! ಈ ಸಮರಾತ್ರಿಯಲ್ಲಿ ಯಾರು ಬರುತ್ತಿದ್ದಾರೆ? " ಜೆಬೆಜ್ ಸ್ಟೋನ ಭಯದಿಂದ ನಡುಗಿ ಕೂಗಿಕೊಂಡ.

ಹೊಸಬ ಗ್ಲಾಸಿನಿಂದ ಕುದಿಯುವ ನೀರನ್ನು ಹೀರಿಕೊಂಡ. "ವೆಬ್‌ಸ್ಟರ ಹೇಳಿಕೊಂಡ ಪಂಚರು ಬರುತ್ತಿದ್ದಾರೆ. ಅವರಲ್ಲಿ ಪ್ರತಿಯೊಬ್ಬನನ್ನೂ ನೋಡುವದಕ್ಕೆ ಬೇಸರವುಂಟಾಗಬಹುದು. ಆದರೂ ತಾವು ಸಹಿಸುವ ಕೃಪ ಮಾಡಬೇಕು. "

ಬೆಂಕಿ ಒಮ್ಮೆ ನೀಲಬಣ್ಣದ ಜ್ವಾಲೆಯನ್ನು ಚಾಚಿತು. ಬಾಗಿಲು ಗಾಳಿಯಿಂದ ತೆರೆದುಕೊಂಡಿತು. ೧೨ ಜನ ಒಬ್ಬೊಬ್ಬರಾಗಿ ಒಳಗೆ ಬಂದರು. ಜೆಬೆಜ್ ಸ್ಟೋನ ಮೊದಲೇ ಭಯದಿಂದ ಕಂಗೆಟ್ಟಿದ್ದ. ಈಗ ಅವನ ಕಣ್ಣುಗಳು ಮಂಜಾದವು. ಯಾಕಂದರೆ ಬಂದವರಲ್ಲಿ ಒಬ್ಬ, ಕ್ರಾಂತಿಕಾಲದಲ್ಲಿ ಮೋಹಕ್ ಕಂದರದ ತುಂಬ ಬೆಂಕಿಯ ಭಯವನ್ನು ಹಬ್ಬಿಸಿದ ವಾಲ್ಟರ ಬಟ್ಲರ. ಇನ್ನೊಬ್ಬ ಇಂಡಿಯನ್ನರ ಕಡೆಗೆ ಸೇರಿಕೊಂಡು ಅವರು ತನ್ನ ಗೆಳೆಯರನ್ನು ಸುಡುತ್ತಿದ್ದುದನ್ನೂ ಕಂಡು ಸಂತೋಷಿಸುತ್ತಿದ್ದ ಸ್ಯಾಮುನ್ ಗರ್ಟಿ. ಅವನ ಕಣ್ಣುಗಳು ಬೆಕ್ಕಿನ ಕಣ್ಣುಗಳಹಾಗೆ ಹಸುರಾಗಿದ್ದವು. ಅವನ ಅಂಗೈ ಮೇಲಿನ ಕಲೆಗಳು ಚಿಗರೆಯ ರಕ್ತದ ಕಲೆಗಳಾಗಿರಲಿಲ್ಲ. ಮೂರನೆಯವ ಫಿಲಿಪ ಅರಸು. ತಾನು ಬದುಕಿದ್ದಾಗ ಇದ್ದಂತೆಯೇ ಗರ್ವದಿಂದ ಕಾಡು ಪಶುವಿನಂತೆ ಇದ್ದ. ಅವನ ತಲೆಯ ಮೇಲೆ ದೊಡ್ಡದೊಂದು ಗುರುತು ಇತ್ತು. ಅದೇ ಗಾಯದಿಂದ ಅವನು ಸತ್ತುದು. ಬಂದವರಲ್ಲಿ ಮನುಷ್ಯರನ್ನು ಚಕ್ರಕ್ಕೆ ಕೊಟ್ಟು ಕೊಲ್ಲಿಸಿದ್ದ ಕ್ರೂರ ಗವ್ಹರ್ನರ್ ಡೇಲ ಇದ್ದ. ಶಿಷ್ಟರನ್ನು ದೂಷಿಸಿದ, ಪ್ಲೀಮುಥ್ ವಸಾಹತನ್ನೂ ಕಷ್ಟಕ್ಕೀಡುಮಾಡಿದ, ಮೇರಿ ಮೌಂಟದ ಕೆಂಪಾದ, ತುಂಬ ಸುಂದರ ಮಾರ್ಟನನಿದ್ದ. ರಾಕ್ಷಸೀ ಸಮುದ್ರಗಳ್ಳ ಟೀಚ್ ಇನ್ನೊಬ್ಬ. ಅವನ ಕರಿಯ ಗುಂಗರು ಗಡ್ಡ ಎದೆಯ ತನಕ ಇಳಿದಿತ್ತು. ಇಕ್ಕಳದಂಥ ಕೈಗಳ ಪಾದ್ರಿ ಜಾನ್ ಸ್ಮಿಟನು ತನ್ನ ಜಿನೇವಾ ಗವನಿನಲ್ಲಿ ನೇಣುಗಂಬಕ್ಕೆ ನಡೆದಾಗ ಇಡುತ್ತಿದ್ದ ಧೈರ್ಯದ ಹೆಜ್ಜೆಯಿಂದಲೇ ನಡೆದು ಬಂದಿದ್ದ. ಅವನ ಕತ್ತಿನ ಸುತ್ತ ಹಗ್ಗದ ಕೆಂಪು ಗುರುತು ಇದ್ದಿತ್ತು. ಅವನು ಕೈಯಲ್ಲಿ ಕಂಪನ್ನು ಬೀರುವ ಕರ ವಸ್ತ್ರವನ್ನು ಹಿಡಿದಿದ್ದ. ಒಬ್ಬೊಬ್ಬರಾಗಿ ಕೋಣೆಯನ್ನು ಪ್ರವೇಶಿಸಿದರು. ನರಕದ ಭೀಕರತೆ ಅವರಲ್ಲಿ ಕಾಣಿಸುತ್ತಿತ್ತು. ಹೊಸಬ ಅವರ ಹೆಸರನ್ನೂ,

ಅವರು ಮಾಡಿದ ಕೆಲಸಗಳನ್ನೂ ಒಂದೊಂದಾಗಿ ಹೇಳುತ್ತ ಬಂದ. ಹೊಸಬ ಹೇಳಿದ ಮಾತಿನಲ್ಲಿ ಒಂದು ಸತ್ಯವಿತ್ತು. ಅಮೇರಿಕದ ಜೀವನದಲ್ಲಿ ಅವರೆಲ್ಲಾ ಪಾತ್ರ ವಹಿಸಿದವರಾಗಿದ್ದರು.

ಅವರೆಲ್ಲ ಕುಳಿತ ನಂತರ "ಪಂಚರ ವಿಷಯವಾಗಿ ನಿಮಗೆ ಸಮಾಧಾನವಾಯಿತೇ ವೆಬ್‌ಸ್ಟರ?" ಎಂದು ಹೊಸಬ ಕೇಳಿದ. ಅವನ ಧ್ವನಿಯಲ್ಲಿ ಅಣಕವಿತ್ತು.

ಡೇನಿಯಲ್ ವೆಬ್‌ಸ್ಟರನ ಹಣೆಯಮೇಲೆ ಬೆವರು ಮೂಡಿತ್ತು. ಆದರೆ ಅವನ ಧ್ವನಿ ಸ್ಪಷ್ಟವಾಗಿತ್ತು.

"ಪೂರ್ತಿ ಸಮಾಧಾನಕರವಾಗಿದೆ. ಈ ಸಮೂಹದಲ್ಲಿ ಜನರಲ್ ಅರ್ನೋಲ್ಡ ನಿರಬೇಕಿತ್ತು."

"ಬೆನಿಡಿಕ್ಟ ಆರ್ನೋಲ್ಡ ಬೇರೆ ಕೆಲಸದಲ್ಲಿದ್ದಾನೆ" ಹೊಸಬನ ಮುಖ ಬಿಗಿದುಕೊಂಡಿತು. "ತಾವು ನ್ಯಾಯಾಧೀಶನನ್ನು ಕೇಳಿದಿರಷ್ಟೇ"

ಆತನು ತನ್ನ ಬೆರಳನ್ನು ಇನ್ನೊಮ್ಮೆ ಬಾಗಿಲ ಕಡೆಗೆ ತೋರಿಸಿದ. ಒಬ್ಬ ಎತ್ತರವಾದ ಸಾಂಪ್ರದಾಯಿಕ ಬಟ್ಟೆಗಳನ್ನು ಧರಿಸಿದವ ಕೋಣೆಯಲ್ಲಿ ಪ್ರವೇಶಿಸಿ ನ್ಯಾಯಾಧೀಶನ ಸ್ಥಳದಲ್ಲಿ ಕುಳಿತುಕೊಂಡ. ಅವನ ಕಣ್ಣುಗಳಲ್ಲಿ ಧರ್ಮಾಂಧತೆ ಉಕ್ಕುತ್ತಿತ್ತು.

"ನ್ಯಾಯ ನಿರ್ಣಯದ ಅನುಭವವಿರುವ ನ್ಯಾಯಾಧೀಶ ಹೆಥೋರ್ನ್ ಈತ. ಸಲೆಮುದಲ್ಲಿ ನಡೆದ ಮೋಸದ ವಿಚಾರಣೆಯನ್ನು ಈತ ನಡೆಸಿದ್ದ. ಈ ವ್ಯವಹಾರದಲ್ಲಿ ಭಾಗವಹಿಸಿದವರಲ್ಲಿ ಅನೇಕರು ಅನಂತರ ಪಶ್ಚಾತ್ತಾಪ ಪಟ್ಟುಕೊಂಡರು. ಆದರೆ ಇವನಿಗೆ ಏನೊಂದೂ ಆಗಿರಲಿಲ್ಲ" ಎಂದ ಹೊಸಬ.

"ಇಂಥ ಮಹತ್ವದ ಕೆಲಸದ ಬಗ್ಗೆ ಪಶ್ಚಾತ್ತಾಪ! ಇಲ್ಲ ಅವರನ್ನು ಗಲ್ಲಿಗೇರಿಸಿರಿ. ಅವರೆಲ್ಲರನ್ನೂ ಗಲ್ಲಿಗೇರಿಸಿರಿ" ಆ ವೃದ್ಧ ನ್ಯಾಯಾಧೀಶನು ತನ್ನಷ್ಟಕ್ಕೆ ತಾನು ಹೇಳಿಕೊಳ್ಳುತ್ತಿದ್ದದ್ದನ್ನು ಕೇಳಿ ಜೆಬೆಜ್ ಸ್ಟೋನನ ಹೃದಯಕ್ಕೆ ತಣ್ಣೀರೆರಚಿದಂತಾಯಿತು.

ವಿಚಾರಣೆ ಪ್ರಾರಂಭವಾಯಿತು. ಪ್ರಾರಂಭದಿಂದಲೂ ಡೇನಿಯಲ್ ವೆಬ್‌ಸ್ಟರನಿಗೆ ತನ್ನ ಕಕ್ಷಿಗಾರನ ಪಕ್ಷ ಹಿಡಿದು ವಾದಿಸುವದು ಕಷ್ಟಕರವಾಗಿಯೇ ಇತ್ತು. ಸ್ಟೋನ್ ತನ್ನ ಪರವಾಗಿ ಒಳ್ಳೆಯದಾದ ಹೇಳಿಕೆ ಕೊಡಲು

ಸಮರ್ಥನಾಗಲಿಲ್ಲ. ಸ್ಕ್ಯಾಮನ್ ಗರ್ಜನೆಯನ್ನು ನೋಡಿದೊಡನೆಯೇ ಒನ್ಮೆ ಅವನು ಕಿರುಚಿಕೊಂಡ. ಉಳಿದವರು ಅವನನ್ನು ಎಚ್ಚರವಪ್ಪಿದ ಅವಸ್ಥೆ ಯಲ್ಲಿ ಮೂಲೆಯಲ್ಲಿ ಕುಳ್ಳಿರಿಸಬೇಕಾಯಿತು.

ಇದರಿಂದ ವಿಚಾರಣೆ ನಿಲ್ಲಲಿಲ್ಲ. ಅದು ಮುಂದೆ ಸಾಗುತ್ತಿತ್ತು. ಉಳಿದ ವಿಚಾರಣೆಗಳಲ್ಲಿ ಡೇನಿಯಲ್ ವೆಬ್‌ಸ್ಟರ ಕಠಿಣ ಪಂಚರನ್ನೂ, ಗಲ್ಲಿಗೆ ಹಾಕುವ ನ್ಯಾಯಾಧೀಶರನ್ನೂ ಕಂಡಿದ್ದ. ಆದರೆ ಈ ಕೇಸು ಆವೆಲ್ಲವುಗಳಿಂತ ತುಂಬ ಕಷ್ಟಕರವಾದುದು ಎಂದು ಆತ ಅರಿತಿದ್ದ. ಅವರು ಕಣ್ಣುಗಳಲ್ಲಿ ಒಂದು ತರದ ಹೊಳಪು ತುಂಬಿಕೊಂಡು ಕುಳಿತುಕೊಂಡಿದ್ದರು. ಹೊಸಬನ ಮಾತು ಸಾಗುತ್ತಲೇ ಇತ್ತು. ಪ್ರತಿಸಲ ಅವನು ಆಕ್ಷೇಪವನ್ನೆತ್ತಿದಾಗ ಆಕ್ಷೇಪವನ್ನು ಪರಾಮರ್ಶಿಸಲಾಗುತ್ತಿತ್ತು. ಡೇನಿಯಲ್ ಆಕ್ಷೇಪವೆತ್ತಿದಾಗ ಆಕ್ಷೇಪವು ತಳ್ಳಿ ಹಾಕಲ್ಪಡುತ್ತಿತ್ತು. ಈ ಸ್ಕ್ರ್ಯಾಚನಂತಹ ಧೂರ್ತನಿಂದ ಒಳ್ಳೆಯ ವಾದವನ್ನು ಅಪೇಕ್ಷಿಸುವದು ಸಾಧ್ಯವಿರಲಿಲ್ಲ.

ಕೊನೆಗೆ ಕುಲುಮೆಯಲ್ಲಿ ಹಾಕಿದ ಕಬ್ಬಿಣದಂತೆ ಡೇನಿಯಲ್ಲನಿಗೆ ಕಾವು ಏರಿತು. ಅವನು ಎದ್ದುನಿಂತು, ಕಾಯಿದೆಗೆ, ನ್ಯಾಯಾಧೀಶರಿಗೆ, ಪಂಚರಿಗೆ, ಮನುಷ್ಯರಿಗಾಗುತ್ತಿದ್ದ ಮೋಸವನ್ನು ಬಯಲಿಗೆಳೆಯಬೇಕೆಂದು ಯೋಚಿಸಿದ. ನ್ಯಾಯಾಸ್ಥಾನಕ್ಕೆ ಅವಮಾನವಾಗುವಂತಿದ್ದರೂ, ಅವನಿಗೇ ಗಂಡಾಂತರ ಒದಗಬಹುದೆಂದು ತೋರಿದರೂ ತಾನು ಹಿಂತೆಗೆಯಬಾರದು ಎಂದುಕೊಂಡ. ಜೆಬೆಜ್ ಸ್ಟೋನನಿಗೆ ಏನು ಸಂಭವಿಸಬಹುದೆಂಬದನ್ನೂ ಆತ ಯೋಚಿಸಲಿಲ್ಲ. ತಾನು ಏನು ಮಾಡಬೇಕೆಂದು ಯೋಚಿಸುತ್ತಿದ್ದಂತೆ ಅವನ ಕೋಪ ಏರುತ್ತಿತ್ತು. ಹೆಚ್ಚೆಚ್ಚು ಆಲೋಚನೆ ಮಾಡಿದಂತೆ, ಉದ್ವೇಗದಲ್ಲಿ ಮಾತುಗಳನ್ನು ಸರಿಯಾಗಿ ಮನಸ್ಸಿನಲ್ಲಿ ಹೊಂದಿಸಿಕೊಳ್ಳಲು ಆಗದೇ ಹೋಯಿತು.

ಕೊನೆಗೆ ಅವನು ಮಾತನಾಡುವ ಸರದಿ ಬಂದಾಗ ನಿಂತುಕೊಂಡು ಸಿಡಿಲಿನಂತೆ ಗರ್ಜಿಸುವದಕ್ಕೆ ಸಿದ್ಧನಾದ. ಮಾತನಾಡಲು ಪ್ರಾರಂಭಿಸುವದಕ್ಕೆ ಮೊದಲು ರೂಢಿಯಂತೆ ನ್ಯಾಯಾಧೀಶರನ್ನೂ, ಪಂಚರನ್ನೂ ಒಂದು ಕ್ಷಣಕಾಲ ನೋಡಿದ. ಅವರ ಕಣ್ಣುಗಳಲ್ಲಿದ್ದ ಹೊಳಪು ದ್ವಿಗುಣಿತವಾಗುತ್ತಿತ್ತು. ಅವರೆಲ್ಲರೂ ಮುಂದಕ್ಕೆ ಬಾಗಿಕೊಂಡು ಕುಳಿತರು. ಅವರು ಕುಳಿತುಕೊಂಡಿರುವ ತರಹ, ನರಿಯನ್ನು ಹಿಡಿಯಲು ಹೊಂಚುಹಾಕುವ ಬೇಟೆ

ನಾಯಿಗಳ ಹಾಗೆ ಇತ್ತು. ಅವನು ಅವರನ್ನು ನೋಡುತ್ತಿದ್ದ ಹಾಗೆಯೇ ಆ ಕೋಣೆಯನ್ನು ಆವರಿಸಿಕೊಂಡಿದ್ದ ಭೀಕರತೆ ಇನ್ನಷ್ಟು ಹೆಚ್ಚಿತು. 'ತಾನೇನು ಮಾಡಬೇಕು, ಎಂದುಕೊಂಡಿದ್ದೆ ?' ಎಂದುಕೊಂಡು ತನ್ನ ಹಣೆಯನ್ನು ಒರಸಿಕೊಂಡ, ಕತ್ತಲೆಯಲ್ಲಿ ಕಾಣದೇ ಇರುವ ಹೊಂಡದಲ್ಲಿ ಕಾಲು ಜಾರುತ್ತಿರುವಾಗ ಉಳಿದುಕೊಂಡವನಂತೆ.

ಏಕೆಂದರೆ ಬರಿಯ ಜೆಬೆಜ್ ಸ್ಟೋನನಿಗಾಗಿಯೇ ಅವರು ಅಲ್ಲಿ ಬಂದಿರಲಿಲ್ಲ. ಇವನಿಗಾಗಿಯೂ ಅವರು ಬಂದಿದ್ದರು. ಹೊಸಬ ತನ್ನ ಬಾಯಿಗೆ ಅಡ್ಡವಾಗಿ ಕೈ ಹಿಡಿದು ಕೊಂಡ ರೀತಿ, ಅವರ ಕಣ್ಣುಗಳಲ್ಲಿದ್ದ ಹೊಳಪು, ಇವುಗಳಿಂದ ಅವನು ಇದನ್ನು ಅರಿತುಕೊಂಡ. ಅವರ ಅಸ್ತ್ರಗಳಿಂದಲೇ ಅವರ ಹತ್ತಿರ ಯುದ್ಧಮಾಡಲು ಹೊರಟರೆ ಅವರ ಕೈಯಲ್ಲಿ ಸಿಕ್ಕಿ ಬೀಳುವದು ಖಂಡಿತ. ಅದು ಹೇಗೆ ಎಂಬದನ್ನು ಅವನಿಗೆ ಹೇಳಲಾಗದಿದ್ದರೂ ಅವನು ಅದನ್ನು ಸಂಪೂರ್ಣವಾಗಿ ಅರಿತಿದ್ದ. ತನ್ನ ಕೋಪ ಭಯಗಳೇ ಅವರ ಕಣ್ಣುಗಳಲ್ಲಿ ಪ್ರತಿಬಿಂಬಿಸಿ ಹೊಳೆಯುವದು ಕಾಣುತ್ತಿತ್ತು. ಅದನ್ನು ಒರೆಸಿ ಹಾಕದಿದ್ದರೆ ಕೇಸನ್ನು ಕಳೆದು ಕೊಂಡಂತೆ. ಅವನು ಒಂದು ನಿಮಿಷ ತಡೆದ. ಅವನ ಕಪ್ಪು ಕಣ್ಣುಗಳು ಕೆಂಡದಂತೆ ಉರಿಯುತ್ತಿದ್ದವು. ಅವನು ಮಾತನಾಡಲು ಪ್ರಾರಂಭಿಸಿದ.

ನಿಧಾನವಾಗಿ ಸಣ್ಣ ಧನಿಯಲ್ಲಿ ಅವನು ಮಾತನಾಡುತ್ತಿದ್ದರೂ ಪ್ರತಿಯೊಂದು ಶಬ್ದವೂ ಸ್ಪಷ್ಟವಾಗಿ ಕೇಳುತ್ತಿತ್ತು. ತನಗೆ ಬೇಕೆನಿಸಿದಾಗ ಸಭ್ಯರ ಮನಸ್ಸನ್ನು ಆಕರ್ಷಿಸಬಲ್ಲನೆಂದು ಅವನಿಗೆ ಖ್ಯಾತಿಯಿತ್ತು. ಉಳಿದವರು ಮಾತನಾಡುವಂತೆ ಮಾತನಾಡುತ್ತ ಗೆಲ್ಲುತ್ತಿದ್ದನು. ದೋಷಾರೋಪಣೆ ಮಾಡುವದು, ಅವಾಚ್ಯ ಶಬ್ದಗಳನ್ನಾಡುವದು ಇವುಗಳಿಂದ ಪ್ರಾರಂಭಿಸಲಿಲ್ಲ. ಒಂದು ದೇಶವನ್ನು ದೇಶವನ್ನಾಗಿ ನಿರ್ಮಾಣಮಾಡುವ, ಒಬ್ಬ ಮನುಷ್ಯನನ್ನು ಮನುಷ್ಯನನ್ನಾಗಿ ಮಾಡುವ ರೀತಿ, ಇವುಗಳನ್ನು ಕುರಿತು ಆಡಿದ.

ಪ್ರತಿಯೊಬ್ಬನಿಗೂ ಗೊತ್ತಿರುವ, ಅನಿಸುವ ಸಂಗತಿಗಳಿಂದಲೇ ಅವನ ಮಾತುಗಳು ಆರಂಭವಾದವು. ನೀವು ಚಿಕ್ಕವರಿರುವಾಗ ಕಾಣುವ, ಹಸಿದಾಗ ಆಗುವ ಆಹಾರದ ರುಚಿ ಬಾಲ್ಯದಲ್ಲಿ ಪ್ರತಿದಿನವೂ ಹೊಸದೆನಿಸುವಂತೆ ಅವನು ಅವರನ್ನು ಮೇಲಕ್ಕೆತ್ತಿ ಕೈಯಲ್ಲಿ ಆಡಿಸಿದ. ಸಾಮಾನ್ಯರಿಗೆ ಅವು ಬಹಳ

ಒಳ್ಳೇ ಸಂಗತಿಗಳು, ಆದರೆ ಅವರಿಗೆ ಸ್ವಾತಂತ್ರ್ಯವಿಲ್ಲದುದರಿಂದ ಅವರು ಕಸಿವಿಸಿ ಪಟ್ಟರು. ಅವನು ಗುಲಾಮಗಿರಿ ಇವುಗಳ ಬಗ್ಗೆ ಮಾತನಾಡುವಾಗ ಅವನ ಧ್ವನಿ ದೊಡ್ಡ ಗಂಟೆಯ ನಿನಾದದಂತೆ ಕೇಳಿಸುತ್ತಿತ್ತು. ಅವನು ಅಮೇರಿಕದ ಪ್ರಾರಂಭದ ದಿನಗಳ ವಿಷಯವಾಗಿ ಯಾ, ಆಗ ಇದ್ದ ಜನರ ವಿಷಯವಾಗಿಯೂ ಹೇಳಿದ. ಅದು ಸಿಂಹಾವಲೋಕನದ ಭಾಷಣವಾಗಿರಲಿಲ್ಲ. ಆದರೆ ಹಾಗೆ ಕಾಣಿಸುತ್ತಿತ್ತು. ಘಟಿಸಿದ ಎಲ್ಲ ಅನ್ಯಾಯಗಳನ್ನೂ ಅವನು ಒಪ್ಪಿಕೊಂಡ. ಈ ನ್ಯಾಯ - ಅನ್ಯಾಯ, ಕಷ್ಟ - ಉಪವಾಸಗಳಿಂದ ಹೊಸಹುಟ್ಟು ಹುಟ್ಟಿದೆ ಎಂದೂ ತೋರಿಸಿಕೊಟ್ಟ. ರಾಜದ್ರೋಹಿಗಳಾದಿಯಾಗಿ ಎಲ್ಲರೂ ಆ ಬಾಳಿನಲ್ಲಿ ಭಾಗವಹಿಸಿದ್ದಾರೆ ಎಂಬುದನ್ನು ತೋರಿಸಿದ.

ನಂತರ ಅವನು ಜೆಬೆಜ್ ಸ್ಟೋನನ ಕಡೆಗೆ ತಿರುಗಿ ಬೆರಳು ತೋರಿಸಿ ನುಡಿದ. ಅವನೊಬ್ಬ ದುರದೃಷ್ಟಶಾಲಿ. ಸಾಮಾನ್ಯ ಮನುಷ್ಯ. ದೈವವನ್ನು ಬದಲಿಸಲು ಆಶಿಸಿದ. ಅದಕ್ಕಾಗಿ ಕೊನೆಯ ತನಕವೂ ಶಿಕ್ಷೆ ಅನುಭವಿಸಲಿದ್ದಾನೆ. ಆದರೂ ತಾನು ಒಳ್ಳೆಯವನೆಂಬುದನ್ನು ಅವನು ತೋರಿಸಿಕೊಟ್ಟ. ಕೆಲವು ಸಲ ಅವನು ಕಠಿಣ, ಕ್ಷುಲ್ಲಕನಾಗಿದ್ದಾನೆ. ಆದರೆ ಅವನು ಮನುಷ್ಯ. ಮನುಷ್ಯ ಜನ್ಮ ದುಃಖಮಯವಾದರೂ ಮನುಷ್ಯನಾಗಿ ಹುಟ್ಟುವದು ಹೆಮ್ಮೆಯ ಮಾತು. ಅವನು ನಿಮಗೆ ಅದನ್ನು ತೋರಿಸಿಕೊಟ್ಟಿದ್ದಾನೆ. ಆದರೆ ನಿಮಗೆ ಅದು ಅನುಭವವಾಗುವದು ಸಾಧ್ಯವಿಲ್ಲ. ನರಕದಲ್ಲಿಯೂ ಮನುಷ್ಯನು ಮನುಷ್ಯನಾಗಿಯೇ ಇದ್ದರೆ ನೀವು ಅರಿಯಬಹುದಿತ್ತು - ಎಂದ ಮುಂತಾಗಿ. ಯಾರೊಬ್ಬನಿಗಾಗಿಯೂ ಹೀಗೆ ಅವನು ವಾದಿಸಿರಲಿಲ್ಲ. ಅವನ ಧ್ವನಿ ಕಹಳೆಯಂತೆ ಮೊಳಗುತ್ತಿತ್ತು. ಮಾನವ ಜನಾಂಗದ ಕೊನೆಯಿಲ್ಲದ ಪ್ರಯಾಣದ ಕಥೆ, ಸೋಲುಗಳನ್ನು ಅವನು ವಿವರಿಸುತ್ತಿದ್ದ. ಮತ್ತೆ ಮಾನವರು ಮೋಸದ ಬಲೆಯಲ್ಲಿ ಸಿಗುತ್ತಾರೆ. ಆದರೂ ಅದು ದೊಡ್ಡ ಪ್ರಯಾಣವೇ. ಬೆಳೆವ ಪಿಶಾಚಿಗೇನು ಅದರ ಅಂತರ್ಯ ತಿಳಿದೀತು. ಮನುಷ್ಯ ಮಾತ್ರ ಅದನ್ನು ಮಾಡಬಲ್ಲ.

ಒಲೆಯಲ್ಲಿ ಬೆಂಕಿ ಕುಗ್ಗುತ್ತಿತ್ತು. ಮುಂಜಾವಿನ ತಂಗಾಳಿ ಬೀಸುತ್ತಿತ್ತು. ಡೇನಿಯಲ್ ವೆಬ್‌ಸ್ಟರ ಮಾತುಗಳನ್ನು ಮುಗಿಸಿದಾಗ ನಸುಬೆಳಕು ಕೊಠಡಿಯನ್ನು ಪ್ರವೇಶಿಸುತ್ತಿತ್ತು. ಅವನ ಮಾತುಗಳು ಕೊನೆಯಲ್ಲಿ ನ್ಯೂ ಹೆಂಪಶಾಯರದ ನೆಲಕ್ಕೆ ಬಂದು ಮುಟ್ಟಿದವು. ಪ್ರತಿಯೊಬ್ಬ ಮನುಷ್ಯನೂ ಪ್ರೀತಿಸಿ ಅಂಟಿಕೊಳ್ಳುವ ನೆಲವನ್ನು ಕುರಿತು ಅವನು ಪಂಚರಿಗೆ ಹೇಳಿದ. ಬಹು

ಸಮುಯದಿಂದ ಮರೆತು ಹೋದ ರೀತಿಯನ್ನು, ವಿಷಯಗಳನ್ನು ಚಿತ್ರವತ್ತಾಗಿ ವಿವರಿಸಿದ. ಅವನ ಮಾತುಗಳು ನೇರವಾಗಿ ಹೃದಯವನ್ನು ತಡಕಾಡಿದವು. ಆ ಶಕ್ತಿಯನ್ನು ಅವನು ದೇವರಿಂದ ಪಡೆದು ಬಂದಿದ್ದ. ಒಬ್ಬನಿಗೆ ಅದು ಅರಣ್ಯದ ಗಹನತೆ ಎಂದೆನಿಸಿದರೆ, ಇನ್ನೊಬ್ಬನಿಗೆ ಸಮುದ್ರದ ಮೇಲೆ ಬೀಸುವ ಗಾಳಿಯನ್ನು ಕೇಳಿಸಿದಂತಾಯಿತು. ಒಬ್ಬನು ತಾನು ಕಳೆದುಕೊಂಡ ದೇಶದ ಅಳವನ್ನು ಕೇಳಿದರೆ ಇನ್ನೊಬ್ಬ ಅನೇಕ ವರುಷಗಳಿಂದ ಯೋಚಿಸದೇ ಇದ್ದ, ಚಿಕ್ಕ ಸುಂದರ ದೃಶ್ಯವನ್ನು ನೋಡಿದಂತೆ ಅನುಭವ ಪಟ್ಟ. ಪ್ರತಿಯೊಬ್ಬನು ಏನನ್ನಾದರೂ ಕಾಣುತ್ತಿದ್ದ. ಡೇನಿಯಲ್ ವೆಬ್‌ಸ್ಟರ ಮಾತುಗಳನ್ನು ಮುಗಿಸಿದಾಗ ತಾನು ಜೆಬೆಜ್ ಸ್ಟೋನನನ್ನು ಉಳಿಸಿದನೋ ಇಲ್ಲವೋ ಗೊತ್ತಾಗಲಿಲ್ಲ. ಆದರೆ ತಾನು ಒಂದು ಅದ್ಭುತವನ್ನು ಸಾಧಿಸಿದ್ದೇನೆಂದು ಅನಿಸಿತು. ನ್ಯಾಯಾಧೀಶ, ಪಂಚರ ಕಣ್ಣುಗಳಲ್ಲಿದ್ದ ಹೊಳಪು ಮಾಯವಾಗಿತ್ತು. ಆ ಕ್ಷಣದ ಮುಟ್ಟಿಗೆ ಅವರು ತಿರುಗಿ ಮಾನವರಾಗಿದ್ದರು. ಮತ್ತು ತಾವು ಮಾನವರಾಗಿದ್ದೇವೆಂದು ಅರಿತಿದ್ದರು.

"ನನ್ನ ಮಾತು ಮುಗಿಯಿತು." ಡೇನಿಯಲ್ ವೆಬ್‌ಸ್ಟರ ಪರ್ವತದಂತೆ ಅಲುಗಾಡದೇ ಸ್ಥಿರವಾಗಿ ನಿಂತುಕೊಂಡ. ಅವನ ಮಾತುಗಳ ಸದ್ದು ಅವರ ಕಿವಿಯಲ್ಲಿ ಮೊಳಗುತ್ತಲೇ ಇತ್ತು. ನ್ಯಾಯಾಧೀಶ ಹೆದೊರ್ನ "ಪಂಚರು ನಿರ್ಣಯವನ್ನು ಆಲೋಚಿಸಲಿ" ಎಂದ.

ವಾಲ್ಟರ ಬಟ್ಲರ ತನ್ನ ಸ್ಥಾನದಲ್ಲಿ ಎದ್ದುನಿಂತ. ಅವನ ಮುಖ ಕಪ್ಪಾಗಿತ್ತು. ಸಂತೋಷದ ಹೆಮ್ಮೆ ಕಾಣುತ್ತಿತ್ತು. ಅವನು ಹೊಸಬನ ಕಣ್ಣುಗಳನ್ನು ದಿಟ್ಟಿಸಿ ನೋಡಿದ. "ಪಂಚರು ತಮ್ಮ ನಿರ್ಣಯವನ್ನು ಯೋಚಿಸಿದ್ದಾರೆ. ನಮ್ಮ ನಿರ್ಣಯ ಜೆಬೆಜ್ ಸ್ಟೋನನ ಪರವಾಗಿ ಇದೆ.

ಅದನ್ನು ಕೇಳಿದೊಡನೆಯೇ ಹೊಸಬನ ಮುಖದಲ್ಲಿ ನಗೆ ಮಾಯವಾಯಿತು. ಆದರೆ ವಾಲ್ಟರ ಬಟ್ಲರ ಹಿಂತೆಗೆಯಲಿಲ್ಲ.

ಅದು ಒದಗಿಸಿದ ಆಧಾರಕ್ಕೆ ಹೊಂದಿಕೆಯಾಗದಿರಬಹುದು. ಆದರೆ ವೆಬ್‌ಸ್ಟರನ ಮಾತುಗಳಿಗೆ ಎಂಥ ಪಾಪಾತ್ಮನಾದರೂ ಮಣಿಯಲೇ ಬೇಕು.

ಕೋಳಿ ಕೂಗಿದೊಡನೆಯೇ ಬೆಳಗಾಗುತ್ತಿದ್ದಾಗ ನ್ಯಾಯಾಧೀಶರು, ಪಂಚಾಯತರು ಇವರೆಲ್ಲ ಅಲ್ಲಿ ಯಾರೂ ಬಂದಿಲ್ಲವೇನೋ ಎನ್ನುವ ಹಾಗೆ

ಹೊಗೆಯಂತೆ ಹೋಗಿಬಿಟ್ಟರು. ಹೊಸಬನು ಡೇನಿಯಲ್ ವೆಬ್‌ಸ್ಟರನ ಬಳಿಗೆ ಒಣ ನಗು ನಗುತ್ತಾ ಬಂದ.

"ಮೇಜರ್ ಬಟ್ಲರನು ಮೊದಲಿನಿಂದಲೂ ದಿಟ್ಟ ಮನುಷ್ಯ. ಇಷ್ಟು ದಿಟ್ಟನೆಂದು ನಾನು ಎಣಿಸಿರಲಿಲ್ಲ. ಹೋಗಲಿ. ಒಬ್ಬ ಸಭ್ಯ ಗೃಹಸ್ಥನು ಇನ್ನೊಬ್ಬ ಸಭ್ಯ ಗೃಹಸ್ಥನಿಗೆ ಶುಭಾಶಯಗಳನ್ನು ಅರ್ಪಿಸುವಂತೆ ನಾನೂ ನಿನಗೆ ಶುಭಾಶಯಗಳನ್ನು ಅರ್ಪಿಸುತ್ತೇನೆ."

"ಆ ಕಾಗದವನ್ನು ದಯವಿಟ್ಟು ಕೊಟ್ಟುಬಿಡುತ್ತೀರಾ?" ಎಂದು ಡೇನಿಯಲ್ ವೆಬ್‌ಸ್ಟರ ಕೇಳಿದ. ಹಾಗೂ ಅದನ್ನು ಕೈಗೆ ತೆಗೆದುಕೊಂಡು ನಾಲ್ಕು ತುಂಡುಗಳನ್ನಾಗಿ ಹರಿದು ಹಾಕಿದ. ಅದು ಸ್ಪರ್ಶಕ್ಕೆ ವಿಲಕ್ಷಣವಾಗಿ ಬೆಚ್ಚಗಾಗಿತ್ತು. "ಈಗ ನಿನ್ನನ್ನು ಹಿಡಿದುಕೊಳ್ಳುತ್ತೇನೆ' ಎನ್ನುತ್ತ ಒಮ್ಮೆ ಕರಡಿಯು ಬಲೆಯ ಹಾಗೆ ಅವನ ಕೈ ಹೊಸಬನ ಕೈಯನ್ನು ಹಿಡಿದುಕೊಂಡಿತು. ಸರಿಯಾಗಿ ಯುದ್ಧಮಾಡಿ ಮಿಸ್ಟರ ಸ್ಕ್ರೇಚ್‌ನಂಥವನನ್ನು ಒಮ್ಮೆ ಮೀರಿದರೆ ಅವನ ಆಟ ನಡೆಯದೆಂದು ಅವನಿಗೆ ಗೊತ್ತಿತ್ತು. ಸ್ಕ್ರೇಚನು ಇದನ್ನು ಬಲ್ಲನೆಂಬುದು ಡೇನಿಯಲ್ ಅರಿತಿದ್ದ.

ಆ ಹೊಸಬ ಕೊಸರಿಕೊಳ್ಳಲು ಯತ್ನಿಸಿದ. ಆದರೆ ವೆಬ್‌ಸ್ಟರನ ಬಲವಾದ ಹಿಡಿತದಿಂದ ಅವನಿಗೆ ತಪ್ಪಿಸಿಕೊಳ್ಳಲಾಗಲಿಲ್ಲ. "ಇದೆಂಥಹದು ವೆಬ್‌ಸ್ಟರ! ಛೀ. ನಾಚಿಕೆಗೇಡು. ಕೇಸಿನ ಖರ್ಚಿನ ಬಗ್ಗೆ ನಿಮಗೆ ಬೇಸರವಾಗಿದ್ದರೆ ಅದನ್ನೂ ನಾನು ಸಂತೋಷದಿಂದ ಕೊಡುತ್ತೇನೆ." ಬಿಳಚಿಕೊಂಡ ಮುಖದ ಮೇಲೆ ನಗು ತಂದುಕೊಳ್ಳುತ್ತ ಅವನು ನುಡಿದ.

"ನೀನು ಕೊಡುವೆಯಂತೆ" ಎನ್ನುತ್ತ ಡೇನಿಯಲ್ ವೆಬ್‌ಸ್ಟರ ಅವನನ್ನು ಅಲ್ಲಾಡಿಸಿದ ರಭಸಕ್ಕೆ ಅವನ ಹಲ್ಲುಗಳು ಕಟಕಟಿಸಿದವು. "ಆ ಮೇಜಿನ ಮೇಲೆ ಕುಳಿತು ಒಂದು ಕಾಗದ ಬರೆದುಕೊಡಬೇಕು. ಈ ಜೆಬೆಜ್ ಸ್ಟೋನನಿಗಾಗಲಿ ಅವನ ಮಕ್ಕಳಿಗಾಗಲಿ ಮೊಮ್ಮಕ್ಕಳಿಗಾಗಲಿ ಅಥವಾ ನ್ಯೂ ಹೆಂಪಶಾಯರದ ಯಾವದೇ ಮನುಷ್ಯನನ್ನು ತಾನು ಕಾಡುವದಿಲ್ಲವೆಂದು ಬರೆದುಕೊಡಬೇಕು. ನಮ್ಮ ದೇಶದಲ್ಲಿ ನಾವು ನರಕವನ್ನೇ ಸೃಜಿಸಲಿ. ಪರಕೀಯರ ಸಹಾಯದ ಅವಶ್ಯಕತೆ ನಮಗಿಲ್ಲ."

"ಓ! ಓಹೋ– ಆದರೆ– ಓ! ನಾನು ಒಪ್ಪಿಕೊಳ್ಳುತ್ತೇನೆ."

ಅವನು ಕುಳಿತುಕೊಂಡ. ಕಾಗದವನ್ನು ಬರೆದಾಯಿತು. ಆದರೆ ಡೇನಿಯಲ್ ವೆಬ್‌ಸ್ಟರನ ಕೈ ಇನ್ನೂ ಆತನ ಅಂಗಿಯ ಕಾಲರಿನಮೇಲೆಯೇ ಇತ್ತು.

ಡೇನಿಯಲ್ ವೆಬ್‌ಸ್ಟರ್, ಬರವಣಿಗೆ ಸರಿಯಾಗಿ, ಕಾಯದೆಗೆ ಬದ್ಧವಾಗಿ ಇದೆಯೇ ಎಂದು ನೋಡಿಕೊಂಡ ನಂತರ 'ನಾನಿನ್ನು ಹೋಗಬಹುದೇ?' ಹೊಸಬ ಕೇಳಿದ.

ಅವನನ್ನು ಇನ್ನೊಮ್ಮೆ ಬಲವಾಗಿ ಅಲ್ಲಾಡಿಸುತ್ತ ಡೇನಿಯಲ್ ವೆಬ್‌ಸ್ಟರ್ ಎಂದ. "ನಿನ್ನನ್ನು ಏನು ಮಾಡಬೇಕೆಂದು ಯೋಚಿಸುತ್ತಿದ್ದೇನೆ. ಕೇಸಿನ ಖರ್ಚನ್ನು ಕೊಡಲು ಒಪ್ಪಿಕೊಂಡಿದ್ದಿ. ಇದೆಲ್ಲ ಸರಿ. ನೀನು ನನ್ನನ್ನೂ ಬಿಟ್ಟಿಲ್ಲ. ನಿನ್ನನ್ನು ಮಾರ್ಶಫೀಲ್ಡಿಗೆ ಒಯ್ಯಲೇ ಎಂದು ಯೋಚಿಸುತ್ತಿದ್ದೇನೆ. ನನ್ನ ಹತ್ತಿರ ಗೋಲಿಯತ್ ಎಂಬ ಕುರಿ ಇದೆ. ಅದು ಎಂಥ ಕಬ್ಬಿಣದ ಬಾಗಿಲನ್ನೂ ಭೇದಿಸಬಲ್ಲದು. ಅದರ ಗದ್ದೆಯಲ್ಲಿ ನಿನ್ನನ್ನು ಬಿಟ್ಟು ಅದು ನಿನ್ನನ್ನು ಏನು ಮಾಡುತ್ತದೆ ಎಂಬದನ್ನು ನೋಡಲು ನನ್ನ ಮನಸ್ಸು ಆಸೆ ಪಡುತ್ತದೆ."

ಅದನ್ನು ಕೇಳಿದೊಡನೆಯೇ ಹೊಸಬ ಅಂಗಲಾಚಿ ಬೇಡಿಕೊಳ್ಳತೊಡಗಿದ. ಅವನ ದೀನತೆಯನ್ನು ಕಂಡು ಸ್ವಾಭಾವಿಕ ಮೃದು ಹೃದಯದ ಡೇನಿಯಲ್ ಅವನನ್ನು ಬಿಡುವದಕ್ಕೆ ಒಪ್ಪಿದ. ಅದಕ್ಕಾಗಿ ಹೊಸಬ ಡೇನಿಯಲ್‌ನಿಗೆ ತುಂಬ ಕೃತಜ್ಞನಾದ. ತನ್ನ ಗೆಳೆತನವನ್ನು ತೋರಿಸುವದಕ್ಕಾಗಿ ತಾನು ಡೇನಿಯಲ್‌ನ ಭವಿಷ್ಯವನ್ನು ಹೇಳುವುದಾಗಿ ನುಡಿದ. ಈ ಭವಿಷ್ಯ ಕೇಳುವದರಲ್ಲಿ ಸಾಮಾನ್ಯವಾಗಿ ನಂಬಿಕೆ ಇಲ್ಲದಿದ್ದರೂ ಡೇನಿಯಲ್ ಒಪ್ಪಿಕೊಂಡ. ಆದರೆ ಹೊಸಬನ ಮಾತುಗಳು ವಿಲಕ್ಷಣವಾಗಿದ್ದವು.

ಅವನು ಡೇನಿಯಲ್‌ನ ಕೈಯ ರೇಖೆಯನ್ನು ಬಹು ಸೂಕ್ಷ್ಮವಾಗಿ ನೋಡಿದ. ಅವನು ಹೇಳಿದ ಒಂದೆರಡು ಸಂಗತಿಗಳು ಬಹಳ ಆಶ್ಚರ್ಯಕರವಾಗಿದ್ದವು. ಆದರೆ ಅವೆಲ್ಲ ಹಿಂದಿನ ಜೀವನವನ್ನು ಕುರಿತಾಗಿದ್ದವು.

"ಹೂಂ, ಆ ಮಾತುಗಳೆಲ್ಲವೂ ನಿಜ. ಅವೆಲ್ಲ ಹಿಂದಿನ ಮಾತಾಯಿತು. ಭವಿಷ್ಯದ ಸುದ್ದಿಯೇನು?"

ಹೊಸಬನು ಸಂತೋಷಗೊಂಡವನಂತೆ ನಕ್ಕು ತಲೆಯಲ್ಲಾಡಿಸಿದ.

"ಭವಿಷ್ಯವು ತಾವು ಆಲೋಚಿಸಿದಂತಿಲ್ಲ. ಅಲ್ಲಿ ಕತ್ತಲು ತುಂಬಿದೆ. ವೆಬ್‌ಸ್ಟರ, ತಾವು ಮಹಾತ್ವಾಕಾಂಕ್ಷಿಗಳು."

"ಹೂಂ," ಡೇನಿಯಲ್ ದೃಢ ಸ್ವರದಲ್ಲಿ ನುಡಿದ. ಅವನಿಗೆ ಒಮ್ಮೆ ರಾಷ್ಟ್ರಾಧ್ಯಕ್ಷತೆ ಬೇಕೆಂದು ಆಸೆಯಿರುವದನ್ನು ಎಲ್ಲರೂ ಬಲ್ಲರು.

"ಅದು ತಮ್ಮ ಮುಷ್ಟಿಯಲ್ಲಿದೆ ಎಂದು ತಮಗನಿಸಬಹುದು. ಆದರೆ ನೀವು ಅದನ್ನು ಪಡೆಯಲಾರಿರಿ. ನಿಮ್ಮನ್ನು ಮೀರಿ ನಿಮಗಿಂತಲೂ ಕಡಿಮೆ ದರ್ಜೆಯವರು ಆ ಪದವಿಯನ್ನು ಹೊಂದುವರು" ಎಂದು ಹೊಸಬ ಹೇಳಿದ.

" ಹೇಗಾದರೂ ನಾನು ಡೇನಿಯಲ್ ವೆಬ್‌ಸ್ಟರನೇ, ಮುಂದೆ ಹೇಳು." ಎಂದ ಡೇನಿಯಲ್ ವೆಬ್‌ಸ್ಟರ.

"ತಮಗೆ ಇಬ್ಬರು ಗಟ್ಟಿಯಾದ ಮಕ್ಕಳಿದ್ದಾರೆ. ತಾವಂತೂ ಒಂದು ವಂಶವನ್ನೇ ಸ್ಥಾಪಿಸುವಂತಿದ್ದೀರಿ. ಇಬ್ಬರೂ ಯುದ್ಧದಲ್ಲಿ ಸಾಯುವವರು. ಯಾರೊಬ್ಬರೂ ಕೀರ್ತಿವಂತರಾಗುವದಿಲ್ಲ."

"ಬದುಕಲಿ, ಸಾಯಲಿ, ಅವರು ನನ್ನ ಮಕ್ಕಳು. ಮುಂದೆ ಹೇಳು" ಎಂದ ಡೇನಿಯಲ್ ವೆಬ್‌ಸ್ಟರ್.

" ತಾವು ದೊಡ್ಡ ಭಾಷಣವನ್ನೇ ಮಾಡಿದ್ದೀರಿ. ಇನ್ನು ಮುಂದೆಯೂ ಮಾಡುತ್ತೀರಿ."

"ಹಾಂ" ಎಂದ ಡೇನಿಯಲ್ ವೆಬ್‌ಸ್ಟರ.

"ತಾವು ಮಾಡುವ ಕೊನೆಯ ಭಾಷಣದಿಂದ ತಮ್ಮ ಜನರಲ್ಲಿಯೇ ಬಹು ಜನ ತಮ್ಮ ವಿರುದ್ಧವಾಗಿ ತಿರುಗಿ ಬೀಳುವರು. ಜನರು ತಮ್ಮನ್ನು ಅನಿಷ್ಟ ರೆಂದೂ, ಬೇರೆ ಕೆಟ್ಟ ಹೆಸರುಗಳಿಂದಲೂ ಕರೆಯುವರು. ನ್ಯೂ ಇಂಗ್ಲಂಡ ದಲ್ಲಿಯೇ ತಮ್ಮನ್ನು ಕೆಲವರು ಸಮಯ ಸಾಧಕನೆಂದೂ,ದೇಶವನ್ನು ಮಾರಿದವ ನೆಂದೂ ಕರೆಯ ತೊಡಗುವರು. ತಾವು ಸಾಯುವ ತನಕವೂ ಅವರ ಧ್ವನಿಯೇ ಸಾಕಷ್ಟು ದೊಡ್ಡದಾಗಿಯೇ ಉಳಿಯುವದು." ಎಂದ ಹೊಸಬ.

"ನಾನು ಪ್ರಾಮಾಣಿಕನಾಗಿಯೇ ನುಡಿಯುತ್ತಿದ್ದೇನೆ. ಜನ ಬೇಕಾ ದ್ದನ್ನು ಹೇಳಲಿ" ಎಂದ ಡೇನಿಯಲ್ ವೆಬ್‌ಸ್ಟರ. ಅವನು ಹೊಸಬನ ದೃಷ್ಟಿ ಯನ್ನು ಸಂಧಿಸಿದ. "ಒಂದು ಪ್ರಶ್ನೆ. ನಾನು ನನ್ನ ಜೀವಮಾನವೆಲ್ಲ ದೇಶದ ಸಂಘಟನೆಗಾಗಿಯೇ ದುಡಿದಿದ್ದೇನೆ. ದೇಶದ್ರೋಹಿಗಳನ್ನು ತಡೆಯಬಲ್ಲೆನೇ?"

"ತಾವು ಬದುಕಿರುವಾಗ ಅದನ್ನು ಸಾಧಿಸಲಾರಿರಿ. ಆದರೆ ಅದಕ್ಕೆ ಜಯ

ದೊರೆಯುವದು ತಮ್ಮ ಮರಣದ ನಂತರ. ತಾವು ಮಾಡಿದ ಭಾಷಣದಿಂದಾಗಿ ಸಹಸ್ರಾರು ಜನರು ತಮ್ಮ ಉದ್ದೇಶ ಸಾಧನೆಗಳಿಗಾಗಿ ಬಡಿದಾಟ ನಡಿಸುವರು. ”

“ಆಯಿತಲ್ಲ, ಕೋತಿಯ ಮೋರೆಯ ಜೋಯಿಸ? ನನ್ನ ಕೈಯಿಂದ ಪೆಟ್ಟು ತಿನ್ನುವದರೊಳಗಾಗಿ ದೂರ ಹೊರಟು ಹೋಗು. ಹದಿಮೂರು ಪ್ರಾಂತಗಳ ಈ ದೇಶವನ್ನು ಉಳಿಸುವದಕ್ಕಾಗಿ ನಾನು ಗೋರಿಗೆ ಬೇಕಾದರೂ ಹೋಗುವದಕ್ಕೆ ಸಿದ್ಧನಾಗಿರುವೆನು. ” ಎನ್ನುತ್ತ ಅವನು ಒದೆಯುವದಕ್ಕೆ ಕಾಲನ್ನೆತ್ತಿದನು. ಆ ಒದೆತದಿಂದ ಒಂದು ಕುದುರೆ ಕೂಡ ಎಚ್ಚರತಪ್ಪಬಹುದಿತ್ತು. ಎಲ್ಲೋ ಒಂದು ತುದಿ ಮಾತ್ರ ಹೊಸಬನಿಗೆ ತಾಗಿತು. ಅವನು ತನ್ನ ಪೆಟ್ಟಿಗೆಯನ್ನು ಕಂಕುಳಲ್ಲಿ ಇರಿಸಿಕೊಂಡು ಬಾಗಿಲಿನಿಂದ ಹಾರಿಹೋದ.

ಜೆಬೆಜ್ ಸ್ಟೋನ ಜಾಗೃತನಾಗುತ್ತಿದ್ದ. “ಈಗ ಹೂಜೆಯಲ್ಲಿ ಏನಿದೆಯೋ ನೋಡೋಣ. ಇಡೀ ರಾತ್ರಿಯೆಲ್ಲ ಒಣ ಕೆಲಸವಾಯಿತು. ಬೆಳಗಿನ ತಿಂಡಿಯಂತೂ ಉಂಟಲ್ಲ” ಎಂದ ವೆಬ್‌ಸ್ಟರ.

ಅಂದಿನಿಂದ ಆ ಹೊಸಬನು ಮಾರ್ಶಫೀಲ್ಡಿನಿಂದ ದೂರವಿರಲು ಯತ್ನಿಸುತ್ತಾನಂತೆ. ಅಂದಿನಿಂದ ಅವನು ನ್ಯೂ ಹೆಂಪಶಾಯರಿನಲ್ಲಿ ಕಾಲಿಟ್ಟದ್ದನ್ನು ಯಾರೂ ಕಾಣಲಿಲ್ಲ.

ಮೆಸೆಚ್ಯೂಸೆಟ್ಸ ಮತ್ತು ವರ್ಮಂಟದ ವಿಚಾರವಾಗಿ ನಾನೇನೂ ಹೇಳಲಾರೆ.

# ಹುಟ್ಟುಹಬ್ಬ

**ಟ್ರೂಮನ್ ಕೆಪೋಟ್**

ಅನು: **ಎಸ್. ಎನ್. ಕೋಡಕಣಿ**

## ಟ್ರೂಮನ್ ಕೆಪೋಟ್ ( 1924 - )

ದೇಶ-ವಿದೇಶಗಳಲ್ಲಿ ವಿಖ್ಯಾತಿಯನ್ನು ಪಡೆದ ತರುಣ ಅಮೇರಿಕನ್ ಬರಹಗಾರರಲ್ಲಿ ಇವನೊಬ್ಬನು. ಬಹಳ ಚರ್ಚೆಗೊಳಗಾದ ಆತನ ಪ್ರಥಮ ಕಾದಂಬರಿ "ಅದರ ವೊಯ್ಸಸ, ಅದರ ರೂಮ್ಸ" 1948 ರಲ್ಲಿ ಪ್ರಕಟವಾಯಿತು. ನಂತರ 1949 ರಲ್ಲಿ ಒಂದು ಸಣ್ಣ ಕತೆಗಳ ಸಂಗ್ರಹ "ಟ್ರೀ ಆಫ್ ನ್ಯಾಟ ಮತ್ತು ಇತರ ಕತೆಗಳು" ಹಾಗೂ 1950 ರಲ್ಲಿ 'ಲೋಕಲ ಕಲರ' ಎನ್ನುವ ಪ್ರವಾಸಗ್ರಂಥ ಬೆಳಕಿಗೆ ಬಂದವು. ಇವನು ಲ್ಯುಸಿಯಾನಾದ ನ್ಯೂಆರ್ಲಿನ್ಸದಲ್ಲಿ ಹುಟ್ಟಿದನು. ಅವನು 19 ವರ್ಷದವನಿರುವಾಗ ಅವನ 'ಮಿರಿಯಮ್' ಯು 'ಮೆಡೆಮೊಸೆಲ್ ಮೆಗೆಝಿನ್' ದಿಂದ ಸ್ವೀಕೃತವಾಯಿತು. ಹಾಗೆಯೇ 1946 ರ ಓ ಹೆನ್ರಿ ಸ್ಮಾರಕ ಕಥಾಸಂಗ್ರಹಕ್ಕಾಗಿ ಆರಿಸಲಾಯಿತು. ನ್ಯೂಯಾರ್ಕ ಟ್ಯಾಮ್ಸ ಪತ್ರಿಕೆಯಲ್ಲಿ ಇವನ 'ಟ್ರೀ ಆಫ್ ನ್ಯಾಟ' ಕಥಾಸಂಗ್ರಹವನ್ನು ವಿಮರ್ಶಿಸುತ್ತಾ ಕಾರ್ಲೋಸ್ ಬೇಕರನು "ಇವನ ಕತೆಗಳಲ್ಲಿ ಮೂರು ಶಕ್ತಿಗಳ ಸಂಗಮವಾಗಿದೆ. ಕಾವ್ಯ ಪ್ರಧಾನವಾದ ಮನೋವೃತ್ತಿ, ಸರಸವಾದರೂ ತುಸು ಅದ್ಭುತವಾದ ಹಾಸ್ಯ, ಹಾಗೂ ಭಯತ್ರಸ್ತರಾದವರ ಚಿತ್ರಗಳನ್ನು ಸೂಚಿಸುವ ಕೌಶಲ್ಯ ಇವೇ ಅವನ ವೈಶಿಷ್ಟ್ಯಗಳು." ಎನ್ನುತ್ತಾನೆ.

ಹುಟ್ಟುಹಬ್ಬ ಕತೆಯಲ್ಲಿ ಬರಹಗಾರನ ಪ್ರತಿಭೆಯನ್ನು ಕಾಣಬಹುದು.

# ಹುಟ್ಟುಹಬ್ಬ

ನಿನ್ನೆ ಸಂಜೆ ಮಿಸ್ ಬೊಬಿಟ್ ಆರು ಘಂಟೆಯ ಬಸ್ಸಿನ ಅಪಘಾತಕ್ಕೆ ತುತ್ತಾದಳು. ಈ ಘಟನೆಯನ್ನು ಕುರಿತು ಹೆಚ್ಚೇನು ಹೇಳಲಿ? ಬೊಬಿಟ್ ಕೇವಲ ಹತ್ತು ವರ್ಷದ ಹುಡುಗಿ. ಆದರೆ ನಮ್ಮ ಊರಿನಲ್ಲಿ ಯಾರೂ ಆ ಮಗುವನ್ನು ಮರೆಯಲಿಕ್ಕಿಲ್ಲ. ಅವಳ ಮಾತುಗಳೂ ಚಟುವಟಿಕೆಗಳೂ ಬಹಳ ಅಸಾಧಾರಣವಾಗಿದ್ದವು. ಅವಳನ್ನು ನಾವು ಮೊಟ್ಟಮೊದಲು ಕಂಡದ್ದು ಒಂದು ವರ್ಷದ ಕೆಳಗೆ. ಆಗ ಅವಳು ತನ್ನ ತಾಯಿಯ ಸಂಗಡ ಮೊಬೈಲದಿಂದ ಹಾದು ಬರುವ ಅದೇ ಆರು ಘಂಟೆಯ ಬಸ್ಸಿನಿಂದ ನಮ್ಮೂರನ್ನು ತಲುಪಿದ್ದಳು. ಅಂದು ನಮ್ಮ ಮನೆಯಲ್ಲಿ ನಮ್ಮ ಕಕ್ಕನ ಮಗನ ಹುಟ್ಟಿದ ಹಬ್ಬ. ಪಟ್ಟಣದ ಬಹುಶಃ ಯಾವತ್ತೂ ಮಕ್ಕಳು ನಮ್ಮ ಮನೆಯಲ್ಲಿ ಕಲೆತಿದ್ದರು. ಮನೆಯಲ್ಲಿ ಹೆಚ್ಚು ಸಂಭ್ರಮವಿದ್ದಿತ್ತು. ಆ ಬಸ್ಸು ಡೇವಿಡ್‌ಕರ್ವಿನಲ್ಲಿ ಶಬ್ದಮಾಡಿದಾಗ ನಾವು ಪೌಳಿಯಲ್ಲಿ ಕುಳಿತುಕೊಂಡು ಎದುರಿಗೆ ಬಡಿಸಿದ ಟೂಟೀ-ಫ್ರೂಟಿ ‡ ಮತ್ತು ಡೆವಿಲ್ ಕೇಕುಗಳನ್ನು ಸವಿಯಲು ಆತುರರಾಗಿದ್ದೆವು. ಆಗ ಮಳೆಯನ್ನೇ ಕಾಣದ ಬೇಸಿಗೆಯ ಉರಿ ಒಣ ಹವೆಯು ತಾನೇ ತಾನಾಗಿ ಮಿಡಿಯುತ್ತಿತ್ತು. ರಸ್ತೆಯ ಮೇಲಿಂದ ಒಂದು ಬಸ್ಸು ಹೋದರೆ ಸಾಕು. ನಿಶ್ಚಲವಾದ ಹವೆಯಲ್ಲಿ ಧೂಳಿಯು ಸ್ವಲ್ಪ ಹೊತ್ತಿನ ವರೆಗೆ ತೂಗಾಡುತ್ತಿತ್ತು. "ಥತ್ ರಸ್ತೆಯನ್ನು ಸರಿಪಡಿಸದಿದ್ದರೆ ನಾವು ಕರಾವಳಿ ಪ್ರದೇಶಕ್ಕೆ ಹೋಗಿ ಬಿಡುತ್ತೇವೆ." ಎಂದು ಚಿಕ್ಕಿ ಎಲಳು ನೂರುಸಲ ಗೊಣಗಿದ್ದಳು. ಆದರೂ ಅವಳು ಧೂಳಿಯನ್ನು ಬಿಟ್ಟು ದೂರ ಹೋಗಿದ್ದಿಲ್ಲ. ಹಾಗೆ ಏನನ್ನೋ ಯೋಚಿಸುತ್ತ, ಏನೋ ಅದ್ಭುತವೂ ಅನಿರೀಕ್ಷಿತವೂ ಆದದ್ದು ಸಂಘಟಿಸೀತೆಂದು ಆಸೆಪಡುತ್ತ ನಾವು ಪೌಳಿಯಲ್ಲಿ ಕುಳಿತಿದ್ದೆವು. ಪ್ಲೇಟುಗಳೊಳಗಿನ ಟೂಟೀಫ್ರೂಟಿ ಕರಗತೊಡಗಿತ್ತು. ಅಷ್ಟರಲ್ಲಿ ರಸ್ತೆಯ ಕೆಂಧೂಳಿಯೊಳಗಿಂದ ಮಿಸ್ ಬೊಬಿಟ್ ನಮ್ಮ ಮನೆಯಕಡೆಗೆ ಬರುವದು ಕಾಣಿಸಿತು. ಅವಳು ಗಂಜಿಹಾಕಿದ ಹಳದೀ

---

‡ ಒಂದು ಪ್ರಕಾರದ ಹಣ್ಣುಗಳಿಂದ ತಯಾರಿಸಿದ ಐಸಕ್ರೀಮು.

ಬಣ್ಣದ ಪಾರ್ಟಿ ಡ್ರೆಸ್ಸಿನಲ್ಲಿದ್ದಳು. ಅವಳು ತರುಣಿಯಂತೆ ಮೈ ಕುಲುಕಿಸುತ್ತ ನಡೆಯುತ್ತಿದ್ದಳು. ಒಂದು ಕೈ ಸೊಂಟದ ಮೇಲಿತ್ತು. ಇನ್ನೊಂದರಲ್ಲಿ ಕೊಡೆ ಇತ್ತು. ಅವಳ ತಾಯಿಯು ಎರಡು ರಟ್ಟಿನ ಚೀಲಗಳನ್ನು ಒಂದು ಮಡಿಚಿದ ವಿಕ್ಟ್ರೋಲಾ* ವನ್ನು ಹಿಡಿದುಕೊಂಡು ಮಗಳನ್ನು ಹಿಂಬಾಲಿಸಿ ಬರುತ್ತಿದ್ದಳು. ಒರಟು ಒರಟಾದ ಬಡಕಲು ಹಂಗಸು. ನಿಶ್ಚಲವಾದ ಕಣ್ಣುಗಳು. ಕ್ಷೀಣ ಹಾಸ್ಯ.

ಪೌಳಿಯಲ್ಲಿ ಕುಳಿತು ಕೊಂಡಿದ್ದ ಹುಡುಗರೆಲ್ಲ ಸ್ತಬ್ಧರಾಗಿದ್ದರು. ಕಡಜೀರಿಗೆ ಹುಳಗಳ ಗುಂಪೊಂದು ಗುಂಯ್ ಗುಡುತ್ತ ಬಂದರೂ ಅವರು ಗಮನ ಕೊಡಲಿಲ್ಲ. ಗೇಟನ್ನು ಸಮೀಪಿಸುತ್ತಿದ್ದ ಮಿಸ್ ಬೊಬಿಟ್ ಮತ್ತು ಅವಳ ತಾಯಿಯ ಕಡೆಗೆ ಅವರ ನೋಟವು ನಟ್ಟಿತ್ತು. "ಕ್ಷಮಿಸಿ ನಾನು ಮನೆಯ ಹಿರಿಯನೊಂದಿಗೆ ಮಾತನಾಡಬಹುದೇ?" ಎಂದು ಮಿಸ್ ಬೊಬಿಟ್ ರಿಬ್ಬನಿನ ತುಂಡಿನಂತೆ ಅಂದವೂ ನಯವೂ ಆದ ತಾರೆ ಅಥವಾ ಶಿಕ್ಷಿಕೆಯಂತೆ ಅಚ್ಚುಕಟ್ಟಾದ ತನ್ನ ಮುಗ್ಧ ವಾಣಿಯಲ್ಲಿ ಕೇಳಿದಳು. ಆಗ ಯೊಲ್ಲದೇಕೆ ಎಂದು ಚಿಕ್ಕಿಗೂ ತುಸು ನನಗೂ ಅನಿಸಿತು. ಹದಿಮೂರಕ್ಕಿಂತ ಚಿಕ್ಕವಯಸ್ಸಿನ ಬಿಲ್ಲಿಬೊಬ್ ಮತ್ತು ಇತರ ಹುಡುಗರೂ ಗೇಟಿನವರೆಗೆ ನಮ್ಮನ್ನು ಹಿಂಬಾಲಿಸಿದರು. ಹುಡುಗಿಯರನ್ನೇ ಕಾಣಲಿಲ್ಲವೇನೋ ಎನ್ನುವಂತೆ ಅವರ ಮುಖಭಾವವಿತ್ತು. ಮಿಸ್ ಬೊಬಿಟ್‌ಳಂತಹ ಹುಡುಗಿಯನ್ನು ನೋಡಲಿಲ್ಲವೆನ್ನುವದು ನಿಜವೇ. ಚಿಕ್ಕಿಯೆನ್ನುವಂತೆ ಅಲಂಕಾರ ಮಾಡಿಕೊಳ್ಳುವ ಹುಡುಗಿಯರನ್ನು ಯಾರು ಕಂಡಿದ್ದಾರೆ? ತುಟಿಗಳಿಗೆ ಕಿತ್ತಳೇ ಬಣ್ಣವನ್ನು ಹಚ್ಚಿಕೊಂಡಿದ್ದಳು. ಅವಳ ಗುಲಾಬಿ ಬಣ್ಣದ ಗುಂಗುರು ಗೂದಲುಗಳು ತಯಾರಿ-ಕೂದಲಿನ ಟೊಪ್ಪಿಯಂತೆ ಕಾಣುತ್ತಿದ್ದವು. ತಿಳುವಳಿಕೆಯನ್ನು ಸೂಚಿಸುವ ಕಣ್ಣುಗಳು ಏನನ್ನೋ ಅರಿಯುವಂತೆ ಕಾಣುತ್ತಿದ್ದವು. ಒಂದು ವಿಲಕ್ಷಣವಾದ ಗಾಂಭೀರ್ಯವನ್ನು ಪ್ರಕಟಿಸುತ್ತ ಗಂಡಸಿನಂತೆ ದಿಟ್ಟತನದಿಂದ ನೋಡುತ್ತಿದ್ದಳು. "ನಾನು ಮಿಸ್ ಲಿಲಿಜೇನ್ ಬೊಬಿಟ್, ಮೆಂಫಿಸ್ ಟೆನಿಸಿಯವಳು" ಎಂದು ಹಿಂಜರಿಯದೆ ತನ್ನ ಪರಿಚಯ ಮಾಡಿಕೊಟ್ಟಳು. ಹುಡುಗರೆಲ್ಲ ನಾಚಿಕೆಯಿಂದ ತಲೆ ತಗ್ಗಿಸಿದರು. ಅತ್ತ ಪೌಳಿಯಲ್ಲಿ ಕುಳಿತಿದ್ದ, (ಆಗ ಬಿಲ್ಲಿ ಬೊಬ್‌ನ ಗೆಳತಿಯಾದ) ಕೋರಾ ಮೆಕಾಲ

---

* ಗ್ರಾಮೋಫೋನ ತರಹ.

ಹುಡುಗಿಯರನ್ನೆಲ್ಲ ಕಿಲಕಿಲನೆ ನಗುವಂತೆ ಮಾಡಿದಳು. ಜೊಬಿಟಳು "ಶುದ್ಧ ಹಳ್ಳಿ ಗಾಡಿನ ಮಕ್ಕಳು" ಎಂದು ತುಂಬ ತಿಳಿದವಳಂತೆ ನಸುನಕ್ಕು ದಿಟ್ಟತನದಿಂದ ಒಮ್ಮೆ ತನ್ನ ಕೊಡೆಯನ್ನು ತಿರುಗಿಸಿದಳು. "ನನ್ನ ತಾಯಿ" ಎಂದು ಬೆರಳನ್ನು ಎತ್ತಿ ತೋರಿಸುತ್ತಿದ್ದಾಗ ಹಿಂದಿದ್ದ ಹೆಂಗಸು ತಾಯಿಯು ಅಹುದೆನ್ನುವಂತೆ ತಲೆಯಲ್ಲಾಡಿಸಿದಳು. ಮುಂದುವರಿದು ಜೊಬಿಟಳು, "ನಾನು ಮತ್ತು ತಾಯಿ ಇಲ್ಲಿಯೇ ಕೋಣೆಯೊಂದನ್ನು ಬಾಡಿಗೆಗೆ ತೆಗೆದುಕೊಂಡಿದ್ದೇವೆ. ದಯಮಾಡಿ ಆ ಮನೆಯನ್ನು ತೋರಿಸುತ್ತೀರಾ? ಯಾರೋ ಮಿಸೆಸ್ ಸೋಯರಳಂತೆ." "ಆಗವೇನು? ಅದೋ, ಬೀದಿಯಾಚೆಗೆ ಕಾಣುವ ಮನೆಯೇ ಮಿಸೆಸ್ ಸೋಯರಳ ಮನೆ." ಎಂದು ಚಿಕ್ಕಿ ಆ ಮನೆಯ ಕಡೆಗೆ ಕೈ ನೀಡಿ ತೋರಿಸಿದಳು. ನಮ್ಮ ಮನೆಗೆ ಅದೊಂದೇ ವಸತಿಗೃಹ. ಎತ್ತರವಾದ ಕತ್ತಲೆ ತುಂಬಿದ ಮನೆ. ಮಿಸೆಸ್ ಸೋಯರಳಿಗೆ ಗುಡುಗು ಮಿಂಚುಗಳೆಂದರೆ ಸಿಂಹಸ್ವಪ್ನ. ಆದ್ದರಿಂದ ತನ್ನ ಮನೆಯ ಮೇಲ್ಛಾವಣಿಯ ಮೇಲೆಲ್ಲಾ ವಿದ್ಯುತ್ ನಿವಾರಕ ಸ್ತಂಭಗಳನ್ನು ನಿಲ್ಲಿಸಿದ್ದಳು. ನಾಚಿಕೆಯಿಂದ ಮುಖವು ಸೇಬು ಹಣ್ಣಿನ ಬಣ್ಣವನ್ನು ತಳೆದ ಬಿಲಿಬೋಬನು, "ಅಮ್ಮಾ ತುಂಬ ಸೆಕೆಯ ದಿನ. ಅವರು ಸ್ವಲ್ಪ ಸಮಯ ನಮ್ಮಲ್ಲಿ ತಂಗಿ ಟೂಟಿಫ್ರೂಟಿಯನ್ನು ಸವಿದು ಹೋದರೆ ಚನ್ನಲ್ಲವೇ?" ಎಂದನು. "ಅಯ್ಯೋ, ಅದೇ ನಾನು ಯೋಚಿಸುತ್ತಿರುವದು, ಆದೀತು." ಎಂದು ಚಿಕ್ಕಿ ಏಲಳು ಹೊಂಗುಟ್ಟಿದಳು. ಮಿಸ್ ಜೊಬಿಟಳು, "ತುಂಬಾ ಹಿತಕಾರಿಯಾದ ಟೂಟಫ್ರೂಟಿ. ಇರಲಿ, ನಮ್ಮನ್ನು ಕ್ಷಮಿಸಬೇಕು." ಎಂದು ತಲೆಯಲ್ಲಾಡಿಸಿದಳು. ಹಾಗೆಯೇ ಮಿಸೆಸ್ ಸೊಯರಳ ಮನೆಯನ್ನು ಕುರಿತು ನಡೆದೇ ಬಿಟ್ಟಳು. ಅವಳ ತಾಯಿಯು ತನ್ನ ಕೈಯಲ್ಲಿದ್ದ ಮೊಟ್ಟೆಗಳನ್ನು ಹಿಡಿದುಕೊಂಡು ದೇಹವನ್ನು ಎಳೆದುಕೊಂಡು ಹೋಗುತ್ತಿದ್ದಂತೆ ಬಹಳ ಪ್ರಯಾಸದಿಂದ ನಡೆದಿದ್ದಳು. ಮಿಸ್ ಜೊಬಿಟ್ಟಳು ಹಿಂತಿರುಗಿ ಒಮ್ಮೆ ಕಾತರ ದೃಷ್ಟಿಯನ್ನು ಬೀರಿದಳು. ಅವಳ ಕಣ್ಣುಗಳು ಸೂರ್ಯಕಾಂತಿ ಪುಷ್ಪದ ಕಾಂತಿಯನ್ನು ಹೊರಗೆಡಹುತ್ತಿದ್ದವು. ಯಾವುದೋ ಒಂದು ಕವಿತೆಯನ್ನು ನೆನಪು ಮಾಡುವವಳಂತೆ ಕಣ್ಣುಗಳನ್ನು ಅತ್ತಿಂದಿತ್ತ ಹೊರಳಿಸಿದಳು. "ನನ್ನ ತಾಯಿ ಏನೇನೋ ಹುಚ್ಚು ಹುಚ್ಚಾಗಿ ಮಾತನಾಡುತ್ತಾಳೆ. ಆದ್ದರಿಂದ ಅವಳ ಪರವಾಗಿ ನಾನೇ ಮಾತನಾಡಬೇಕಾಗಿದೆ." ಎಂದು ಅವಸರ ಅವಸರ

ವಾಗಿ ನುಡಿದು ನಿಟ್ಟುಸಿರು ಬಿಟ್ಟಳು. "ನನ್ನ ತಾಯಿ ಹೊಲಿಗೆಯನ್ನು ಚನ್ನಾಗಿ ಅರಿತವಳು. ಮೆಂಫಿಸ್ ಟಿಲಾಫಸೆ ಮೊದಲಾದ ನಗರಗಳಲ್ಲಿ ಬಟ್ಟೆಗಳನ್ನು ಹೊಲಿದಿದ್ದಾಳೆ. ನನ್ನ ಬಟ್ಟೆಗಳನ್ನು ನೀವು ನೋಡಿದ್ದೀರಿ. ಮೆಚ್ಚಿದ್ದೀರಿ. ಅವುಗಳನ್ನು ಹೊಲಿದವಳೂ ನನ್ನ ತಾಯಿಯೇ. ಯಾವದೇ ಪ್ರಕಾರದ ಚಿತ್ರವನ್ನು ಬಿಡಿಸಬಲ್ಲಳು. ಮೊನ್ನೆ ಮೊನ್ನೆ 'ಲೇಡೀಸ್ ಹೋಮ ಜರ್ನಲ್'ನಿಂದ ೨೫ ಡಾಲರು ಬಹುಮಾನವನ್ನೂ ಪಡೆದಿದ್ದಾಳೆ. ಹೆಣಿಗೆ ಮತ್ತು ಕಸೂತಿ ಕೆಲಸಗಳನ್ನು ನಯವಾಗಿ ಮಾಡಿಕೊಡುತ್ತಾಳೆ. ನಿಮ್ಮ ಯಾವದೇ ಕೆಲಸವನ್ನು (ಹೊಲಿಗೆಯ) ನಮ್ಮ ತಾಯಿಯಿಂದಲೇ ಮಾಡಿಸಿಕೊಳ್ಳಿ. ನಿಮ್ಮ ಸಂಬಂಧಿಕರಿಗೂ ಗೆಳತಿಯರಿಗೂ ಹೇಳಿ ದಯವಿಟ್ಟು ಶಿಫಾರಸು ಮಾಡಿ. ಅಭಿನಂದನೆಗಳು." ಎನ್ನುತ್ತ ಲಗುಬಗೆಯಿಂದ ಹೊರಟು ಹೋದಳು.

ಕೋರಾ ಮೆಕಾಲ ಮತ್ತು ಇತರ ಹುಡುಗಿಯರು ಏನೋ ಸಂಶಯದಿಂದ ತಮ್ಮ ರಿಬ್ಬನುಗಳನ್ನು ಎಳೆದುಕೊಂಡರು. ಏನೋ ಮುಖ ಭಂಗವಾದಂತೆ ಕಂಡರು. ಮಿಸ್ ಕೋರಾ ತನ್ನ ಮುಖವನ್ನು ವಿಕಾರಗೊಳಿಸಿ ಅಣಕಿಸುತ್ತ "ಇದೋ ನಾನು ಮಿಸ್ ಬೊಬಿಟ್. ನಾನೇ ಮಿಸ್ ಬೊಬಿಟ್. ರಾಜಕುಮಾರಿ ಎಲಿಝಾಬೆತ್ ನಾನೇ," ಎಂದು ಮುಂದುವರಿಯುತ್ತ "ನನ್ನ ಉಡುಪು ಅಂದವಾಗಿದೆಯಲ್ಲವೇ ? ಅಚ್ಚುಕಟ್ಟಾಗಿದೆಯಲ್ಲವೇ ? ನನ್ನ ಬಟ್ಟೆಗಳನ್ನು ಅಟ್ಲಾಂಟಾದಿಂದ ತರಿಸುತ್ತೇನೆ. ನನ್ನ ಎಕ್ಕಡಗಳು ನ್ಯೂಯಾರ್ಕಿನವು. ಇದಲ್ಲದೇ ನನ್ನ ಉಂಗುರವನ್ನು ಮೆಕ್ಸಿಕೋದಿಂದ ತರಿಸಿರುವೆನು." ಎಂದು ತನ್ನ ಜಂಬದ ಮಾತನ್ನು ಮುಗಿಸಿದಳು. ಚಿಕ್ಕಿ ಏಲಳು, "ವಯಸ್ಸಿನಲ್ಲಿ ನಿಮ್ಮ ಜೊತೆಯವಳೇ. ಅವಳನ್ನೇಕೆ ಅಣಕಿಸುತ್ತೀರಿ ? ಪಾಪ ಊರಿಗೂ ಹೊಸಬಳು." ಎಂದಳು. ಆದರೆ ಆ ತುಂಟ ಹುಡುಗಿಯರೆಲ್ಲ ದುಷ್ಟ ಯಕ್ಷಿಣಿಯರಂತೆ ತಮ್ಮ ಅಣಕ ನಾಟಕದಲ್ಲಿಯೇ ತೊಡಗಿದ್ದರು. ಕೆಲವು ಹುಡುಗರು ವಿಶೇಷವಾಗಿ ಹುಡುಗಿಯರ ಸಂಗಡ ಮಾತನಾಡಲು ಬಯಸುವ ಹುಚ್ಚು ಪೋಲಿಗಳು, ಅವರಲ್ಲಿ ಬೆರೆತು ಬಾಯಿಗೆ ಬಂದಂತೆ ಹರಟೆಹತ್ತಿದರು. ಚಿಕ್ಕಿ ಏಲಳು ಕಿಡಿಕಿಡಿಯಾದಳು. ಅವರನ್ನೆಲ್ಲ ಮನೆಗೆ ಅಟ್ಟುತ್ತೇನೆಂದೂ ತಂದೆಯವರಿಂದ ಥಳಿಸುವಂತೆ ಮಾಡುತ್ತೇನೆಂದೂ ಬೆದರಿಸಿದಳು. ಆದರೆ ಅವಳು ತನ್ನ ಬೆದರಿಕೆಯನ್ನು ಜಾರಿಮಾಡುವ ಮೊದಲೇ ಮಿಸ್ ಬೊಬಿಟಳು

ವಿಲಕ್ಷಣವಾಗಿ ಹೊಸ ಬಟ್ಟೆಗಳನ್ನು ಧರಿಸಿ ಮಿಸೆಸ್ ಸೊಯುರಳ ಪೌಳಿ ದಾಟಿ ಆ ಹುಡುಗರ ಕಡೆಗೆ ಬಂದೇಬಿಟ್ಟಳು.

ಹುಡುಗಿಯರೆಲ್ಲ ಮಿಸ್ ಬೊಬಿಟಳನ್ನು ಕುರಿತು ಅಣಕವಾಡುತ್ತಿದ್ದಾಗ ಕೆಲವು ಹುಡುಗರು ಸ್ತಬ್ಧರಾಗಿದ್ದರು. ಅವರೆಂದರೆ ಬೊಬಿಟಳು ಮನೆಯನ್ನು ಸೇರುತ್ತಿದ್ದಾಗ ಮಬ್ಬುನೋಟದಿಂದ ಆಸೆಗಣ್ಣುಗಳಿಂದ ಅವರನ್ನೇ ದಿಟ್ಟಿಸುತ್ತಿದ್ದವರು. ಆ ಹುಡುಗರು ಈಗ ಮೆಲ್ಲನೆ ಎದ್ದು ಗೇಟಿನ ಕಡೆ ನಡೆದರು. ಕೋರಾ ಮೆಕಾಲಳು ಮೂಗು ಮುರಿದು ಮುಟಿಯನ್ನು ಮುಂದಕ್ಕೆ ಚಾಚಿದಳು. ಉಳಿದ ನಾವೆಲ್ಲ ಮೆಟ್ಟಲುಗಳ ಮೇಲೆ ಕುಳಿತುಕೊಂಡೆವು. ಬೊಬಿಟಳು ಯಾರನ್ನೂ ಕಣ್ಣೆತ್ತಿ ಕೂಡ ನೋಡಲಿಲ್ಲ. ಮಿಸೆಸ್ ಸೊಯುರಳ ಮನೆಯಂಗಳದಲ್ಲಿ ಕೋರಿ ಹಣ್ಣಿನ ಗಿಡದ ನೆರಳು ದಟ್ಟವಾಗಿ ಬಿದ್ದಿರುತ್ತದೆ. ಗಿಡಗಳ ಸುತ್ತಲೂ ಹುಲ್ಲು ಮತ್ತು ಪುಟ್ಟ ಪುಟ್ಟ ಪೊದೆಗಳು ಬೆಳೆದಿರುತ್ತವೆ. ಒಮ್ಮೊಮ್ಮೆ ಮಳೆ ಸುರಿದ ನಂತರ ಆ ಮುಳ್ಳುಪೊದೆಗಳೊಳಗಿಂದ ಹೊಮ್ಮುವ ಸುವಾಸನೆಯು ನಮ್ಮ ಮನೆಯ ಅಂಗಳವನ್ನೂ ಮುಟ್ಟುತ್ತದೆ. ಅಂಗಳದ ಮಧ್ಯದಲ್ಲಿ ಮಿಸೆಸ್ ಸೊಯುರಳು ಬೋಸ್ಟನದ ಎತ್ತಿಗಾಗಿ ೧೯೧೨ರಲ್ಲಿ ಕಟ್ಟಿಸಿದ ಸ್ಮಾರಕವು ಕಾಣಿಸುತ್ತದೆ. ಆ ಎತ್ತು ಒಂದು ತೊಟ್ಟಿ ತುಂಬ ಪೇಂಟು ಕುಡಿದದ್ದರಿಂದ ಸತ್ತುಹೋಗಿತ್ತು. ಮಿಸ್ ಬೊಬಿಟಳು ಜಿಂಕೆಯಂತೆ ಕುಣಿಯುತ್ತ ವಿಕ್ಟ್ರೋಲಾವನ್ನು ಹಿಡಿದುಕೊಂಡು ಬಂದು, ಅಂಗಳದಲ್ಲಿಟ್ಟಳು. ಕೌಂಟ ಆಫ್ ಲಕ್ಸೆಂಬರ್ಗ ಎನ್ನುವ ಮುದ್ರಿತ ಹಾಡನ್ನು ಪ್ರಾರಂಭಿಸಿದಳು. ಅಷ್ಟರಲ್ಲಿ ಇರುಳು ಕವಿದು ಬಂದಿತು. ಹಕ್ಕಿಗಳು ಬಾಣದಂತೆ ವೇಗವಾಗಿ ಹಾರಿಬಂದು ಮರದ ಕೊಂಬೆಗಳ ತೋಳತೆಕ್ಕೆಯಲ್ಲಿ ಮರೆಯಾದವು. ಬಿರುಗಾಳಿಯು ಮುಂಚೆ, ಎಲೆಗಳೂ ಹೂವುಗಳೂ ಯಾವುದೋ ಒಂದು ವಿಶಿಷ್ಟ ಪ್ರಭೆಯಿಂದ ಮಿನುಗಿದವು. ಬೊಬಿಟಳು ಪಾವುಡರ ಪಫ್ ಮಾಡಿದಂಥ ತಿಳಿಬಣ್ಣದ ಸ್ಕರ್ಟನ್ನು ಧರಿಸಿದ್ದಳು. ಹೊಂಬಣ್ಣದ ಜೇಗಡಿಯ ಅಂಚುಗಳುಳ್ಳ ಅವಳ ರಿಬ್ಬನ್ನುಗಳು ಗಾಳಿಯಲ್ಲಿ ಕುಣಿದಾಡುತ್ತಿದ್ದವು. ಕವಿದು ಬರುತ್ತಿರುವ ಇರುಳಿನ ಮಬ್ಬಿನಲ್ಲಿ ಆ ಹುಡುಗಿಯು ವಿಲಕ್ಷಣವಾದ ಬೆಳಕಿನಿಂದ ಒಪ್ಪುತ್ತಿದ್ದಳು. ತೋಳುಗಳನ್ನು ಕಮಾನಿನಾಕಾರದಲ್ಲಿ ತಲೆಯ ಮೇಲಕ್ಕೆತ್ತಿ ಹಿಡಿದಿದ್ದಳು. ಅವಳ ಕೈಗಳು ಲಿಲಿ ಹೂವುಗಳಂತೆ ಮೆಲ್ಲನೆ ತೊನೆದಾಡುತ್ತಿದ್ದವು.

ಕಾಲಿನ ಹೆಬ್ಬೆರಳುಗಳ ಮೇಲೆ ಒಂದು ವಿಶಿಷ್ಟ ಭಂಗಿಯಲ್ಲಿ ನಿಂತಳು. ಆ ಭಂಗಿಯಲ್ಲಿ ಬಹು ಹೊತ್ತಿನ ವರೆಗೆ ಆಕರ್ಷಕಳಾಗಿ ನಿಂತಿರುವದನ್ನು ಕಂಡು ಚಿಕ್ಕಿ ಏಲೀಜೂ ತುಂಬ 'ಸೊಗಸಾಗಿದೆ' ಎಂದು ಅಭಿಪ್ರಾಯಪಟ್ಟಳು. ಆ ನಂತರ ಜೊಬಿಟಳು ಕುಣಿಯತೊಡಗಿದಳು. ಒಂದೇ ಸವನೆ ಕುಣಿದಳು. ವಿಕ್ಟ್ರೋಲಾದ ಹಾಡು ಮುಗಿಯುವ ವರೆಗೆ ಕುಣಿದಳು; ಗಿರಗಿರನೆ ತಿರುಗಿದಳು. ಅದನ್ನು ಕಂಡು ತನಗಂತೂ ತಲೆ ತಿರುಗತೊಡಗಿತೆಂದು ಚಿಕ್ಕಿಯು ಹೇಳಿದಳು. ಇನ್ನೊಂದು ಹಾಡು ಪ್ರಾರಂಭವಾಯಿತು. ಚಂದ್ರಮನು ಗಿರಿಶೃಂಗದ ಮೇಲೆ ಏರಿ ಬಂದ. ರಾತ್ರಿ ಊಟದ ಹೊತ್ತಾಯಿತು. ಎಲ್ಲ ಹುಡುಗರು ತಮ್ಮ ತಮ್ಮ ಮನೆಗಳಿಗೆ ಹೊರಟು ಹೋದರು. ರಾತ್ರಿಯು ಇರಿಸ ಹೂವುಗಳು ಅರಳಿ ಸುವಾಸನೆಯನ್ನು ಹರಡಿದವು. ಆದರೂ ಜೊಬಿಟಳ ನೃತ್ಯ ನಡೆಯುತ್ತಲೇ ಇತ್ತು.

ನಂತರ ಬಹು ಕಾಲದ ವರೆಗೆ ನಾವು ಅವಳನ್ನು ನೋಡಲಿಲ್ಲ. ಪ್ರೀಚರನ್ಯಾರ ಪ್ರತಿದಿನವೂ ಬರುತ್ತಿದ್ದ. ರಾತ್ರಿ ಊಟವಾಗುವ ವರೆಗೆ ಮಾತನಾಡುತ್ತ ಕುಳಿತುಕೊಳ್ಳುತ್ತಿದ್ದ. ಪ್ರೀಚರ ತಂತಿಯಂತೆ ತೆಳ್ಳನೆಯ ಮನುಷ್ಯ. ಆತನ ತಲೆಯಮೇಲೆ ಕೆಂಪು ಗುಂಗುರು ಗೂದಲುಗಳಿದ್ದವು. ಆತನಿಗೆ ಒಟ್ಟು ಹನ್ನೊಂದು ಜನ ಸಹೋದರರು. ಮತ್ತು ಸಹೋದರಿಯರು. ಅವರೆಲ್ಲ ಪ್ರೀಚರನನ್ನು ಕಂಡು ನಡುಗುತ್ತಾರೆ. ಆತ ತುಂಬ ಭಯಂಕರ ಸ್ವಭಾವದವ. ಆತನ ಸಂಕುಚಿತ ಮತ್ತು ಕ್ರೂರ ಮನೋವೃತ್ತಿ ನಮ್ಮ ನೆರೆಹೊರೆಯಲ್ಲೆಲ್ಲ ಪ್ರಸಿದ್ಧವಾಗಿರುತ್ತದೆ. ಕಳೆದ ಜುಲೈ ನಾಲ್ಕನೇ ತಾರೀಖಿಗೆ ಆತನು ಓಲಿ ಒವರ್ಟನನ್ನು ಸಿಕ್ಕಾಬಟ್ಟೆ ಥಡಿಪೆಟ್ಟು ಕೊಟ್ಟದ್ದರ ಫಲವಾಗಿ ಆತನ ಮನೆಯವರು ಹುಡುಗನನ್ನು ಪೆಸ್ಕೋಲಾದ ಆಸ್ಪತ್ರೆಗೆ ಕರೆದೊಯ್ಯಬೇಕಾಯಿತು. ಇನ್ನೊಂದು ಸಲ ಸಂತಾಪದ ಭರದಲ್ಲಿ ಪ್ರೀಚರನು ಒಂದು ಹೇಸರಗತ್ತೆಯ ಕಿವಿಯನ್ನೇ ಅರ್ಧ ಕಚ್ಚಿ ಹರಿದುಬಿಟ್ಟ. ಆ ತುಂಡು ಕಿವಿಯನ್ನು ಚನ್ನಾಗಿ ಜಗಿದು ನೆಲದ ಮೇಲೆ ಉಗುಳಿಬಿಟ್ಟ. ಬಿಲಿಬೋಬನು ಚಿಕ್ಕವನಿರುವಾಗ ಆತನೂ ಪ್ರೀಚರನ ರಾಕ್ಷಸ ಕೃತ್ಯಕ್ಕೆ ತುತ್ತಾಗಿದ್ದ. ಆತನ ಕಾಲರಿನಲ್ಲಿ ಪ್ರೀಚರನು ಕವಡಿಗಳನ್ನು ಒಗೆಯುತ್ತಿದ್ದನು. ಕಣ್ಣುಗಳಲ್ಲಿ ಮೆಣಸಿನ ಪುಡಿಯನ್ನು ಹಾಕುತ್ತಿದ್ದನು. ಬಿಲಿಬೋಬನ ಮನೆಯ ಅಭ್ಯಾಸದ ಪುಸ್ತಕವನ್ನು ಹರಿದು

ಬೀಸಾಡುತ್ತಿದ್ದನು. ಈಗ ಅವರಿಬ್ಬರೂ ಪಟ್ಟಣದೊಳಗಿನ ಪರಮ ಮಿತ್ರರು. ಒಂದೇ ರೀತಿಯಲ್ಲಿ ಮಾತನಾಡುತ್ತಾರೆ; ನಡೆಯುತ್ತಾರೆ. ಇಬ್ಬರೂ ಜತೆಯಾಗಿಯೇ ದಿನವೆಲ್ಲಾ ಎಲ್ಲಿಯೋ ಕಾಣೆಯಾಗುತ್ತಾರೆ. ಅವರು ಎಲ್ಲಿ ಹೋಗುತ್ತಾರೆಂಬುದು ದೇವರಿಗೇ ಗೊತ್ತು. ಮಿಸ್ ಬೊಬಿಟಳು ಬರುವವಕ್ಕೆ ಮುಂಚೆ ಅವರ ಸಂಚಾರವು ಮನೆಯ ನೆರೆಹೊರೆಯಲ್ಲಿಯೇ ವಿಶೇಷವಾಗಿದ್ದಿತ್ತು. ಇಬ್ಬರೂ ಕೂಡಿ ಟೆಲಿಫೋನ ತಂತಿಗಳ ಮೇಲೆ ಕುಳಿತುಕೊಂಡ ಗುಬ್ಬಿಗಳನ್ನು ಹೊಡೆದು ಉರುಳಿಸುತ್ತಿದ್ದರು. ಬಿಲಿಬೋಬನು ತನ್ನ ಹವಾಯಿ ಸಿತಾರನ್ನು ಬಾರಿಸುತ್ತಿದ್ದ. ಇಬ್ಬರೂ ಉಚ್ಚ ಧ್ವನಿಯಲ್ಲಿ ಹಾಡುತ್ತಿದ್ದರು. ಕಕ್ಕ ಬಿಲಿಜೋಬನಂತೂ (ಕೋರ್ಟಿನಲ್ಲಿ ನ್ಯಾಯಾಧೀಶನಾಗಿದ್ದ) ಇವರ ಕೂಗು ಕೋರ್ಟಿನ ವರೆಗೆ ಕೇಳುತ್ತದೆಯೆಂದು ದೂರುತ್ತಿದ್ದ. ಬಯ್ಯುತ್ತಿದ್ದ.

'ನನಗೊಂದು ಪತ್ರವನ್ನು ಕಳಿಸು.
ಮೇಲ ಗಾಡಿಯಲ್ಲಿ ನನಗೊಂದು ಪತ್ರನನ್ನು ಕಳಿಸು.
ಆ ಪತ್ರವನ್ನು ಬರ್ಮಿಂಘಾಂ ಸೆರೆಮನೆಯ ಅಧಿಕಾರಿಯು
ನೋಡಬೇಕೆಂದು ವಿಳಾಸವನ್ನು ಬರಿ.

ಮಿಸ್ ಬೊಬಿಟಳು ಅವರತ್ತ ಲಕ್ಷವನ್ನೇ ಕೊಡುತ್ತಿದ್ದಿಲ್ಲ. ಅವರ ಹಾಡುಗಳನ್ನೂ ಕೇಳುತ್ತಿದ್ದಿಲ್ಲ. ಅವಳು ಒಮ್ಮೆಯೂ ಬಾಗಿಲಿನ ಹೊರಗೆ ಮುಖವನ್ನು ಚಾಚಿ ನೋಡುತ್ತಿದ್ದಿಲ್ಲ. ಒಂದು ದಿನ ಮಿಸೆಸ್ ಸೊಯರಳು ಒಂದು ಬಟ್ಟಲು ತುಂಬ ಸಕ್ಕರೆಯನ್ನು ಎರವು ಒಯ್ಯಬ ಬಂದಿದ್ದಳು. ಆಗ ತನ್ನ ಹೊಸ ಬಾಡಿಗೆದಾರಳನ್ನು ಕುರಿತು ವಿಧ ವಿಧವಾಗಿ ಹೊಗಳಿದಳು. ಅವಳು ತನ್ನ ಹೊಳೆಯುವ ಪುಟ್ಟ ಕಣ್ಣುಗಳಿಂದ ಓರೆನೋಟವನ್ನು ಬೀರುತ್ತಾ ಉತ್ಸಾಹದಿಂದ ಎಲ್ಲವನ್ನೂ ವಿವರಿಸುತ್ತಿದ್ದಳು. "ಅವಳ ಗಂಡ ಶುದ್ಧ ವಕ್ರ ಸ್ವಭಾವದವ. ಹ-ಹ. ಅವಳ ಮಗಳೇ ಹೇಳುತ್ತಾಳೆ. ಸ್ವಲ್ಪವೂ ನಾಚಿಕೆಯಿಲ್ಲ. ಅವಳ ತಂದೆಯು ತುಂಬ ಪ್ರಿಯ ತಂದೆಯಾಗಿದ್ದನಂತೆ. ಟೆನಸ್ಸಿಯಲ್ಲೆಲ್ಲ ಪ್ರಸಿದ್ಧವಾದ ಶಾರೀರ ಸಂಪತ್ತುಳ್ಳ ಹಾಡುಗಾರನಾಗಿದ್ದನಂತೆ. ಆ ನಂತರ ನಾನು, 'ಮಗೂ ಎಲ್ಲಿರುವನು ನಿನ್ನ ಆ ಪ್ರಿಯ ತಂದೆ' ಎನ್ನಲು, ಅವಳು ತಡಮಾಡದೆ ಯಾವುದೋ ಒಂದು ಸುಧಾರಣಾಗ್ರಹದಲ್ಲಿರುವನೆಂದು ಉತ್ತರವಿತ್ತಳು. ಈಗ ಆತನಿಂದ ಯಾವ ವರ್ತಮಾನವೂ ಇಲ್ಲವಂತೆ. ಇದೆಲ್ಲವನ್ನೂ ಕೇಳಿ

ನಿಮಗೆ ಆಶ್ಚರ್ಯವೆನಿಸುತ್ತದೆಯೇ? ಹೆದರಿಕೆಯೇ? ಹ್ಞ ಹ್ಞ. ಅವಳ ತಾಯಿಯು ಪರದೇಶದವಳೆಂದು ನನಗೆ ಸಂಶಯ. ಅವಳ ಬಾಯಿಯಿಂದ ಒಂದು ಶಬ್ದವೂ ಹೊರಬರುವದಿಲ್ಲ. ಒಮ್ಮೊಮ್ಮೆ ಆವಳನ್ನು ಕುರಿತು ಜನ ಆಡಿಕೊಳ್ಳುವದನ್ನು ಅರಿಯದವಳಂತೆ ಇರುತ್ತಾಳೆ. ಇನ್ನೊಂದು ವಿಷಯ ನಿಮಗೆ ಗೊತ್ತಿರಲಿಕ್ಕಿಲ್ಲ. ಅವರು ಯಾವುದೊಂದು ಪದಾರ್ಥವನ್ನು ಬೇಯಿಸದೇ ತಿನ್ನುತ್ತಾರೆ. ಮೊಟ್ಟೆ, ಮೂಲಂಗಿ, ಗಜ್ಜರಿ— ಎಲ್ಲವನ್ನೂ ಹಸಿ ಹಸಿಯಾಗಿಯೇ ತಿನ್ನುತ್ತಾರೆ. ಕೇಳಿದರೆ, ಅದು ಆರೋಗ್ಯಕರವಂತೆ. ದೇಹಕ್ಕೆ ಪೌಷ್ಟಿಕವಂತೆ. ನೋಡಿದರೆ ಆ ಹುಡುಗಿ ಹಾಸಿಗೆ ಹಿಡಿದು ಮಲಗಿಯೇ ಇದ್ದಾಳೆ. ಕಳೆದ ಮಂಗಳವಾರದಿಂದ ಜ್ವರವಂತೆ." ಇತ್ಯಾದಿ.

ಅದೇ ದಿನ ಚಿಕ್ಕ ಏಲಳು ತನ್ನ ಗುಲಾಬಿ ಗಿಡಗಳಿಗೆ ನೀರು ಹಾಕಲು ಹೋಗಿದ್ದಳು. ನೋಡಿದರೆ ಹೂವುಗಳೆಲ್ಲ ಮಾಯವಾಗಿದ್ದವು. ಆ ಹೂವುಗಳನ್ನು ಮೊಬ್ಯಾಲದಲ್ಲಿ ಸೇರಿದ ಪ್ರದರ್ಶನಕ್ಕೆ ಒಯ್ಯಬೇಕೆಂದು ಯೋಚನೆ ಮಾಡಿದ್ದಳು. ಹೂವುಗಳು ಮಾಯವಾದುದನ್ನು ಕಂಡು ಚಿಕ್ಕಿಯು ಕಿಡಿಕಿಡಿಯಾದಳು. ಶೆರೀಫನಿಗೆ ಫೋನ್ ಮಾಡಿದಳು. "ಶೆರೀಫ, ದಯಮಾಡಿ ಬಂದು ಹೋಗಬೇಕು. ನನ್ನ ಗುಲಾಬಿ ಹೂವುಗಳನ್ನು ಯಾರೋ ಘಟಿಂಗರು ಕದ್ದೊಯ್ದಿದ್ದಾರೆ. ಈ ವಸಂತಕಾಲದ ಪ್ರಾರಂಭದಿಂದ ಜೀವದ ಗಣನೆಯಿಲ್ಲದೇ ಗಿಡಗಳಿಗೆ ನೀರು ಹಾಕುತ್ತಿದ್ದೆ. ಒಳ್ಳೇ ಜಾತಿಯ ಕ್ವೀನ ಎಸ್ ಎಂಬ ಹೆಸರಿನ ಗುಲಾಬಿ ಹೂವುಗಳು." ಇತ್ಯಾದಿ. ಇತ್ಯಾದಿ. ಶೆರೀಫನ ಮೋಟರ ಕಾರು ಬೀದಿಗೆ ಬಂದ ಕೂಡಲೇ ನಮ್ಮ ನೆರೆಮನೆಯವರೆಲ್ಲ ತಮ್ಮ ತಮ್ಮ ಅಂಗಳದಲ್ಲಿ ನಿಂತು ನೋಡತೊಡಗಿದರು. ಮಿಸೆಸ್ ಸೊಯರಳು ಲಗುಬಗೆಯಿಂದ ಓಡಿಬಂದು, "ಹಿಡಿಯಿರಿ, ಹಿಡಿಯಿರಿ. ಯಾರೂ ಸಿಗಲಿಲ್ಲವೇ? ಹೂವುಗಳನ್ನು ಕದ್ದವರು ಯಾರು?" ಎಂದು ಯಾರೂ ಸಿಗಲಿಲ್ಲವೆಂದು ನಿರಾಶೆಯಿಂದ ನುಡಿದಳು. ನಂತರ ತುಂಬ ವಿಚಾರಣೆ ನಡೆಯಿತು. ಆಗ ಮಿಸೆಸ್ ಸೊಯರಳು ಚಿಕ್ಕಿಯನ್ನು ಕುರಿತು ಅಂದಳು. "ಓಹೋ! ನಿಮ್ಮ ಬಿಲಿಬೋಬನೇ ಹೂವುಗಳನ್ನು ಕದ್ದು ಬೊಬಿಟಳ ಮನೆಯೆದುರಿಗೆ ಇಟ್ಟು ಹೋಗಿರುವನಂತೆ." ಚಿಕ್ಕ ಏಲಳು ಸುಮ್ಮನಾದಳು. ಅವಳು. ನೇರವಾಗಿ ಪೀಚ ಮರದ ಹತ್ತಿರ ಹೋಗಿ ಒಂದು ಟೊಂಗೆಯನ್ನು ಮುರಿದುಕೊಂಡು ಬಂದಳು. "ಬಿಲಿಬೋಬ,

ಬಿಲಿಬೋಬ " ಎಂದು ಬೀದಿಯಲ್ಲಿ ಹಿಂದೆ ಮುಂದೆ ಓಡಾಡಹತ್ತಿದಳು. ಅಲ್ಲಿ ಬಿಲಿಬೋಬನು ಸ್ಪೀಡಿಯ ಗ್ಯಾರೇಜಿನ ಬಳಿ ನಿಂತುಕೊಂಡಿದ್ದ. ಸ್ಪೀಡಿಯು ಕಾರನ್ನು ಗ್ಯಾರೇಜಿನ ಹೊರಗೆ ತೆಗೆಯುತ್ತಿದ್ದ. ಚಿಕ್ಕಿಯು ಬೋಬನ ತಲೆಗೂದಲನ್ನು ಹಿಡಿದು ದರದರನೆ ಎಳೆಯುತ್ತ, ಥಳಿಸುತ್ತ ಮನೆಯ ಕಡೆಗೆ ಎಳೆದು ತಂದಳು. ಆದರೆ ಬಿಲಿಬೋಬ ತನ್ನ ತಪ್ಪನ್ನು ಒಪ್ಪಿಕೊಳ್ಳಲಿಲ್ಲ. ಅಥವಾ ಬಾಯಿ ಬಿಡಲಿಲ್ಲ. ಸ್ವಲ್ಪ ಹೊತ್ತಿನ ನಂತರ ಚಿಕ್ಕಿಯೇ ಸೋತಳು. ಆತನು ಮನೆಯ ಹಿಂಭಾಗಕ್ಕೆ ನಡೆದು ಅಲ್ಲಿದ್ದ ಎತ್ತರವಾದ ಪೆಕಾನ ಮರವನ್ನೇರಿ ಕುಳಿತುಕೊಂಡ. ತಾನಿನ್ನು ಕೆಳಗೆ ಇಳಿಯುವದೇ ಇಲ್ಲವೆಂದು ಹಟದಿಂದ ಕೂಗಿ ಹೇಳಿದ. ಆಗ ಆತನ ತಂದೆಯು, " ಮಗೂ ರಾತ್ರಿಯ ಊಟದ ಹೊತ್ತಾಯಿತು. ಇಳಿದು ಬಾ ಮಗೂ. ನನಗೆ ನಿನ್ನಮೇಲೆ ಸಂತಾಪವಿಲ್ಲ. ಇಳಿದು ಬಾ. " ಎಂದು ಕಿಡಕಿಯ ಬಳಿ ನಿಂತುಕೊಂಡು ಬಹಳ ಪ್ರೀತಿಯಿಂದ ಕರೆದ. ಆದರೆ ಬಿಲಿಬೋಬನು ಮರದಿಂದ ಕೆಳಗೆ ಇಳಿಯಲೇ ಇಲ್ಲ. ಚಿಕ್ಕಿ ಏಲಳು ಹೋಗಿ ಮರಕ್ಕೆ ಒರಗಿಕೊಂಡು ನಿಂತಳು. ಅರುಣೋದಯದ ಪ್ರಕಾಶದಂತೆ ಮೃದುವಾದ ಧ್ವನಿಯಲ್ಲಿ ಬೇಡಿಕೊಂಡಳು. " ಮಗೂ ನನಗೆ ತುಂಬ ದುಃಖ ವಾಗಿದೆ. ಬಹಳ ರುಚಿಕರವಾದ ಅಡುಗೆ ಮಾಡಿದ್ದೇನೆ. " ಎಂದಳು. ಬಿಲಿ ಬೋಬನು, " ಹೊರಟು ಹೋಗು ನಿಲ್ಲಬೇಡ. ನಿನ್ನ ಊಟವೇ ಬೇಡ. ನಿನ್ನನ್ನು ಕಂಡರೆ ನನ್ನ ಮೈಯೆಲ್ಲ ಉರಿಯುತ್ತದೆ " ಎಂದನು. " ಮಗೂ ತಾಯಿಯನ್ನು ಹಾಗೆ ಬೈಯುತ್ತಾರೆಯೇ ? " ಎಂದು ತಂದೆಯು ಕೇಳಿದಾಗ ಚಿಕ್ಕಿಗೆ ಅಳು ವುದನ್ನು ತಡೆಯುವುದಕ್ಕಾಗಲಿಲ್ಲ. " ಮಗೂ, ನಿನ್ನಮೇಲೆ ನನಗೆ ಸಿಟ್ಟಿಲ್ಲ. ನಿನ್ನಮೇಲೆ ನನಗೆ ಮಮತೆ ಇಲ್ಲದಿದ್ದರೆ ಹಾಗೆ ಥಳಿಸುವ ಗೊಡವೆಗೆ ಹೋಗು ತ್ತಿದ್ದನೇ. " ಎಂದಳು. ಪೆಕಾನ ಎಲೆಗಳು ಸರಬರ ಸಪ್ಪಳ ಮಾಡುತ್ತಿದ್ದವು. ತುಸು ಹೊತ್ತಿನ ನಂತರ ಬಿಲಿಬೋಬನು ನಿಧಾನವಾಗಿ ಕೆಳಗಿಳಿದು ಬಂದನು. ಚಿಕ್ಕಿ ಏಲಳು ಅವನ ತಲೆಗೂದಲನ್ನು ನೇವರಿಸಿ ಅವನನ್ನು ಅಪ್ಪಿಕೊಂಡಳು. ಬೋಬನು " ಅಮ್ಮಾ, ಅಮ್ಮಾ " ಎಂದನು.

ಊಟವಾದ ನಂತರ ಬಿಲಿಬೋಬನು ನನ್ನ ಹಾಸಿಗೆಯ ಬಳಿ ಬಂದು ಬಿದ್ದುಕೊಂಡನು. ಅವನ ಮೈಯಿಂದ ಹುಡುಗರ ಮೈಯಿಂದ ಹೊರಡುವ ಹುಳಿಸವಿ ವಾಸನೆ ಬರುತ್ತಿತ್ತು. ಅವನು ತುಂಬ ನೊಂದುಕೊಂಡಿದ್ದ. ನನಗೆ

ಅವನನ್ನು ಕಂಡು ಬಹಳ ಅನುಕಂಪ ಹುಟ್ಟಿತು. ಆತನು, “ ಬೇನೆಬಿದ್ದವರ ಮನೆಗೆ ಹೂವುಗಳನ್ನು ಕಳಿಸುವದು ನೆರೆಮನೆಯರ ಕರ್ತವ್ಯವಲ್ಲವೇ ? ” ಎಂದು ಕೇಳಿದ. ಆತನ ವಾದವು ನ್ಯಾಯವಾಗಿತ್ತು. ಆತನು ದುಃಖಾತಿಶಯದಿಂದ ಕಣ್ಣುಗಳನ್ನು ಮುಚ್ಚಿಕೊಂಡಿದ್ದ. ಅದೇ ಹೊತ್ತಿಗೆ ನಾವು ವಿಕ್ಟೋಲಾದಿಂದ ಹೊರಹೊಮ್ಮುವ ಮಧುರ ಸಂಗೀತವನ್ನು ಆಲಿಸಿದೆವು. ಕಿಡಕಿಯೊಳಗಿಂದ ಸಂಗೀತಕ್ಕಿಂತ ಮಧುರವೂ ನಯವೂ ಆದ ರಾತ್ರಿ ಪತಂಗವೊಂದು ಒಳಗೆ ಹಾರಾಡತೊಡಗಿತ್ತು. ಮಿಸ್ ಬೊಬಿಟಳು ಕುಣಿಯುತ್ತಿರುವಳೋ ಹಾಡುತ್ತಿರುವಳೋ ಎಂಬ. ಖಚಿತವಾಗಿ ಹೇಳುವದು ಶಕ್ಯವಿದ್ದಿಲ್ಲ. ತಲ್ಲಣಗೊಂಡಿದ್ದ ಬಿಲಿಬೋಬನು ಒಮ್ಮಿಂದೊಮ್ಮೆ ಉತ್ಸಾಹಿತನಾದ. ಆತನ ಮುಖವು ತಿಳಿಯಾಯಿತು. ಕಣ್ಣುಗಳು ಅರಳಿದವು. “ಎಂತಹ ಚುರುಕು ಹುಡುಗಿ. ಅಂತಹ ಹುಡುಗಿಯನ್ನು ನಾನು ನೋಡೇ ಇರಲಿಲ್ಲ. ನನ್ನನ್ನು ಥಳಿಸಿದರೇನು ನಾನು ಅಂಜುವವನಲ್ಲ. ಚೀನಾ ದೇಶದೊಳಗಿನ ಎಲ್ಲ ಗುಲಾಬಿ ಹೂವುಗಳನ್ನು ಅವಳಿಗಾಗಿ ನಾನು ಕೊಯ್ದು ತರುವೆನು. ” ಎಂದನು.

ಪ್ರೀಚರನೂ ಚೀನಾದೇಶದ ಹೂತೋಟಗಳನ್ನು ಸೂರೆಗೊಳ್ಳಲು ಸಿದ್ಧನಾಗಿದ್ದ. ಬಿಲಿಬೋಬನಂತೆ ಆತನೂ ಮಿಸ್ ಬೊಬಿಟಳಿಗೆ ಮನಸೋತಿದ್ದ. ಆದರೆ ಅವಳು ಆ ಹೂವುಗಳನ್ನು ಒಮ್ಮೆಯೂ ಕಣ್ಣೆತ್ತಿ ನೋಡಲಿಲ್ಲ. ಕೈಯಿಂದ ಎತ್ತಿಕೊಳ್ಳುವುದಂತೂ ದೂರ ಉಳಿಯಿತು. ಹೂವುಗಳ ಕಾಣಿಕೆಗಾಗಿ ಉಪಕಾರ ಸ್ಮರಿಸುವ ಒಂದು ಪತ್ರವನ್ನು ಮಾತ್ರ ಚಿಕ್ಕಿ ಏಲಳಿಗೆ ಕಳಿಸಿದ್ದಳು. ಸದಾಕಾಲವೂ ಅವಳು ತನ್ನ ಮನೆಯ ಪೌಳಿಯಲ್ಲಿ ಕುಳಿತಿರುತ್ತಿದ್ದಳು. ವಿಶೇಷವಾಗಿ ವಾದ್ಯವನ್ನು ಬಾರಿಸುವ ಉಡುಪಿನಲ್ಲಿರುವಳು. ಕಸೂತಿ ಕೆಲಸದಲ್ಲಿ ತೊಡಗಿರುತ್ತಿದ್ದಳು. ಅಥವಾ ತನ್ನ ಕೂದಲುಗಳನ್ನು ಬಾಚಿಕೊಳ್ಳುತ್ತಿರುವಳು. ಇನ್ನೊಮ್ಮೆ ವೆಬ್‌ಸ್ಟರ ಶಬ್ದಕೋಶವನ್ನು ಓದುತ್ತಿರುವಳು........ಎಷ್ಟು ಬೇಕೋ ಅಷ್ಟೇ ಮಾತುಗಳು. ಪ್ರಶ್ನೆಗೆ ತಕ್ಕ ಉತ್ತರ. ಯಾರೇ ಆಗಲಿ “ಗುಡ್ ಡೇ” ಎಂದರೆ “ ಗುಡ್ ಡೇ” ಎಂದು ಅವಳ ಪ್ರತ್ಯುತ್ತರ. ಅದರೂ ಸ್ನೇಹಪೂರ್ಣವಾದ ಭಾವ. ಹುಡುಗರಿಗೆ ಮಾತ್ರ ಅವಳ ಹತ್ತಿರ ಹೋಗಿ ಅವಳನ್ನು ಮಾತನಾಡಿಸುವ ಎದೆಗಾರಿಕೆಯಿದ್ದಿಲ್ಲ. ಬಹಳ ಸಲ ಆ ಹುಡುಗರು ಅವಳನ್ನೊಮ್ಮೆ ನೋಡಬೇಕೆಂಬ ಆಸೆಯಿಂದ ಕಳ್ಳ ಬೆಕ್ಕಿ

ನಂತೆ ಅತ್ತಿಂದಿತ್ತ ಸುಳಿದಾಡುತ್ತಿರುವರು. ಆಗ ಅವಳು ಅವರನ್ನು ನೋಡುತ್ತಿದ್ದಳು. ಅವಳ ಲಕ್ಷ್ಯವನ್ನು ಸೆಳೆಯಲೆಂದು ಹುಡುಗರು ಕುಸ್ತಿಯಾಡುತ್ತಿದ್ದರು. ಟಾರ್ಜನ್ ಆಟವನ್ನು, ಸ್ಕ್ಯಾಕಲ್ ಚಮತ್ಕಾರವನ್ನೂ ಮಾಡುತ್ತಿದ್ದರು. ಕೊನೆಗೆ ಹುಚ್ಚು ಹುಚ್ಚಾಗಿ ಹಾಡುತ್ತಿದ್ದರು. ಅದೊಂದು ಬೇಸರದ ವಿಷಯ. ಪಟ್ಟಣದ ಅನೇಕ ಹುಡುಗಿಯರು ತಾಸಿಗೊಮ್ಮೆ ಇಲ್ಲವೇ ಎರಡು ಮೂರು ಸಲ ಮಿಸೆಸ್ ಸೊಯರಳ ಮನೆಯ ಸಮೀಪ ಸುಳಿದಾಡುತ್ತಿದ್ದರು. ಅವರೆಂದರೆ ಕೋರಾ, ಮೆಕಾಲ, ಮೇರಿ, ಮಾರ್ಗಿಜೋನ್ಸ್, ಜೇನಿಸ್, ಆಕರ್ಮನ್ ಮೊದಲಾದವರು. ಮಿಸ್ ಬೊಬಿಟಳು ಆ ಹುಡುಗಿಯರಲ್ಲೂ ಆಸಕ್ತಿ ತೋರಿಸಲಿಲ್ಲ. ಕೋರಾ ಮತ್ತು ಬಿಲಿಬೋಬರ ಗೆಳೆತನಕ್ಕೆ ವ್ಯತ್ಯಯ ಬಂದಿತು. ಜೇನಿಸ ಮತ್ತು ಪ್ರೀಚರನ ಸಂಬಂಧವೂ ಒಡೆಯಿತು. ಜೇನಿಸಳು ಲೇಸಿನ ಅಂಚುಗಳಿದ್ದ ಒಂದು ಕಾಗದದ ಮೇಲೆ ಪ್ರೀಚರನಿಗೆ ಒಂದು ಎಂದರೆ ಕೊನೆಯ ಪತ್ರವನ್ನು ಬರೆದಿದ್ದಳು. ಅವರಲ್ಲಿ ಪ್ರೀಚರನು ಜಗತ್ತಿನಲ್ಲೆಲ್ಲ ಪರಮ ವಂಚಕನೆಂದೂ ಇನ್ನು ತಮ್ಮಿಬ್ಬರ ಪ್ರೀತಿಯು ಮುರಿದು ಹೋಯಿತೆಂದೂ ಪ್ರೀಚರನು ತನಗೆ ಗೆಳೆತನದ ಕುರುಹಾಗಿ ಕೊಟ್ಟ ಇಣಚಿಯನ್ನು ಮರಳಿ ಪಡೆಯಬಹುದೆಂದೂ ಬರೆದಿದ್ದಳು. ಆ ನಂತರ ಒಂದು ದಿನ ಅವಳು ನಮ್ಮ ಮನೆಯ ಮುಂದಿನಿಂದ ಹಾದು ಹೋಗುತ್ತಿದ್ದಾಗ ದಾರಿಯಲ್ಲಿ ಪ್ರೀಚರನು ಅವಳನ್ನು ಸಂಧಿಸಿ ಆ ಇಣಚಿಯನ್ನು ಅವಳೇ ಇರಿಸಿಕೊಳ್ಳಬಹುದೆಂದು ಹೇಳಿದನು. ಆದರೆ ಅವಳು ಅವನಿಗೆ ಉತ್ತರವನ್ನು ಕೊಡದೇ ಕೂಗುತ್ತ ಓಡಿಹೋದಳು. ಹಾಗೇಕೆ ಮಾಡಿದಳೆಂದು ಪ್ರೀಚರನಿಗೆ ಆಗ ಹೊಳೆಯಲಿಲ್ಲ.

ಅನಂತರ ಒಂದು ದಿನ ಆ ಹುಡುಗರು ಇನ್ನೂ ಹುಚ್ಚು ಹುಚ್ಚಾಗಿ ವರ್ತಿಸತೊಡಗಿದರು. ಬಿಲಿಬೋಬನು ತನ್ನ ತಂದೆಯು ಮಹಾಯುದ್ಧದ ಕಾಲದಲ್ಲಿ ಉಪಯೋಗಿಸುತ್ತಿದ್ದ ಖಾಕೀ ಉಡುಪನ್ನು ಧರಿಸಿ ನಿಧಾನವಾಗಿ ಮುದುಕನಂತೆ ಬಗ್ಗಿ ನಡೆಯುತ್ತಿದ್ದ. ಪ್ರೀಚರ ಅಂಗಿಯನ್ನು ತೆಗೆದಿಟ್ಟು ಎದೆಯಮೇಲೆ ಚಿಕ್ಕ ಏಲಳ ತುಟಿ ಬಣ್ಣದಿಂದ ನಗ್ನ ಸ್ತ್ರೀಯೊಬ್ಬಳ ಚಿತ್ರವನ್ನು ಬಿಡಿಸಿಕೊಂಡಿದ್ದ. ಅವರು ಶುದ್ಧ ಹುಚ್ಚರಂತೆ ಕಾಣುತ್ತಿದ್ದರು. ಉಯ್ಯಾಲೆಯ ಮೇಲೆ ಒರಗಿಕೊಂಡಿದ್ದ ಮಿಸ್ ಬೊಬಿಟಳು ಅವರನ್ನು ಒಮ್ಮೆ ನೋಡಿದಳು. ಒಮ್ಮೆ ಆಕಳಿಸಿದಳು ಅಷ್ಟೇ. ಆಗ ಮಧ್ಯಾಹ್ನ. ಬೀದಿಯೆಲ್ಲ ನಿರ್ಜನ

ವಾಗಿತ್ತು. ಒಬ್ಬಳೇ ಒಬ್ಬ ಸ್ಥೂಲದೇಹದ ಹುಡುಗಿಯು ಮುಳ್ಳುಹಣ್ಣುಗಳ ಪಾತ್ರೆಯನ್ನು ಹಿಡಿದುಕೊಂಡು ಹಾಡುತ್ತ ಬರುತ್ತಿದ್ದಳು. ಹುಡುಗರೆಲ್ಲರೂ ಅವಳನ್ನು ಅಡ್ಡಗಟ್ಟಿ ನಿಂತರು. ಸೊಳ್ಳೆಗಳ ಗುಪ್ಪಿನಂತೆ ಅವಳನ್ನು ಪೀಡಿಸ ಹತ್ತಿದರು. ಸುಂಕವನ್ನು ಕೊಟ್ಟೇ ಮುಂದಕ್ಕೆ ಹೋಗಬೇಕೆಂದರು. ಪ್ರೀಚರನು ಉಗ್ರಾಣದ ಹತ್ತಿರ ದೊಡ್ಡದೊಂದು ಪಾರ್ಟಿಇದೆಯೆಂದೂ ಸುಂಕ ಕೊಡದೇ ಗತ್ಯಂತರವಿಲ್ಲವೆಂದೂ ಹಲ್ಲು ಕಡಿಯುತ್ತ ನುಡಿದನು. ಆ ಹುಡುಗಿಯು (ನಿಗ್ರೋ) ಸಿಡುಕಿನಿಂದ ಕತ್ತು ಕೊಂಕಿಸಿ ತನಗೆ ಉಗ್ರಾಣದ ಸುಂಕದ ಚಿಂತೆಯಿಲ್ಲವೆಂದಳು. ಆಗ ಬಿಲಿಜೋಬನು ಅವಳ ಹಣ್ಣಿನ ಪಾತ್ರೆಯನ್ನು ಮುಗುಚಿ ಹಾಕಿದ. ಅವಳು ನಿರಾಶೆಯಿಂದ ಹಂದಿಯಂತೆ ಕೂಗುತ್ತ ತನ್ನನ್ನು ಉಳಿಸಿಕೊಳ್ಳುವ ವಿಫಲಯತ್ನವನ್ನು ಮಾಡಲು ಬಗ್ಗಿದಳು. ಆಗ ಕ್ರೂರನಾದ ಪ್ರೀಚರನು ಅವಳ ಬೆನ್ನಿಗೆ ಬಲವಾದ ಏಟು ಕೊಟ್ಟನು. ಹಣ್ಣುಗಳು ಹರಡಿಕೊಂಡಿದ್ದ ಆ ಧೂಳಿಯಲ್ಲಿ ಅವಳು ಕುಸಿದಳು. ಆಗ ಮಿಸ್ ಬೊಬಿಟಳು ಧಾವಿಸಿ ಮಾರ್ಗಕ್ಕೆ ಬಂದಳು. ಅವಳ ಬೆರಳುಗಳು ಸಿಟ್ಟಿನಿಂದ ಕಂಪಿಸುತ್ತಿದ್ದವು ಗದ್ದಲವನ್ನು ನಿಲ್ಲಿಸಲು ಅವಳು ಚಪ್ಪಾಳೆಯನ್ನು ತಟ್ಟಿದಳು. ಕಾಲುಗಳನ್ನು ನೆಲಕ್ಕೆ ಅಪ್ಪಳಿಸಿದಳು. "ಸ್ತ್ರೀಯರ ಮಾನರಕ್ಷಣೆಗಾಗಿ ಸಹಸ್ರಹಸ್ತರ ಸೃಷ್ಟಿಯಾಗುತ್ತದಂತೆ. ನ್ಯೂಯಾರ್ಕ, ಮೆಫಿಸ್, ಹಾಲಿವುಡ್ ಇತ್ಯಾದಿ ನಗರಗಳಲ್ಲಿ ಹುಡುಗರು ನಿಮ್ಮಂತೆ ವರ್ತಿಸುವರೆಂದು ಕೇಳಿದ್ದೀರಾ?" ಅವಳು ಗದರಿಸಿದಳು. ಹುಡುಗರು ಹಿಮ್ಮೆಟ್ಟಿದರು. ಅವರ ಕೈಗಳು ಕಿಸೆಯಲ್ಲಿ ಸೇರಿದವು. ಅವಳು ಆ ನಿಗ್ರೋ ಹುಡುಗಿಯ ಕೈ ಹಿಡಿದು ಎಬ್ಬಿಸಿದಳು. ಅವಳ ಮೈಗೆ ಹತ್ತಿಕೊಂಡಿದ್ದ ಧೂಳನ್ನು ಕೊಡವಿದಳು. ಕಣ್ಣುಗಳನ್ನು ಒರೆಸಿದಳು. ಮೂಗನ್ನು ಒರಸಲು ತನ್ನ ಕರವಸ್ತ್ರವನ್ನು ಕೊಟ್ಟಳು. "ಇದೆಂಥ ಕಾಲವಪ್ಪಾ! ಒಬ್ಬ ಹೆಂಗಸು ಹಗಲಿನಲ್ಲಿಯೂ ರಸ್ತೆಯ ಮೇಲೆ ನಿರಾತಂಕವಾಗಿ ಓಡಾಡುವದು ಶಕ್ಯವಿಲ್ಲವಲ್ಲಾ!" ಎಂದಳು. ಅನಂತರ ಅವರಿಬ್ಬರೂ ಹೋಗಿ ಮಿಸೆಸ್ ಸೊಯರಳ ಪೌಳಿಯಲ್ಲಿ ಕುಳಿತುಕೊಂಡರು. ಒಂದು ವರ್ಷದ ವರೆಗೆ ಮಿಸ್ ಬೊಬಿಟ್ ಮತ್ತು ಆ ಆನೆಮರಿಯಂಥ ನಿಗ್ರೋ ಹುಡುಗಿ ಮಿಸ್ ರೊಸಾಲ್ಬಾಕ್ಯಾಟ ಅನ್ಯೋನ್ಯವಾಗಿದ್ದರು. ರೊಸಾಲ್ಬಾಳಂಥ ನಿಗ್ರೋ ಹುಡುಗಿಯು ತನ್ನ ಕೋಣೆಯೊಂದರಲ್ಲಿ ಸಲುಗೆಯಿಂದ ಜೀವಿ

ಸುತ್ತಿರುವದು ಸೊಯರಳಿಗೆ ಜಿಗುಪ್ಸೆಯಾಗಿತ್ತು. ಆವರೂ ಮಾತನಾಡು ವಂತಿಲ್ಲ. ಮಿಸ್ ಬೊಬಿಟಳ ಕೆಲಸಗಳಲ್ಲಿ ಏನೋ ಮಾಯೆ ಇರುತ್ತಿತ್ತು. ಅವಳು ಪ್ರತಿಯೊಂದು ಕೆಲಸವನ್ನೂ ಗಂಭೀರವಾಗಿ ಮತ್ತು ಪರಿಪೂರ್ಣವಾಗಿ ಮಾಡಿ ಮುಗಿಸುತ್ತಿದ್ದಳು. ಅವಳ ಕೆಲಸಗಳನ್ನೂ ವಿಚಾರಗಳನ್ನೂ ಹೌದೆಂದು ಒಪ್ಪಿಕೊಳ್ಳದೇ ವಿಧಿಯಿರಲಿಲ್ಲ. ಮೊಟ್ಟ ಮೊದಲು ವ್ಯಾಪಾರಿಗಳು "ಮಿಸ್ ಬೊಬಿಟ್" ಎನ್ನುತ್ತ ಹುಸಿನಗು ನಗುತ್ತಿದ್ದರು. ಆದರೆ ಕ್ರಮೇಣ ಎಲ್ಲರೂ "ಮಿಸ್ ಬೊಬಿಟ್" ಎಂದೇ ಸಂಬೋಧಿಸತೊಡಗಿದರು. ಅವಳು ತನ್ನ ಕೊಡೆಯನ್ನು ಅತ್ತಿಂದಿತ್ತ ತಿರುಗಿಸುತ್ತ ಓಡಾಡುತ್ತಿದ್ದಾಗ ಜನರು ಆದರ ದಿಂದಲೂ ಗಾಂಭೀರ್ಯದಿಂದಲೂ ಕಾಣುತ್ತಿದ್ದರು. ಮಿಸ್ ಬೊಬಿಟಳು ರೊಸಾಲ್ಬಾಳನ್ನು ತನ್ನ ತಂಗಿಯೆಂದು ಕರೆಯುತ್ತಿದ್ದಳು. ಅವಳು ಆ ನಿಗ್ರೋ ಹುಡುಗಿಯನ್ನು ತನ್ನ ತಂಗಿಯೆಂದು ಕರೆಯುತ್ತಿದ್ದಾಗ ನಾವು ಆಲಿಸುತ್ತಿ ದ್ದೆವು; ಆದರೆ ನಗುತ್ತಿದ್ದಿಲ್ಲ. ಅವಳ ಅನೇಕ ವಿಲಕ್ಷಣ ಆಲೋಚನೆಗಳು ಸಹ ಜನಿಸುತ್ತಿದ್ದುವು. ಸಹೋದರಿಯಾದ ರೊಸಾಲ್ಬಾ ಮತ್ತು ಮಿಸ್ ಬೊಬಿಟಳ ನಾಯಿಗಳನ್ನು ಕುರಿತಾದ ವರ್ತನೆಯು ಮಾತ್ರ ತುಂಬಾ ವಿಲಕ್ಷಣವಾಗಿತ್ತು. ನಮ್ಮೂರಿನಲ್ಲಿ ಟೇರಿಯರ್, ಬ್ಲಡ್‌ಹೌಂಡ ಇತ್ಯಾದಿ ಹಲವಾರು ಜಾತಿಯ ನಾಯಿಗಳಿವೆ. ಅವೆಲ್ಲ ಉರಿಯುವ ಮಧ್ಯಾಹ್ನದಲ್ಲಿ ಗುಂಪುಕಟ್ಟಿಕೊಂಡು ಮಾರ್ಗದಲ್ಲೆಲ್ಲ ಅಲೆದಾಡುತ್ತಿರುತ್ತವೆ. ರಾತ್ರಿ ಚಂದ್ರನ ಬೆಳಕಿನಲ್ಲಿ ಅವುಗಳ ಬೊಗಳುವಿಕೆಯು ಹೆಚ್ಚಾಗುತ್ತದೆ. ಯಾವಾಗಲೂ ಒಂದು ಗುಂಪು ಮಿಸ್ ಬೊಬಿಟಳ ಕಿಟಕಿಯ ಕೆಳಗೇ ಮಲಗಿಕೊಳ್ಳುತ್ತವೆ. ರಾತ್ರಿಯೆಲ್ಲ ಅವುಗಳ ಗದ್ದಲವೋ ಗದ್ದಲ. ಬೊಬಿಟಳಂತೂ ಲಘುನಿದ್ರೆಯವಳು. ಮಿಸ್ ಬೊಬಿ ಟಳು ಶೆರೀಫನ ಹತ್ತಿರ ದೂರು ಒಯ್ದಳು. ಅದರಿಂದೇನೂ ಪರಿಣಾಮವಾಗ ಲಿಲ್ಲ. ಸಹೋದರಿ ರೊಸಾಲ್ಬಾ ಹೇಳಿದಂತೆ ಅವು ನಾಯಿಗಳಲ್ಲವೆಂದೂ ಪಿಶಾ ಚಿಗಳೆಂದೂ ಮಿಸ್ ಬೊಬಿಟಳು ನಂಬಿದ್ದಳು. ಶೆರೀಫನು ಯಾವ ಕ್ರಮ ವನ್ನೂ ಕೈಕೊಳ್ಳಲಿಲ್ಲವೆಂದು ಒಂದು ದಿನ ಸಹೋದರಿ ರೊಸಾಲ್ಬಾಳನ್ನು ಜತೆ ಯಲ್ಲಿ ಕರೆದುಕೊಂಡು ಪಟ್ಟಣದೊಳಗೆ ಹೊರಟು ಬೀದಿ ಬೀದಿಗಳಲ್ಲಿ ಸುತ್ತಾ ಡತೊಡಗಿದಳು. ರೊಸಾಲ್ಬಾಳ ಕೈಯಲ್ಲಿ ಕಲ್ಲುಗಳು ತುಂಬಿದ ಒಂದು ಹೂವಿನ ಬುಟ್ಟಿಯಿದ್ದಿತ್ತು. ಅವರು, ಎದುರು ನಾಯಿಯನ್ನು ಕಂಡೊಡನೆಯೇ ನಿಲ್ಲು

ತ್ತಿದ್ದರು. ಆಗ ಮಿಸ್ ಜೊಬಿಟ್ ಸೂಕ್ಷ್ಮವಾಗಿ ನಿರೀಕ್ಷಿಸುವಳು. ಅವಳು ತಲೆಯಲ್ಲಾಡಿಸಿದರೆ ಇಬ್ಬರೂ ಮುಂದೆ ಸಾಗುವರು. ತುಸು ಮುಂದೆ ಹೋಗಿ ಇನ್ನೊಂದು ನಾಯಿಯನ್ನು ಕಂಡು ಜೊಬಿಟಳು "ಅದೋ, ಅವುಗಳ ಪೈಕಿ ಪಿಶಾಚಿ ಇದೇ." ಎನ್ನುತ್ತಿದ್ದಳು. ಸೋದರಿ ರೊಸಾಲ್ಬಾ ಗುರಿಯಿಟ್ಟು ನಾಯಿಯ ಹಣೆಗೆ ಕಲ್ಲೆಸೆಯುತ್ತಿದ್ದಳು.

ಇನ್ನೊಂದು ವಿಲಕ್ಷಣ ವಿಷಯವೆಂದರೆ ಮಿಸ್ಟರ ಹೆಂಡರ್ಸನ್ನನಿಗೆ ಸಂಬಂಧಿಸಿದ್ದು. ಆತನೂ ಮಿಸೆಸ್ ಸೊಯರಳ ಮನೆಯ ಬಾಡಿಗೆದಾರ. ಓಂದಿನ ಕೋಣೆಯೊಂದರಲ್ಲಿ ವಾಸಮಾಡುತ್ತಿದ್ದ. ಅನೇಕ ವೃದ್ಧರಂತೆ ಆತನಿಗೆ ಒಂದು ಪ್ರಬಲವಾದ ಪೀಡೆಯಿದ್ದಿತ್ತು. ಇದಲ್ಲದೇ ಆತನು ಮಿತಿಮೀರಿದ ಕುಡುಕ, ಒಮ್ಮೊಮ್ಮೆ ಹೊಟ್ಟೆ ತುಂಬ ಕುಡಿದು ಒಂದು ವಾರದ ವರೆಗಾದರೂ ಮತ್ತನಾಗಿ ಬಿದ್ದುಕೊಂಡಿರುತ್ತಿದ್ದ. ಆತನ ಕೋಣೆಯು ಮಿಸ್ ಜೊಬಿಟಳ ಕೋಣೆಗೆ ಹೊಂದಿಕೊಂಡಿತ್ತು. ಮಿಸ್ ಜೊಬಿಟ ಅಥವಾ ಸಹೋದರಿ ರೊಸಾಲ್ಬಾ ತಮ್ಮ ಕೋಣೆಯಲ್ಲಿ ಓಡಾಡುತ್ತಿರುವ ಸುಳಿವು ಕಂಡರೆ ಸಾಕು. ತನ್ನ ಪಾಳಿಗೆಯ ಮೆಟ್ಟಿಲುಗಳನ್ನು ಬಲವಾಗಿ ಮೆಟ್ಟುತ್ತ, 'ಮಿಸೆಸ್ ಸೊಯರ, ಮಿಸೆಸ್ ಸೊಯರ, ನಮ್ಮ ಕೋಣೆಯಲ್ಲಿ ಸೊಳ್ಳೆಗಳು ಕೋಲಾಹಲ ಮಾಡುತ್ತವೆ. ನಾನು ತಂದಿಟ್ಟ ಟೋಯಲೆಟ್ ಪೇಪರುಗಳೆಲ್ಲ ಮಾಯವಾಗುತ್ತಿವೆ. ಈಗಾಗಲೇ ಹದಿನೈದು ಸೆಂಟು ಬೆಲೆಬಾಳುವ ಕಾಗದಗಳನ್ನು ಕದ್ದೊಯ್ದಿವೆ." ಎಂದು ಮುಂತಾಗಿ ಒದರಿಕೊಳ್ಳುತ್ತಿದ್ದ. ಒಂದು ದಿನ ಇಬ್ಬರೂ ಹುಡುಗಿಯರು ಒಂದು ಮರದ ಕೆಳಗೆ ಕುಳಿತಿದ್ದರು. ನೈಟಸೂಟನ್ನು ಹಾಕಿಕೊಂಡು ಹ್ಯಾಂಡರ್ಸನ್ನನು ಅವರ ಕಡೆಗೆ ಅಟ್ಟಿಸಿಕೊಂಡು ಬಂದವನಂತೆ ಧಾವಿಸಿಬಂದ. ಆತನು, "ನನ್ನ ಟಾಯಲೆಟ್ ಪೇಪರುಗಳನ್ನು ಕದಿಯುತ್ತೀರಾ? ಸೊಳ್ಳೆಗಳು! ನಿಮಗೆ ತೋರಿಸುತ್ತೇನೆ.......ಯಾರಾದರೂ ಬಂದು ನನ್ನನ್ನು ಉಳಿಸಿ. ಈ ಸೊಳ್ಳೆಗಳು ಅಂದರೆ ಈ ಹೆಣ್ಣುನಾಯಿಗಳು ಊರಿನಲ್ಲಿದ್ದ ಎಲ್ಲ ಹಾಳೆಗಳನ್ನೂ ನುಂಗಿಬಿಟ್ಟಾವು." ಎಂದು ಕಿರುಚಿಕೊಂಡ. ಎಲ್ಲಿಂದಲೋ ಬಂದ ಬಿಲಿಬಾಬ ಮತ್ತು ಪ್ರೀಚರ ಅವನನ್ನು ಹಿಡಿದುಕೊಂಡರು. ಅಲ್ಲಿ ಕೆಲವು ಹಿರಿಯರೂ ಬಂದು ತಲ್ಪಿದರು. ಅವರು ಅವನನ್ನು ಬಳ್ಳಿಯಿಂದ ಬಿಗಿಯತೊಡಗಿದರು. ಮಿಸ್ ಜೊಬಿಟ ಬಹಳ ಶಾಂತಳಾಗಿ ಈ ನಾಟಕವನ್ನು ನೋಡು

ತ್ತಿದ್ದಳು. ಅವಳು ತನ್ನ ಸ್ಥಳದಿಂದ ಎದ್ದು ಬಂದು, "ನಿನಗೆ ಸರಿಯಾಗಿ ಗಂಟು ಹಾಕುವದಕ್ಕೆ ಬರುವದಿಲ್ಲ." ಎನ್ನುತ್ತ ಎಂಡರಸನ್ನನನ್ನು ಗಟ್ಟಿಯಾಗಿ ಬಿಗಿದಳು. ಅವಳ ಬಿಗಿತಕ್ಕೆ ಅವನ ಕೈಕಾಲುಗಳಲ್ಲಿ ರಕ್ತಸಂಚಾರವು ತಗ್ಗಿ ಅವನಿಗೆ ಒಂದು ತಿಂಗಳ ವರೆಗೆ ಸುಖವಾಗಿ ಆಡ್ಡಾಡಲಿಕ್ಕೆ ಸಾಧ್ಯವಾಗಲಿಲ್ಲ.

ಆ ಘಟನೆಯಾದ ನಂತರ ಒಂದು ದಿನ ಮಿಸ್ ಬಾಬಿಟಳು ನಮ್ಮ ಮನೆಗೆ ಬಂದಳು. ಅಂದು ಭಾನುವಾರ. ನಾನು ಒಂಟಿಯಾಗಿದ್ದೆನು. ಮನೆಯಲ್ಲಿ ಉಳಿದವರೆಲ್ಲ ಚರ್ಚಿಗೆ ಹೋಗಿದ್ದರು. ಅವಳು ಎದೆಯ ಮೇಲೆ ಕೈಗಳನ್ನು ಕಟ್ಟಿಕೊಂಡು ಮುಂದುಗಡೆ ತುಸು ತೂಗುತ್ತ ನಡೆದು ಬಂದಿದ್ದಳು. ಅವಳು ಬಂದವಳೇ "ಮಿಸ್ಟರ ಸಿ. ನನಗೆ ಚರ್ಚಿನ ವಾಸನೆಯೆಂದರೆ ಜುಗುಪ್ಸೆ. ಆದರೆ ನನ್ನನ್ನು ನಾಸ್ತಿಕಳೆಂದು ತಿಳಿಯಬಾರದಾಗಿ ಪ್ರಾರ್ಥನೆ. ನನ್ನ ಅನುಭವದಂತೆ ಈ ಲೋಕದಲ್ಲಿ ದೇವರೂ ಇದ್ದಾನೆ; ಸೈತಾನನೂ ಇದ್ದಾನೆ. ಸೈತಾನನನ್ನು ಮೂರ್ಖನೆಂದೂ ಕ್ರೂರನೆಂದೂ ಶಪಿಸಿದರೆ ಅಥವಾ ನಿಂದಿಸಿದರೆ ಆತನನ್ನು ಸುಧಾರಿಸುವದು ಶಕ್ಯವಿಲ್ಲ. ದೇವರನ್ನು ಪ್ರೀತಿಸುವಂತೆ ಸೈತಾನನ್ನೂ ಪ್ರೀತಿಸೋಣ. ಆತನೂ ಮಹಾ ಶಕ್ತಿಶಾಲಿ. ನಿಮಗೆ ಆತನಲ್ಲಿ ನಂಬಿಗೆ ಇದ್ದರೆ, ಖಂಡಿತವಾಗಿಯೂ ನೆರವಾಗುತ್ತಾನೆ. ಆತನು ಅನೇಕ ಸಲ ಅಂದರೆ ನಾನು ಮೆಂಫಿಸನಲ್ಲಿ ನರ್ತನ ಶಾಲೆಯಲ್ಲಿದ್ದಾಗ, ನನಗೆ ಉಪಕಾರ ಮಾಡಿದ್ದಾನೆ........ವಾರ್ಷಿಕ ಸ್ಪರ್ಧೆಗಳಲ್ಲಿ ನನಗೆ ನೆರವಾಗಲು ನಾನು ಯಾವಾಗಲೂ ಅವನನ್ನು ಪ್ರಾರ್ಥಿಸಿಕೊಳ್ಳುತ್ತಿದ್ದೆ. ಅದು ವ್ಯಾಪಾರಿ ಬುದ್ಧಿ. ಯೇಸುವು ನರ್ತನವನ್ನು ಕುರಿತು ಅನಾಸಕ್ತನೆಂದು ನಾನು ಬಲ್ಲೆ. ಮೊನ್ನೆ ಪುನಃ ಸೈತಾನನನ್ನು ಕುರಿತು ಪ್ರಾರ್ಥಿಸಿದೆ. ಅವನೇ ನನ್ನನ್ನು ಈ ನಗರದಿಂದ ಪಾರುಮಾಡಬೇಕು. ನಾನೇನೋ ಇಲ್ಲಿ ಬದುಕಿರುವೆ. ಆದರೆ ನನ್ನ ಮನಸ್ಸು ಎಲ್ಲಿಯೋ ! ಜನರು ಮತ್ತರಾಗಿ ಕುಣಿಯುತ್ತಿರುವ ಎಲ್ಲವೂ ನರ್ತನಮಯವಾಗಿರುವೆಡೆ ಒಯ್ಯುತ್ತದೆ. ನನ್ನ ಪ್ರಿಯ ಪಪಾ, ನಾನು ಯಾವಾಗಲೂ ಆಕಾಶದಲ್ಲಿ ಸಂಚಾರ ಮಾಡುವವಳು ಎಂದು ಹೇಳುತ್ತಿದ್ದನು. ಆತನೂ ನನ್ನಂತೆಯೇ ಆಕಾಶ ಸಂಚಾರ ಮಾಡಿದ್ದರೆ ಶ್ರೀಮಂತನಾಗುವ ಆತನ ಆಸೆಯು ಫಲಿಸುತ್ತಿತ್ತೇನೊ. ಆದರೆ ನನ್ನ ತಂದೆಯ ಒಂದೇ ಒಂದು ದೋಷ

ವೆಂದರೆ ಆತನಿಗೆ ಸೈತಾನನಲ್ಲಿ ನಂಬಿಕೆಯಿರಲಿಲ್ಲ; ಆತನು ಪ್ರೀತಿಸುತ್ತಿರಲಿಲ್ಲ. ಈ ವಿಷಯದಲ್ಲಿ ನಾನು ತುಂಬಾ ಚತುರೆ. ಎರಡನೇಯ ಉತ್ತಮ ವಿಷಯ ವನ್ನೇ– ಎಂದಿಗೂ ಉತ್ತಮ ವಿಷಯವೆಂಬುದನ್ನು ಬಲ್ಲೆ. ನನ್ನೆದುರು ಎರ ಡನೇ ಉತ್ತಮ ವಿಷಯಂದರೆ– ಈ ಪಟ್ಟಣಕ್ಕೆ ನಮ್ಮ ಆಗಮನ. ಅದನ್ನೇ ಅಂಗೀಕರಿಸಿದೆ. ನಾನು ಈ ಪ್ರದೇಶದ ರೀಡರ್‍ಸ ಡೈಜಸ್ಟ್, ಪೊಪ್ಯುಲರ ಮೆಕೆನಿಕ್ಸ, ಡೈಮ ಡಿಟೆಕ್ಟಿವ್ ಮತ್ತು ಮಕ್ಕಳ ಜೀವನ ಮುಂತಾದ ಪ್ರಸಿದ್ಧ ಪತ್ರಿಕೆಗಳ ಪೂರ್ತಿ ಮಾರಾಟದ ಹಕ್ಕುಗಳನ್ನು ಪಡೆದಿದ್ದೇನೆ. ಮಿಸ್ಟರ ಸೀ. ನಾನೇನಾ ದರೂ ಮಾರಲು ಬಂದಿರುವೆನೆಂದು ತಪ್ಪು ತಿಳಿಯಬೇಡಿ. ನನಗೆ ಈಗ ಒಂದು ಯೋಚನೆ ಹೊಳೆದಿದೆ. ಇಲ್ಲಿ ಸುಳಿದಾಡುವ ಇಬ್ಬರೂ ಹುಡುಗರು ವಯಸ್ಸಾದ ವರೆಂದೇ ನನ್ನ ಭಾವನೆ. ಅವರಿಬ್ಬರೂ ಒಳ್ಳೇ ಅಸಿಸ್ಟಂಟರಾಗಬಹುದು ಎಂದು ನನ್ನ ಅಭಿಪ್ರಾಯ. ಸರಿಯಲ್ಲವೇ?" ಇತ್ಯಾದಿ, ಇತ್ಯಾದಿ ನುಡಿದು ಹೋದಳು.

ಬಿಲಿಬೋಬ ಮತ್ತು ಪ್ರೀಚರ ಸೇರಿ ಮಿಸ್ ಬೊಬಿಟ್ ಮತ್ತು ರೊಸಾಲ್ಬಾಳಿಗಾಗಿ ಶ್ರಮ ವಹಿಸಿ ದುಡಿದರು. ಸಹೋದರಿ ರೊಸಾಲ್ಬಾ ಡ್ಯೂ ಡ್ರಾಪ್ ಎನ್ನುವ ಅಂಗ ಪ್ರಸಾಧನದ ಸಾಮಾನುಗಳನ್ನು ಹೊತ್ತುಕೊಂಡು ಹೋಗುತ್ತಿದ್ದಳು. ಆ ಇಬ್ಬರು ಹುಡುಗರೂ ಸಾಮಾನುಗಳನ್ನು ಆಯಾ ಗಿರಾಕಿಗಳಿಗೆ ತಲುಪಿಸಬೇಕಾಗುತ್ತಿತ್ತು. ಬಿಲಿಬೋಬ ಸಂಜೆ ಸಂಪೂರ್ಣವಾಗಿ ದಣಿಯುತ್ತಿದ್ದ. ಆತನಿಗೆ ರಾತ್ರಿಯ ಊಟ ಮಾಡುವದೇ ಒಂದು ಕಷ್ಟದ ಕೆಲಸವಾಗಿ ಕಾಣಿಸುತ್ತಿತ್ತು. ಚಿಕ್ಕಿ ಏಲಳು 'ಎಂಥ ನಾಚಿಕೆಗೇಡು'ಎನ್ನುತ್ತಿದ್ದಳು. ಕೊನೆಗೆ ಒಂದು ದಿನ ಬಿಲಿಬೋಬನು ಬಿಸಿಲಿನ ಝಳದ ಆಘಾತದಿಂದ ಮನೆಗೆ ಮರಳಿದನು. ಆಗ ಚಿಕ್ಕಿಯು "ಇನ್ನು ಇತ್ಯರ್ಥವಾಯಿತು. ನೀನು ಮಿಸ್ ಬೊಬಿಟಳ ಕೆಲಸವನ್ನು ಬಿಟ್ಟುಬಿಡಬೇಕು" ಎಂದಳು. ಬಿಲಿಬೋಬನು ತನ್ನ ತಾಯನ್ನು ಮನಸ್ಸಿಗೆ ಬಂದಂತೆ ಬೈದ. ಅವನ ತಂದೆಯು ಅವನನ್ನು ಕೋಣೆ ಯಲ್ಲಿ ಹಾಕಿ ಬೀಗ ಹಾಕಬೇಕಾಯಿತು. ತಾನು ಆತ್ಮಹತ್ಯೆ ಮಾಡಿಕೊಳ್ಳುತ್ತೇ ನೆಂದು ಬೋಬ ಒದರಿಕೊಂಡ. ಯಾರೋ ಒಬ್ಬ ಅಡಿಗೆಯವಳು ಒಂದು ಬಗೆಯ ಸೊಪ್ಪನ್ನು ತಿಂದರೆ ಖಂಡಿತವಾಗಿ ಸಾಯುವರೆಂದು ಹೇಳಿದ್ದಳು. ಆತನು ಅದೇ ಸೊಪ್ಪನ್ನು ತಿಂದು, "ಇದೋ ಸತ್ತೇ, ನಾ ಸತ್ತೇ" ಎಂದು ತಲೆಯನ್ನು ಹಿಡಿದುಕೊಂಡು ಹೊರಳಾಡಿದ. "ನನ್ನನ್ನು ಗಮನಿಸುವವರು ಯಾರೂ ಇಲ್ಲ"

ಎಂಪು ಒದರಿಕೊಂಡೆ.

ಮಿಸ್ ಬೊಬಿಟಳು ಅಲ್ಲಿಗೆ ಬಂದು ಆತನಿಗೆ ಸುಮ್ಮನುಳಿಯಲು ಹೇಳಿದಳು. "ನಿನಗೇನೂ ಆಗಿಲ್ಲ. ಕೇವಲ ಹೊಟ್ಟೆಕಡಿಯುತ್ತದೆ." ಎಂದಳು. ಕೂಡಲೇ ಅವಳು ಬೋಬನ ಬಟ್ಟೆಗಳನ್ನು ಸರಿಸಿ ಅಡಿಯಿಂದ ತಲೆಯವರೆಗೆ ಅಲ್ಕೋಹಾಲನ್ನು ತಿಕ್ಕಿದಳು. ಅದನ್ನು ಕಂಡು ಚಿಕ್ಕಿಗೆ ಆಶ್ಚರ್ಯವಾಯಿತು. "ಅಂತಹ ಪುಟ್ಟ ಹುಡುಗಿ ಹಾಗೆ ಮಾಡುವದು ಒಳ್ಳೇದಲ್ಲವೆಂದು ಕಾಣುತ್ತದೆ." ಎಂದಳು. "ಹಾಗೆ ಮಾಡುವದು ಒಳ್ಳೇಯದೊ, ಅಲ್ಲವೊ ನಾನು ಹೇಳಲಾರೆ. ಆದರೆ ಅದರಿಂದ ಅವನಿಗೆ ತುಂಬ ಸುಖವೆನಿಸುತ್ತದೆಂಬುದನ್ನು ಮಾತ್ರ ಬಲ್ಲೆ" ಎಂದಳು ಬೊಬಿಟ. ಆನಂತರ ಬಿಲಿಬೋಬನು ಅವಳ ಹತ್ತರ ಕೆಲಸಕ್ಕೆ ಹೋಗದಂತೆ ಚಿಕ್ಕಿಯು ಸರ್ವ ಪ್ರಯತ್ನ ಮಾಡಿದಳು. ಆದರೆ ಅವನ ತಂದೆಯು "ಆತನನ್ನು ಸ್ವೇಚ್ಛೆಯಾಗಿ ಬಿಟ್ಟುಬಿಡು. ಅವನ ಜೀವನವನ್ನು ಆತನೇ ಸರಿಕಂಡಂತೆ ಸಾಗಿಸಲಿ." ಎಂದನು.

ಮಿಸ್ ಬೊಬಿಟಳು ಹಣದ ವ್ಯವಹಾರದಲ್ಲಿ ತುಂಬ ಪ್ರಾಮಾಣಿಕಳಾಗಿದ್ದಳು. ಆ ಇಬ್ಬರು ಹುಡುಗರಿಗೆ, ಅವರಿಗೆ ಸಲ್ಲತಕ್ಕ ಹಣವನ್ನು ಪೂರ್ತಿಯಾಗಿ ಕೊಟ್ಟು ಬಿಡುತ್ತಿದ್ದಳು. ಅವರು ಸಿನೇಮಾಕ್ಕಾಗಲೀ ಇತರ ಮೋಜಿಗಾಗಲೀ ಖರ್ಚುಮಾಡುವದನ್ನು ಅವಳು ಸಹಿಸುತ್ತಿರಲಿಲ್ಲ. ಅವಳು, "ಆ ಹಣವನ್ನು ನೀವು ಉಳಿತಾಯಮಾಡಿರಿ. ಅರ್ಥಾತ್ ನಿಮಗೆ ಕಾಲೇಜಿಗೆ ಹೋಗುವ ಮನಸ್ಸಿದ್ದರೆ— ಹಾಗೆಂದು ನಿಮಗೆ ವಿದ್ಯಾರ್ಥಿವೇತನ ಸಿಗುವಷ್ಟು ಬುದ್ಧಿವಂತಿಕೆಯಿದೆಯೆಂದು ನಾನು ಹೇಳಲಾರೆ. ಫುಟಬಾಲ ಸ್ಕಾಲರಶಿಪ್ ಕೂಡ ನಿಮಗೆ ದೊರೆಯುವಂತಿಲ್ಲ.—" ಎಂದಳು. ಅದೇ ಹಣದ ಸಲುವಾಗಿ ಬಿಲಿಬೋಬ ಮತ್ತು ಪ್ರೀಚರ ಇವರಲ್ಲಿ ತೀವ್ರ ಮನಸ್ತಾಪವುಂಟಾಯಿತು. ಅಂದರೆ ನಿಜವಾದ ಕಾರಣ ಬೇರೆಯೇ ಇತ್ತು. ಬೊಬಿಟಳ ಒಲವಿಗಾಗಿ ಇಬ್ಬರಲ್ಲಿಯೂ ಅಸೂಯೆ ಕುದಿಯತೊಡಗಿತ್ತು. ಒಂದು ದಿನ ಪ್ರೀಚರನು ಬೊಬಿಟಳ ಬಗ್ಗಾಗಿಯೇ ಜಗಳಕ್ಕೆ ತೊಡಗಿದ. ಅವಳು ತಮ್ಮ ತಮ್ಮ ಲೆಕ್ಕವನ್ನು ನೋಡಬೇಕೆಂದೂ, ಬಿಲಿಬೋಬನು ತಾನು ಕೂಡಿಸಿದ ಹಣವನ್ನು ಸರಿಯಾಗಿ ಮುಟ್ಟಿಸುತ್ತಾನೋ ಇಲ್ಲವೋ ಎಂಬುದರಲ್ಲಿ ಸಂಶಯವುಂಟೆಂದೂ ಪ್ರೀಚರನು ಹೇಳಿದನು. "ಶುದ್ಧ ಸುಳ್ಳು" ಎಂದು ಕೂಗಿ ಬಿಲಿಬೋಬನು

ಒಂದೇ ಒಂದು ಮುಷ್ಟಿಯಿಂದ ಪ್ರೀಚರನನ್ನು ಸೊಯರಳ ಪೌಳಿಯ ಆಚೆಗೆ ನೂಕಿಬಿಟ್ಟು, ಅವನೊಂದಿಗೆ ತರಕಾರಿ ಗಿಡಪ ಬಳಿಯಲ್ಲಿ ಗುದ್ದಾಟಕ್ಕೆ ತೊಡಗಿದ. ಆದರೆ ಒಮ್ಮೆ ಪ್ರೀಚರನ ಹಿಡಿತದಲ್ಲಿ ಸಿಕ್ಕಿದ್ದೇ ಜೋಬನಿಗೆ ಅಲು ಗಾಡುವದು ಸಾಧ್ಯವಾಗಲಿಲ್ಲ. ಪ್ರೀಚರನು ಆತನ ಕಣ್ಣುಗಳಲ್ಲಿ ಧೂಳಿಯನ್ನು ಎರಚಿದ. ಇದೆಲ್ಲ ನಡೆಯುತ್ತಿದ್ದಾಗ ಸೊಯರಳು ತನ್ನ ಮಾಳಿಗೆಯ ಮೇಲಿನ ಕಿಟಕಿಗೆ ಒರಗಿಕೊಂಡು ನೋಡುತ್ತಿದ್ದಳು; ಕೂಗಿಕೊಳ್ಳುತ್ತಿದ್ದಳು. ಆ ವಪ್ಪ ಹೆಂಗಸು-ರೊಸಾಲ್ಬಾ-ಯಾರನ್ನು ಎಂದು ತಿಳಿಸದಂತೆ ಅಸ್ಪಷ್ಟವಾಗಿ (ಸಂದಿಗ್ಧ ವಾಗಿ) 'ಕೊಲ್ಲು! ಕೊಲ್ಲು!' ಎಂದು ಕೂಗಾಡಹತ್ತಿದಳು. ಮಿಸ್ ಜೊಬಿಟ ಳಿಗೆ ತಾನು ಏನು ಮಾಡುತ್ತಿರುವಳೆಂದು ಚನ್ನಾಗಿ ಗೊತ್ತಿತ್ತು. ಅವಳು ಕೆಳ ಗಿಳಿದು ಬಂದು ಆ ಹುಡುಗರನ್ನು ಚನ್ನಾಗಿ ಥಳಿಸಿದಳು. ಉಬ್ಬುಸ ಪಡುತ್ತ ಪ್ರೀಚರನು ಕುಸಿದುಬಿಟ್ಟ. "ಪ್ರಿಯಳೇ ಚಿನ್ನಾ. (ಒದ್ದೆ ನಾಯಿಯಂತೆ ಮೈ ಕೊಡವಿಕೊಳ್ಳುತ್ತ) ನೀನೇ ನಿರ್ಣಯಿಸು." ಎಂದ. "ನಿರ್ಣಯಿಸುವ ದೇನು ಮಣ್ಣು?" ಜೊಬಿಟ್ ಧಿಕ್ಕರಿಸಿ ಕೇಳಿದಳು. "ನಿನ್ನ ನಿಜವಾದ ಪ್ರಿಯ ತಮನು ಯಾರೆಂದು ಹೇಳು ಚಿನ್ನಾ!" ಎಂದನು. "ಪ್ರಿಯತಮ! ನನ್ನ ಚಿನ್ನಾ!!" ಎಂದು ಅಚ್ಚರಿಬಟ್ಟಳು ಜೊಬಿಟ. "ನಾನು ನಿಮ್ಮಂಥ ಅವಿವೇ ಕಿಗಳಾದ ಹಳ್ಳಿಗಾಡಿನ ಹುಡುಗರ ಸಂಬಂಧ ಬೆಳಿಸಿದ್ದೇ ತಪ್ಪು. ನೀನೆಂತಹ ವ್ಯಾಪಾರಿಯಾಗುವೆ? ನೋಡು ಪ್ರೀಚರ ಸ್ಟಾರ, ನನಗೆ ಪ್ರಿಯತ ಮನು ಬೇಕಾಗಿಲ್ಲ. ಬೇಕಾಗಿದ್ದರೂ ನಿನ್ನನ್ನು ಎಂದೂ ಬಯಸಲಾರೆ. ನಿನಗೆ, ಹಿರಿಯ ಸ್ತ್ರೀಯೊಬ್ಬಳು ಬಂದರೆ ಎದ್ದು ನಿಲ್ಲಬೇಕೆಂಬ ಶಿಷ್ಟಾಚಾರವೂ ಗೊತ್ತಿಲ್ಲ." ಪ್ರೀಚರನು ನೆಲದಮೇಲೆ ಉಗುಳಿದ. ಧೈರ್ಯದಿಂದ ಬಿಲಿಜೋಬನ ಕಡೆ ನುಗ್ಗಿದ. ಏನೂ ಆಗಲಿಲ್ಲವೆನ್ನುವಂತೆ, "ಬಾ, ಹೋಗೋಣ; ಅವಳು ಪರಮ ದುಷ್ಟಳು. ಸನ್ಮಿತ್ರರಲ್ಲಿ ಪರಸ್ಪರ ಜಗಳ ಹುಟ್ಟಿಸುವದನ್ನು ಬಿಟ್ಟರೆ ಅವಳಿಗೆ ಇನ್ನೇನು ಬೇಕು?" ಎಂದನು. ಒಂದು ನಿಮಿಷ ಒಪ್ಪಂದ ವಾಗಿ ಬಿಲಿಜೋಬ ಗೆಳೆಯನನ್ನು ಕೂಡಿಕೊಳ್ಳುವನೋ ಎಂದೆನಿಸಿತು. ಆದರೆ ಥಕ್ಕನೆ ಎಚ್ಚರಗೊಂಡು ಹೊಡೆಯುವವನಂತೆ ಧಾವಿಸುತ್ತ ಮುನ್ನುಗ್ಗಿದ. ಅವ ರಿಬ್ಬರೂ ಪರಸ್ಪರವಾಗಿ ತಮ್ಮಲ್ಲಿದ್ದ ಸ್ನೇಹವನ್ನೆಲ್ಲ ಸುಟ್ಟು ಬಿಡುವವರಂತೆ ತುಸು ಹೊತ್ತು ದಿಟ್ಟಿಸಿಕೊಂಡರು. ಪರಮ ಸ್ನೇಹವಿಲ್ಲದೇ ಪರಮದ್ವೇಷವಿಲ್ಲ

ವೇನೋ. ಪ್ರೀಚರನ ಮುಖದಲ್ಲಿ ಪ್ರೀತಿ, ದ್ವೇಷಗಳ ದ್ವಂದ್ವ ಮೂಡಿತ್ತು. ಆದರೆ ಅಲ್ಲಿಂದ ಜಾರಿಕೊಳ್ಳದೇ ಆತನಿಗೆ ಗತ್ಯಂತರವಿದ್ದಿಲ್ಲ. ಅಯ್ಯೋ! ಪ್ರೀಚರನೇ ನೀನು ಅಂದು ಒಬ್ಬನೇ ಬೀದಿಯ ಮಾರ್ಗವಾಗಿ ನಡೆಯುವಾಗ ಎಷ್ಟು ಕೃಶನಾಗಿ, ಹತಾಶನಾಗಿ ಕಾಣುತ್ತಿದ್ದೆ!

ಅವರಿಬ್ಬರೂ ಪುನಃ ಒಂದುಗೂಡಲಿಲ್ಲ. ಹಾಗೆ ಅವರಿಗೆ ಇಚ್ಛೆ ಇರಲಿಲ್ಲವೆಂದಲ್ಲ. ಅವರ ಹೃದಯಗಳನ್ನು ಕೂಡಿಸಿದ ಸ್ನೇಹವಾಹಿನಿಯು ಕಲುಷಿತವಾಗಿತ್ತು. ಅವರು ಪರಸ್ಪರರ ಮಾತುಗಳನ್ನೂ ಚಲನವಲನಗಳನ್ನೂ ಸೂಕ್ಷ್ಮವಾಗಿ ನಿರೀಕ್ಷಿಸುತ್ತಿದ್ದರು. ಒಂದು ದಿನ ಪ್ರೀಚರ ಹೊಸ ಗೆಳೆಯನನ್ನು ಕೂಡಿಕೊಂಡಿದ್ದ. ಬಿಲಿಬೋಬನು ಅನೇಕ ಸಲ ಆ ಕಡೆಗೆ ಸುಳಿದಾಡಿದ, ಚಿಕ್ಕಪುಟ್ಟ ವಸ್ತುಗಳನ್ನು ಆರಿಸಿ ಒಗೆಯುತ್ತಿದ್ದ. ಹುಚ್ಚು ಹುಚ್ಚಾಗಿ ಮಾತನಾಡುತ್ತಿದ್ದ. ಅವನ ಲಕ್ಷ್ಯವನ್ನು ತನ್ನ ಕಡೆಗೆ ಎಳೆಯಬೇಕೆನ್ನುವದೇ ಆತನ ಉದ್ದೇಶ. ಒಮ್ಮೊಮ್ಮೆ ಪ್ರೀಚರನು ಬೇಕೆಂತಲೇ ಗೇಟಿನ ಬಳಿಗೆ ಬಂದು ಚಿಕ್ಕ ಏಲಳನ್ನು ಮಾತನಾಡಿಸುತ್ತಿದ್ದ. ಬಿಲಿಬೋಬನನ್ನು ನೋಯಿಸಬೇಕೆಂದು ಹಾಗೆ ಮಾಡುತ್ತಿದ್ದನೆಂದು ನಮ್ಮ ವಾದ. ಏಕೆಂದರೆ ಪ್ರೀಚರನ ಮತ್ತು ನಮ್ಮೆಲ್ಲರ ಮಾತುಕತೆಯು ಮೊದಲಿನಂತೇ ಇದ್ದಿತ್ತು. ಕ್ರಿಸ್‌ಮಸ್ ಹಬ್ಬಕ್ಕೆ ಆತನು ನಮಗೆಲ್ಲ ಒಳ್ಳೆಯ ಕಾಣಿಕೆಗಳನ್ನು ಕೊಟ್ಟ. ಬಿಲಿಬೋಬನಿಗಾಗಿ ಒಂದು 'ಶರ್ಲಾಕ ಹೋಮ್ಸ'ದ ಸಂಪುಟವನ್ನಿಟ್ಟು ಹೋದ. ಅದರ ಮೊದಲ ಪುಟದ ಮೇಲೆ "ಗೋಡೆಯ ಮೇಲಿರುವ ಐವಿಯಂಥ ಗೆಳೆಯರು ಕೆಳಗೆ ಬೀಳಬೇಕು." ಎಂದು ಬರೆದಿತ್ತು. ಅಂದರೆ ಪ್ರೀಚರನೇ ಅದನ್ನು ಗೀಚಿದ್ದ. ಬಿಲಿಬೋಬನು "ದೇವರೇ ಅವನೆಂತಹ ಮರುಳ!" ಎಂದನು. ಅನಂತರ ಒಂದು ದಿನ ಚಳಿದಿನವೆಂದು ಮನೆಯ ಹಿಂಭಾಗಕ್ಕೆ ಹೋಗಿ ಪೆಕಾನ ಮರವನ್ನೇರಿ ಕುಳಿತುಕೊಂಡನು. ಮಧ್ಯಾಹ್ನದ ವರೆಗೆ ಕೊಂಬೆಯ ಮರೆಯಲ್ಲಿ ಅವಿತುಕೊಂಡು ಕುಳಿತುಕೊಂಡಿದ್ದ.

ಆದರೂ ಆತನ ಜೀವನವು ಸುಖವಾಗಿ ಸಾಗುತ್ತಿತ್ತು ಎಂದು ಹೇಳಬಹುದು. ಮಿಸ್ ಬೊಬಿಟ ಅಲ್ಲಿಯೇ ಇದ್ದಳು. ಈಗ ಆತನ ಸಂಗಡ ತುಂಬ ಸ್ನೇಹದಿಂದ ನಡೆದುಕೊಳ್ಳುತ್ತಿದ್ದಳು. ಅವಳು ಮತ್ತು ರೊಸಾಲ್ಬಾ ತಮಗಾಗಿ ಆತನು ಏನು ಮಾಡಿದರೂ ಅಸಮ್ಮತಿಯನ್ನು ತೋರಿ

ಸುತ್ತಿದ್ದಿಲ್ಲ. ಅಂದರೆ ಅವನನ್ನು ಒಬ್ಬ ಹಿರಿಯ ವ್ಯಕ್ತಿಯೆಂದು ಅವರು ಗಣಿಸ ತೊಡಗಿದ್ದರು. ಇಸ್ಪೀಟು ಆಡುವಾಗ ಅವನೇ ಗೆಲ್ಲುವಂತೆ ಅನುವು ಮಾಡಿ ಕೊಡುತ್ತಿದ್ದರು. ಅವನ ಸುಳ್ಳು ಮಾತುಗಳನ್ನು ವಿರೋಧಿಸುತ್ತಿದ್ದಿಲ್ಲ. ಅವನ ಯಾವ ಇಚ್ಛೆಯನ್ನೂ ನಿರುತ್ಸಾಹಗೊಳಿಸುತ್ತಿದ್ದಿಲ್ಲ. ಅಂತೂ ಕಾಲವು ಸುಖಮಯವಾಗಿ ಕಳೆಯುತ್ತಿತ್ತು. ಆದರೆ ಶಾಲೆಯು ಪ್ರಾರಂಭವಾದಾಗ ಮತ್ತೆ ತೊಂದರೆಗೆ ಆರಂಭವಾಯಿತು. ಮಿಸ್ ಬೊಬಿಟಳು ಶಾಲೆಗೆ ಹೋಗಲು ಸರ್ವಥಾ ಒಪ್ಪಲಿಲ್ಲ. ಮುಖ್ಯಾಧ್ಯಾಪಕ ಕೂಪಲ್ಯಾಂಡನು ಒತ್ತಾಯ ಮಾಡಲು ಬಂದ. ಅವಳು "ಇದೆಂಥ ಅಸಂಬದ್ಧ ಒತ್ತಾಯ. ನಾನು ಓದಬಲ್ಲೆ, ಬರೆಯಬಲ್ಲೆ, ಚನ್ನಾಗಿ ಲೆಕ್ಕವನ್ನೂ ಮಾಡಬಲ್ಲೆ. ಇವೆಲ್ಲ ನಿಮ್ಮೂರಿನವರಿಗೆ ತಿಳಿದ ವಿಷಯ. ನಮಗಿಬ್ಬರಿಗೂ ಉತ್ಸಾಹವಿಲ್ಲ. ವೇಳೆಯೂ ಇಲ್ಲ. ಅಥವಾ ನಿಮ್ಮ ಕಡೆಯಿಂದ ನಾನು ಕಲಿಯುವದಾದರೂ ಏನು? ನೀವು ನರ್ತನವನ್ನು ಕಲಿಸುವದಿದ್ದರೆ ಆಸಕ್ತಿಯಿಂದ ಬರುತ್ತಿದ್ದೆ. ಇನ್ನು ಸದ್ಯದ ಪರಿಸ್ಥಿತಿಯಲ್ಲಿ ಶಾಲೆಯ ವಿಷಯವನ್ನು ನನ್ನ ಹತ್ತಿರ ಪ್ರಸ್ತಾಪಿಸಬೇಡಿ" ಎಂದಳು. ಮಿಸ್ಟರ ಕೂಪಲ್ಯಾಂಡನೂ ಆ ವಿಷಯವನ್ನು ಪ್ರಸ್ತಾಪಿಸಲಿಲ್ಲ. ಆದರೆ ಊರಿಗೆ ಊರೇ ಅವಳು ಮುಖ್ಯಾಧ್ಯಾಪಕನ ಆಜ್ಞೆಯನ್ನು ಉಲ್ಲಂಘಿಸಿದ ಬಗ್ಗೆ ಚನ್ನಾಗಿ ಬಾರಕೋಲಿನಿಂದ ಹೊಡೆಯಬೇಕೆಂದು ಅಭಿಪ್ರಾಯ ಪಟ್ಟಿತು. ಹೊರೆಸ್ ಡಿಸಲೇನು ವರ್ತಮಾನ ಪತ್ರದಲ್ಲಿ "ಒಂದು ದುರಂತ ಪ್ರಸಂಗ" ಎಂಬ ಪುಟ್ಟ ಲೇಖನವನ್ನು ಬರೆದಿದ್ದ. ಅವನ ಅಭಿಪ್ರಾಯದಂತೆ " ಆ ಚಿಕ್ಕ ಹುಡುಗಿಯು ಅಮೇರಿಕೆಯ ಘಟನೆಯನ್ನೇ ಉಲ್ಲಂಘಿಸಿದ್ದಾಳೆ. ಅದು ಘೋರ ಅಪರಾಧ. ಅಂಥವಳು ಕಾನೂನನ್ನು ಸ್ವೇಚ್ಛೆಯಾಗಿ ಉಲ್ಲಂಘಿಸಬಹುದೇ? " ಎಂದು ಮುಂತಾಗಿ ಬರೆದಿದ್ದ. ನಿಜವಾಗಿ ಅವಳನ್ನು ಮತ್ತು ರೊಸಾಲ್ಬಾಳನ್ನು ಸ್ವೇಚ್ಛೆಯಾಗಿ ಬಿಟ್ಟುಬಿಟ್ಟಿದ್ದರು. ರೊಸಾಲ್ಬಾ ನಿಗ್ರೋ ಹುಡುಗೆಯಾದ್ದರಿಂದ ಯಾರೂ ಅವಳನ್ನು ಅಷ್ಟು ಲಕ್ಷ್ಯಕ್ಕೆ ತರಲಿಲ್ಲ.

ಬಿಲಿಬೋಬನು ಅಷ್ಟು ಅದೃಷ್ಟವಂತನಾಗಿರಲಿಲ್ಲ. ಆತನು ಸಾಲೆಗೆ ಹೋಗಲೇಬೇಕಿತ್ತು. ಶಾಲೆಗೆ ಹೋಗದೇ ಮನೆಯಲ್ಲಿ ಕುಳಿತುಕೊಂಡಿದ್ದರೆ ಹೆಚ್ಚು ಲಾಭವಾಗುತ್ತಿತ್ತೇನೋ. ಪ್ರಗತಿ ಪತ್ರಿಕೆಯಲ್ಲಿ ಮೂರು ವಿಷಯಗ ಳಲ್ಲಿ ನಾಪಾಸು ಶರಾ ಪಡೆದು ಆತನು ವಿಕ್ರಮವನ್ನು ಸಂಪಾದಿಸಿದ್ದನು.

ಆದರೂ ಅವನೊಬ್ಬ ಚುರುಕ ಹುಡುಗ. ಶಾಲೆಯಲ್ಲಿ ತಾಸುಗಟ್ಟಲೆ ಕಾಲ ಹರಣ ಮಾಡುವದು ಆತನಿಗೆ ಬೇಸರವೆನಿಸುತ್ತಿತ್ತು. ಇದಲ್ಲದೆ ಮಿಸ್ ಬಾಬಿಟಳು ಬಳಿಯಲ್ಲಿಲ್ಲದಿದ್ದರೆ ಆತನು ಅರೆನಿದ್ರೆಯಲ್ಲಿರುವವನಂತೆ ನಿರುತ್ಸಾಹಿಯಾಗಿರುತ್ತಿದ್ದ. ಯಾವಾಗಲೂ ತಂಟೆ ಮಾಡುವವರಲ್ಲಿ ತೊಡಗಿರುತ್ತಿದ್ದ; ಕಣ್ಣುಗಳು ಪೆಟ್ಟುತಾಗಿ ಊದಿಕೊಂಡಿರುತ್ತಿದ್ದವು. ತುಟಗಳು ಒಡೆದಿರುತ್ತಿದ್ದವು. ಇನ್ನೊಮ್ಮೆ ಕಾಲಿಗೆ ನೋವಾಗಿ ಕುಂಟುತ್ತಿದ್ದ. ಈ ಜಗಳಗಳನ್ನು ಕುರಿತು ಆತನು ಮಿಸ್ ಬಾಬಿಟಳ ಹತ್ತಿರ ಪ್ರಸ್ತಾಪವೆತ್ತುತ್ತಿರಲಿಲ್ಲ. ಆದರೆ ಅವಳು ಊಹಿಸಿಯೇ ಎಲ್ಲವನ್ನು ತಿಳಿದುಕೊಳ್ಳುತ್ತಿದ್ದಳು. ಅವಳು, "ಬಿಲಿ ಬೋಬ, ನೀನು ತುಂಬ ಮುದ್ದು ಹುಡುಗ. ನೀನೆಂದರೆ ನನಗೆ ಪಂಚಪ್ರಾಣ. ದಯಮಾಡಿ ತಂಟಲುಮಾರಿತನಕ್ಕೆ ಮನಸ್ಸು ಕೊಡಬೇಡ. ಅವಳು ನನ್ನನ್ನು ನಿಂದಿಸಿದರೇನು ? ನೀನು ಮಾತ್ರ ನನಗಾಗಿ ಜಗಳಕ್ಕೆ ಹೋಗಬೇಡ. ಅವರೇಕೆ ಹಾಗೆ ನಿಂದಿಸುತ್ತಾರೆಂದು ಗೊತ್ತಿದೆಯೇ ? ಅದೊಂದು ರೀತಿಯ ಪ್ರಶಂಸೆ. ಅವರಿಗೆ ಅಂತರಂಗದಲ್ಲಿ ನಾನು ಒಬ್ಬ ಅದ್ಭುತ ಹುಡುಗಿಯೆಂದು ಅನಿಸುತ್ತದೆ. ಅದಕ್ಕಾಗಿ ಅಸೂಯೆ. ಅದನ್ನು ತಡೆಯಲಾರದೆ ನಿಂದೆ ಮಾಡುತ್ತಾರೆ. ಎಂದಳು.

ಅವಳು ನುಡಿದುದು ನಿಜವೇ. ನೆಮ್ಮ ಶಕ್ತಿಯನ್ನು ಕುರಿತು ಕೌತುಕವೆನಿಸದಿದ್ದರೆ ಯಾರೂ ನಮ್ಮನ್ನು ನಿಂದಿಸುವ ಗೊಡವೆಗೆ ಹೋಗುವದಿಲ್ಲ. ಮೆನಿಫಾಕ್ಸನೆನ್ನುವ ಮನುಷ್ಯನು ಬರುವ ವರೆಗೆ ನಮಗೂ ಅವಳೆಂತಹ ವಿಲಕ್ಷಣ ಶಕ್ತಿಯುಳ್ಳವಳೆಂದು ಗೊತ್ತಿದ್ದಿಲ್ಲ. ಆ ಘಟನೆ ಹೋದ ಫೆಬ್ರುವರಿಯಲ್ಲಿ ನಡೆಯಿತು. ಮೆನಿಫಾಕ್ಸನು ಬರುವ ಸುದ್ದಿಯು ನಮಗೆ ಅಂಗಡಿಗಳಲ್ಲಿ ಅಂಟಿಸಿದ್ದ ಭಿತ್ತಿಪತ್ರಗಳಿಂದ ಗೊತ್ತಾಯಿತು. "ಮನಿಫಾಕ್ಸನ ಪ್ರಯೋಗ.— ಬೀಸಣಿಕೆಯನ್ನು ಹಿಡಿದುಕೊಂಡು ಕುಣಿಯುವವಳು. ಮೇಲಾಗಿ ನಿಮ್ಮ ನೆರೆಹೊರೆಯವರು ಮಾಡುವ ವಿಶೇಷ ಕಾರ್ಯಕ್ರಮ. ಅದರಲ್ಲಿ ಪ್ರಥಮ ಬಹುಮಾನವನ್ನು ಪಡೆದ ಸ್ಪರ್ಧಾಳುವಿಗೆ ಹಾಲಿವುಡ್ಡಿನ ತಾರಾಪರೀಕ್ಷೆಯ ಅವಕಾಶ." ಇದೆಲ್ಲ ಒಂದೇ ವಾರದೊಳಗಾಗಿ ನಮ್ಮ ಊರಿನಲ್ಲಿ ನಡೆಯುವದಿತ್ತು. ಟಿಕೇಟಿನ ಬೆಲೆ ಒಂದು ಡಾಲರು. ನೆಮ್ಮ ಊರಿಗೆ ಆ ಹಣ ತುಸು ಮಟ್ಟಿಗೆ ಹೆಚ್ಚೆನ್ನಬಹುದು. ಆದರೂ ಉತ್ಸುಕರಾಗಿದ್ದ ಜನರು ಹೇಗಾದರೂ

ಮಾಡಿ ಪ್ರಯತ್ನಿಸಿ ದುಡ್ಡು ಕೂಡಿಸಿಟ್ಟಿದ್ದರು. ಕಾರ್ಯಕ್ರಮದ ದಿನವನ್ನು ಎದುರು ನೋಡುತ್ತಿದ್ದರು. ಡ್ರಗ್‌ಸ್ಟೋರಿನ ಹತ್ತಿರ ಹುಡುಗರು ಕೂಡಿ ಕೊಂಡು ಬೀಸಣಿಕೆಯ ನೃತ್ಯವನ್ನು ಮಾಡುವಳೆಂದು ನಂಬಲಾದ ಮಿಸೆಸ್ ಮೆನಿಫಾಕ್ಸಳನ್ನು ಕುರಿತು ಒಂದು ವಾರದ ವರೆಗೆ ನಾಲಿಗೆ ಸಡಿಲುಬಿಟ್ಟು ಮಾತನಾಡುತ್ತಿದ್ದರು. ಆ ಕಂಪನಿಯವರು ಚಕಲ್‌ವುಡ್ ಟೂರಿಸ್ಟಕ್ಯಾಂಪಿನ ಬಳಿಯಲ್ಲಿದ್ದ ಮನೆಯಲ್ಲಿ ತಂಗಿದ್ದರು. ದಿನವೆಲ್ಲ ಕಾರಿನಲ್ಲಿ ಸುತ್ತಾಡುತ್ತಿದ್ದರು. ಆ ಕಾರಿನ ಬಾಗಿಲುಗಳ ಮೇಲೆಲ್ಲ ಮ್ಯಾನಿಫಾಕ್ಸನ ಹೆಸರುಗಳನ್ನು ದೊಡ್ಡ ದೊಡ್ಡ ಅಕ್ಷರಗಳಲ್ಲಿ ಬರೆದಿದ್ದರು. ಮ್ಯಾನಿಫಾಕ್ಸನ ಎದುರಿನಲ್ಲಿ ಆತನ ಹೆಂಡತಿಯು ಕೃಶಳಾಗಿಯೂ ಚಿಕ್ಕವಳಾಗಿಯೂ ಕಾಣುತ್ತಿದ್ದಳು.

ಪೂಲ್‌ಹಾಲನ್ನು ಅವರು ತಮ್ಮ ಮುಖ್ಯ ಕಚೇರಿಯನ್ನಾಗಿ ಮಾಡಿದ್ದರು. ದಿನವೂ ಸಂಜೆ ಅವರು ಯಥೇಚ್ಛವಾಗಿ ಮದ್ಯವನ್ನು ಕುಡಿಯುತ್ತಿದ್ದರು. ಮ್ಯಾನಿಫಾಕ್ಸನು ನಾಟಕದ ಹೊರತಾಗಿ ಇನ್ನೂ ಕೆಲವು ವ್ಯವಹಾರಗಳನ್ನು ಪ್ರಾರಂಭಿಸಿದನು. ಅವನು ಉದ್ಯೋಗ ದೊರಕಿಸಿಕೊಡುವ ಒಂದು ಸಂಸ್ಥೆಯನ್ನು ಪ್ರಾರಂಭಿಸಿದನು. ಐವತ್ತು ಡಾಲರುಗಳನ್ನು ಶುಲ್ಕವಾಗಿ ಪಾವತಿ ಮಾಡುವ ಯಾವದೇ ಸಾಹಸಿಯಾದ ತರುಣನಿಗೆ ನ್ಯೂ ಆರ್ಲಿಯನ್ಸನಿಂದ ದಕ್ಷಿಣ ಅಮೇರಿಕೆಗೆ ಹೋಗುವ ಹಣ್ಣಿನ ಹಡಗುಗಳ ಮೇಲೆ ಉತ್ತಮ ಉದ್ಯೋಗ ಸಿಗುತ್ತದೆಯೆಂದೂ ಜೀವಮಾನದಲ್ಲಿ ಇಂತಹ ಸುವರ್ಣ ಸಂಧಿಯು ದೊರೆಯಲಿಕ್ಕಿಲ್ಲವೆಂದೂ ಸಾರಿದ್ದನು. ಐದು ಡಾಲರಿಗಿಂತ ಕಡಿಮೆ ಉಳಿತಾಯ ಮಾಡಿದವರೇ ಕಡಿಮೆ ನಮ್ಮೂರಿನಲ್ಲಿ. ಆದರೂ ಉದ್ಯೋಗದ ಆಸೆಯಿಂದ ಹೇಗಾದರೂ ಪ್ರಯತ್ನಪಟ್ಟು ಮಕ್ಕಳ ಕಲ್ಯಾಣಕ್ಕಾಗಿ ಅನೇಕರು ಹಣವನ್ನು ಕೂಡಿಡತೊಡಗಿದರು. ಎಲಾ ವಿಲ್ಲಿಂಗ ಹ್ಯಾಮುಳು ತನ್ನ ಗಂಡನ ಸ್ಮಾರಕ ಶಿಲೆಗೆಂದು ಕೂಡಿಸಿಟ್ಟ ದ್ರವ್ಯವನ್ನು ಮಗನಿಗೆ ಕೊಟ್ಟಳು. ಎ ಸಿ. ಟ್ರಂಪನ ತಂದೆಯು ಹತ್ತಿಯ ಬೆಳೆಯ ಲಿಲಾವಿನಿಂದ ಬಂದ ಹಣವನ್ನು ಮಗನಿಗೆ ಕೊಟ್ಟನು.

ಆ ದಿನ— ಅಂದರೆ ಪ್ರಯೋಗದ ದಿನ ಜನರು ತಮ್ಮ ತಮ್ಮ ವ್ಯವಹಾರಗಳನ್ನು ಮರೆತರು. ನಾವೂ ಗೀತನಾಟಕಕ್ಕೆ ಹೋಗಬೇಕೆಂದು ಚಿಕ್ಕಿಯು ನಿರ್ಧರಿಸಿದಳು. ಪ್ರತಿಯೊಬ್ಬನೂ ಅಂದವಾದ ಹಾಗೂ ಸುವಾಸನೆ ಹೊಮ್ಮುವ

ಗುಲಾಬಿ ಬಣ್ಣದ ಬಟ್ಟೆಗಳನ್ನು ಧರಿಸಿದ್ದನು. ಒಡೆನ್ ನಾಟಕ ಮಂದಿರವು ಎಂದೂ ಅಷ್ಟು ಕಿಕ್ಕಿರಿದು ತುಂಬಿದ್ದಿಲ್ಲವೇನೊ. ಜನರು ಪಾಲರುಗಳನ್ನು ನೀರಿನಂತೆ ವೆಚ್ಚಮಾಡಿದರು. ಪ್ರತಿಯೊಬ್ಬನ ಸಂಬಂಧಿಕನೂ ಆಟಕ್ಕೆ ಬಂದಿದ್ದ. ಹೀಗಾಗಿ ಸೂಕ್ಷ್ಮವಾದ ಭಾವನಾ ತರಂಗಗಳು ಚಿಮ್ಮ ತೊಡಗಿದ್ದುವು. ಪ್ರತಿಯೊಬ್ಬರಿಗೂ ತಮ್ಮ ತಮ್ಮ ಪ್ರಿಯ ಸ್ಪರ್ಧಾಳುವನ್ನು ಕುರಿತು ಕೌತುಕ; ಆತುರ. ನಾವು ಚನ್ನಾಗಿ ಬಲ್ಲ ಸ್ಪರ್ಧಾಳುವೆಂದರೆ ಮಿಸ್ ಬೊಬಿಟಳೊಬ್ಬಳೇ. ಬಿಲಿಬೋಬನಿಗಂತೂ ಶಾಂತನಾಗಿ ಕುಳಿತುಕೊಳ್ಳುವದು ಸಾಧ್ಯವಿರಲಿಲ್ಲ. "ಪುನಃ ಪುನಃ ನಾವೆಲ್ಲ ಮಿಸ್ ಬೊಬಿಟಳ ಆಟವೇ ಒಳ್ಳೇದೆಂದು ಚಪ್ಪಾಳೆ ತಟ್ಟಬೇಕು." ಎನ್ನುತ್ತಿದ್ದ. "ಹಾಗೆ ಒಬ್ಬಳನ್ನೇ ಎತ್ತಿ ಹಿಡಿಯುವದು ಅನಥ್ಯ" ವೆಂದು ಚಿಕ್ಕ ಎಲಳು ಹೇಳಿದಳು. ಆತನಿಗೆ ಸಿಟ್ಟು ಬಂದಿತು. ಆತ ನಮಗೆಲ್ಲ ಮಿಠಾಯಿಯ ಪೊಟ್ಣಗಳನ್ನು ತಂದುಕೊಟ್ಟ. ಆದರೆ ತನ್ನ ಕೈಗಳು ಅಂಟು ಆಗಬಾರದೆಂದೂ ಇದಲ್ಲದೆ ಮಿಸ್ ಬೊಬಿಟ್ ಕುಣಿಯುತ್ತಿರುವಾಗ ಗದ್ದಲಮಾಡುತ್ತ ತಾವು ತಿನ್ನುವದರಲ್ಲಿ ತೊಡಗದೆ ಅವಳನ್ನು ಹುರಿದುಂಬಿಸಬೇಕೆಂದೂ ಆತ ನಮಗೆ ಹೇಳತೊಡಗಿದ. ಅವಳೂ ಸ್ಪರ್ಧಾಳುವಾಗಿರುವಳೆನ್ನುವ ವಿಷಯವು ಎಲ್ಲರಿಗೂ ಆಶ್ಚರ್ಯಕರವಾಗಿ ಪರಿಣಮಿಸಿತ್ತು. ಒಂದು ರೀತಿಯಿಂದ ಅದು ನಿಜವೆಂದು ನಾವು ಊಹಿಸಿ ತಿಳಿದುಕೊಂಡಿದ್ದೆವು. ಬಹುದಿನಗಳ ವರೆಗೆ ಮಿಸ್ ಬೊಬಿಟಳು ಮಿಸೆಸ್ ಸೊಯರಳ ಮನೆಯನ್ನು ಬಿಟ್ಟು ಕದಲಿದ್ದಿಲ್ಲ. ಅವಳ ಗ್ರಾಮೋಫೋನು ಅರ್ಧ ರಾತ್ರಿಯ ವರೆಗೆ ಬಾರಿಸುತ್ತಿತ್ತು. ಅವಳ ನೆರಳು ಕಿಡಕಿಯ ಪರದೆಯಮೇಲೆ ಕುಣಿಯುವದನ್ನು ನಾವು ಕಾಣಬಹುದಿತ್ತು. ಸಹೋದರಿ ರೊಸಾಲ್ಬಾಳ ಹತ್ತಿರ ಮಿಸ್ ಬೊಬಿಟಳನ್ನು ಕುರಿತು ಕೇಳಿದಾಗ, ಅವಳು ಏನನ್ನೋ ಮುಚ್ಚುಮರೆಯುಳ್ಳದಂತೆ ಮಾತನಾಡುತ್ತಿದ್ದಳು. ಅವಳ ಹೆಸರು ಕಾರ್ಯಕ್ರಮದಲ್ಲಿ ಎರಡನೇಯದಾಗಿತ್ತು. ಆದರೂ ಬಹುಹೊತ್ತಿನ ವರೆಗೆ ಅವಳು ಕಾಣಿಸಿಕೊಳ್ಳಲೇ ಇಲ್ಲ. ಆಗ ಬಣ್ಣಬಳಿದುಕೊಂಡ ಮಿನಿಸ್ಟ್ರೆಲ್ಸನು ಚಪ್ಪಾಳೆ ತಟ್ಟುತ್ತ ಅನೇಕ ಹಾಸ್ಯದ ಚಟಾಕಿಗಳನ್ನು ಹೇಳಿದ. 'ಹಾ. ಹಾ.' ಚಿಕ್ಕ ಎಲಳು ಆತನು ಇನ್ನೊಮ್ಮೆ ಅಂತಹ ಹಾಸ್ಯವನ್ನು ಮಾಡಿದರೆ ತಾನು ಹೊರಟು ಹೋಗುವದಾಗಿ ಹೇಳಿದಳು. ಆತನು ಅಂತಹ ವಿನೋದವನ್ನೇ ಪುನಃ ಮಾಡಿದ. ಆದರೆ ಚಿಕ್ಕ ಎಲಳು ಮಾತ್ರ

ನುತೆ ನಡೆಯಲಿಲ್ಲ. ಮಿಸ್ ಬೊಬಿಟಳಿಗಿಂತ ಮೊದಲು ಹನ್ನೊಂದು ಸ್ಪರ್ಧಾಳುಗಳು ಬಂದು ಹೋದರು. ಯುಸ್ಟೇಶಿಯಾ ಬರ್ನಸ್ಟೈನ್ನಳು ಸಿನೇಮಾ ತಾರೆಯರನ್ನು ಅನುಕರಿಸಿದಳು. ಮತ್ತೆ ಕೆಲವರು ಹಾಗೆಯೇ ಮಾಡಿದರು. ಇನ್ನೊಬ್ಬ ಅಸಾಮಾನ್ಯವಾದ ದೊಡ್ಡ ಕಿವಿಯ ಹಳೆಯ ವುಲ್ಲನ್ ಹೇಟ ಹಾಕಿಕೊಂಡ. ಬಸ್ಟರ ರಿಲೇ ಎನ್ನುವವನು ವಾಲ್ಟರ್ಝಿಂಗ ಮಾಟಿಲ್ಡಾವನ್ನು (ಆತನು ಹಳ್ಳಿಗಾಡಿನವನು) ಆಡಿದನು. ಅಲ್ಲಿಯ ವರೆಗೆ ಅವನೇ ಉತ್ತಮವಾದವನೆಂದು ಜನರ ಭಾವನೆಯಾಗಿತ್ತು. ಜನರ ಭಾವನೆಯೇನೋ ಸರಿಯಾಗಿಯೇ ಇದ್ದಿತ್ತು. ಜನ ಹೆಚ್ಚು ಚಪ್ಪಾಳೆಗಳನ್ನು ಆತನಿಗೆ ದಯಪಾಲಿಸಲಿಲ್ಲ. ಪ್ರೀಚರ ಸ್ಟಾರನು ಮಾತ್ರ ಸುಮ್ಮನಿದ್ದ. ಆತನು ನಮಗಿಂತ ಎರಡು ಸಾಲು ಮುಂದೆ ಕುಳಿತಿದ್ದು ಪ್ರತಿಯೊಬ್ಬ ಸ್ಪರ್ಧಾಳುವಿನ ಆಟವನ್ನು ಕುರಿತು ಕತ್ತಿಯಂತೆ ಕಿರುಚಿ ತನ್ನ ತಿರಸ್ಕಾರವನ್ನು ಸೂಚಿಸುತ್ತಿದ್ದ. ಮಿಸ್ ಬೊಬಿಟಳ ಆಟವನ್ನು ಮಾತ್ರ ಆತನು ಚಪ್ಪಾಳೆ ತಟ್ಟಿ ಪ್ರಶಂಸಿಸಿದನು. ಸೈತಾನನು ಅವಳ ಪಕ್ಕಕ್ಕೆ ಇದ್ದ. ಇದಲ್ಲದೇ ಅವಳ ಆಟವು ತುಂಬ ಚೆನ್ನಾಗಿತ್ತು. ಅವಳು ಸೊಂಟವನ್ನು ಕುಲುಕಿಸುತ್ತ, ಕಣ್ಣುಗಳನ್ನು ಕುಣಿಸುತ್ತ ಬಂದೇ ಬಿಟ್ಟಳು. ಅದು ಅವಳ ಶಾಸ್ತ್ರೀಯ ನರ್ತನಗಳ ಪೈಕಿ ಅಲ್ಲವೆಂದು ನೀವು ಊಹಿಸಬಹುದಿತ್ತು. ಮುಗಿಲ ನೀಲಿ ಬಣ್ಣದ ಸ್ಕರ್ಟಿನ ತುದಿಗಳನ್ನು ಹಿಡಿದುಕೊಂಡು ಅವಳು ಲೀಲಾಜಾಲವಾಗಿ ರಂಗಭೂಮಿಯ ಒಂದು ಕಡೆಯಿಂದ ಇನ್ನೊಂದು ಕಡೆಗೆ ಪಾದಗಳನ್ನು ಇಡುತ್ತ ಸರಿದಾಡುತ್ತಿದ್ದಳು. ತನ್ನ ತೊಡೆಗಳನ್ನು ತಟ್ಟಿಕೊಳ್ಳುತ್ತ ಕುಣಿದಳು. "ಇಂತಹ ಚುರುಕು ಕುಣಿತವನ್ನು ನಾನು ಎಂದಿಗೂ ನೋಡಿಲ್ಲ" ಎಂದು ಬಿಲಿಬೋಬ ಹೇಳಿದನು. ಮಿಸ್ ಬೊಬಿಟಳು ತುಂಬ ಮುದ್ದುಮುದ್ದಾಗಿ ಕಾಣುತ್ತಿರುವಳೆಂದು ಚಿಕ್ಕಿ ಎಲಳೂ ಒಪ್ಪಿಕೊಳ್ಳಬೇಕಾಯಿತು. ಅವಳು ಗರಗರನೆ ಕುಣಿಯತೊಡಗಿದ ಕೂಡಲೇ ಪ್ರೇಕ್ಷಕಗಣವು ಹರ್ಷೋನ್ಮತ್ತವಾಯಿತು. ಚಪ್ಪಾಳೆಗಳ ಸುರಿಮಳೆ, "ಇನ್ನೊಮ್ಮೆ, ಇನ್ನೊಮ್ಮೆ" ಎನ್ನುವ ಕೂಗು. ಅವಳು ಇನ್ನೊಮ್ಮೆ, ಸಂಡೇ ಸ್ಕೂಲಿನಲ್ಲಿ ಕಲಿತ ಮಿಸ್ ಎಡಲೇಡಳಿಗೆ "ಇನ್ನು ಜೋರಾಗಿ" ಎಂದು ತಗ್ಗಿದ ಧ್ವನಿಯಲ್ಲಿ ಹೇಳುತ್ತ, ಅದೇ ಕುಣಿತವನ್ನು ಮಾಡಿ ತೋರಿಸಿದಳು. "ಆಯ್ ವಾಸ್ ಬಾರ್ನ ಇನ್ ಚಾೖನಾ, ರೇಜಡ್ ಇನ್ ಜಪಾನ್.... ..." ಅವಳು ಹಾಡಿದ್ದನ್ನು ನಾವೆಂದೂ

ಕೇಳಿದ್ದಿಲ್ಲ. ಅವಳದು ತುಂಬ ಮಧುರ ಶಾರೀರ......."ಇಫ್ ಯು ಡೋಂಟ ಲಾಯ್ಕ ಮ್ಯಾ ಪೀಚಸ್ ಸ್ಟೆ ಎವೇ ಫ್ರೊಮ್ ಮಾಯ ಓ-ಹೊ-ಓ-ಹೊ!" ಚಿಕ್ಕಿಯು ಆಶ್ಚರ್ಯದಿಂದ ಮೂಕಳಾದಳು. ಪುನಃ ಮಿಸ್ ಬೊಬಿಟಳು ಒಂದು ಸಲ ಚಿಮ್ಮಿ ತನ್ನ ಸ್ಕರ್ಟನ್ನು ಮೇಲಕ್ಕೆ ಹಾರಿಸಿ ಒಳಗಿನ ನೀಲಿ ಲೇಸಿನ ಅಂಡವೆರನ್ನು ತೋರಿಸಿದಳು. ಬೀಸಣಿಕೆ ಇಲ್ಲದ ಬೀಸಣಿಕೆಯ ಕುಣಿತಕ್ಕಾಗಿ ಮೀಸಲಾಗಿಟ್ಟ ಹುಡುಗರ ಅನೇಕ ಸಿಳ್ಳುಗಳು ಬೊಬಿಟಳಿಗೆ ದೊರೆತವು. ಅವಳಾದರೂ ಕೊನೆಗೆ "ಜಿಪ್ ಜಿಪ್" ಎನ್ನುತ್ತ "ಉಪಾಧ್ಯಾಯನಿಗೆ ಒಂದು ಸೇಬುಹಣ್ಣು" ಎನ್ನುವ ಧಾಟಿಯಲ್ಲಿ ತನ್ನ ವಾಡಿಕೆಯ ಸ್ಥಾನದ ಉಡುಪಿನಲ್ಲಿ ಕುಣಿದಳು. ಮಿಸ್ ಎಡ ಲೇಡಳು ತಾರಸ್ವರದಲ್ಲಿ ಪಿಯಾನೋ ಬಾರಿಸತೊಡಗಿದಳು. ಅಷ್ಟರಲ್ಲಿ ಸೋದರಿ ರೊಸಾಲ್ಬಾ ರೋಮನ್ ಮೇಣಬತ್ತಿಯನ್ನು ಹಿಡಿದುಕೊಂಡು, ರಂಗಭೂಮಿಗೆ ನುಗ್ಗಿ, ಕುಣಿತದ ಭರದಲ್ಲಿದ್ದ ಬೊಬಿಟಳಿಗೆ ಕೊಟ್ಟಳು. ಅವಳು ಆ ಮೇಣಬತ್ತಿಯನ್ನು ತಿರುಗಿಸುತ್ತಾ ಇನ್ನೂ ಕುಣಿದಳು. ನಂತರ "ಸ್ಟಾರ ಸ್ಪೆಂಗಲ್ಡ ಬೆನರ್" ವನ್ನು ಪ್ರಾರಂಭಿಸಿದಕೂಡಲೇ ನಾವೆಲ್ಲರೂ ಎದ್ದು ನಿಂತೆವು. ಚಿಕ್ಕಿ ಏಲಳು ಅಮೇರಿಕದ ರಂಗಭೂಮಿಯ ಮೇಲೆ ಅಷ್ಟು ಆಕರ್ಷಕವಾದ ಕುಣಿತದ ದೃಶ್ಯವನ್ನೇ ನೋಡಲಿಲ್ಲವೆಂದು ಉದ್ಗರಿಸಿದಳು.

ನಿಜವಾಗಿಯೂ ಅವಳು ಹಾಲಿವುಡ್ಡಿನ ತಾರೆಯ ಪರೀಕ್ಷೆಯನ್ನು ಕೊಡಲು ಯೋಗ್ಯಳಾದವಳು. ಸ್ಪರ್ಧೆಯಲ್ಲಿ ಅವಳು ಜಯಶಾಲಿಯಾದ್ದರಿಂದ ಆ ಅವಕಾಶವು ಅವಳಿಗೆ ಸಿಕ್ಕೀತೆಂದು ನಾವು ನಿರ್ಧರಿಸಿದ್ದೆವು. ಮೆನಿ ಫಾಕ್ಸನು "ಮುದ್ದು ಹುಡುಗಿ ನಿನ್ನಲ್ಲಿ ತಾರೆಯಾಗುವ ಸತ್ವವಿದೆ" ಎಂದನು. ಆದರೆ ಆತನು ಕೇವಲ ಆಶ್ವಾಸನಗಳನ್ನು ಕೊಟ್ಟು ಬೇರೆ ಊರಿಗೆ ಮರಳಿದ್ದ "ಟಪಾಲು ನೋಡಿ. ನನ್ನ ಕಡೆಯಿಂದ ವರ್ತಮಾನ ತಿಳಿಯುತ್ತದೆ." ಎಂದು ಅವನು ಅವರಿಗೆಲ್ಲ ಹೇಳಿದ್ದ. ಹಣವನ್ನು ಕೊಟ್ಟ ತರುಣರಿಗೆಲ್ಲ ಆಶ್ವಾಸನವನ್ನು ಕೊಟ್ಟಿದ್ದನು. ಮಿಸ್ ಬೊಬಿಟಳಿಗೂ ಅದೇ ಪ್ರಕಾರದ ಆಶ್ವಾಸನ ಸಿಕ್ಕಿತು. ನಮ್ಮೂರಿನಲ್ಲಿ ಪ್ರತಿ ದಿನ ಮೂರು ಸಲ ಅಂಚೆ ಬಟವಾಡೆಯಾಗುತ್ತದೆ. ಈ ಸಾಧಾರಣ ಉತ್ಸಾಹೀ ಮಂಡಳಿಯು ದಿನವೂ ಪೋಸ್ಟಾಫೀಸಿನ ಬಳಿ ನೆರೆಯುತ್ತಿತ್ತು. ಉತ್ಸಾಹಿ ತಂಡವು ದಿನ ದಿನಕ್ಕೂ ನಿರುತ್ಸಾಹಿಯಾಗು

ತ್ತಿತ್ತು. ಎಂದಾದರೂ ಯಾವುದಾದರೂ ಪತ್ರ ಅವರ ಮೇಲ ಪೆಟ್ಟಿಗೆಯಲ್ಲಿ ಬಿದ್ದರೆ ಅದನ್ನು ಎತ್ತಿಕೊಳ್ಳುತ್ತಿದ್ದಾಗ ಅವರ ಕೈಗಳು ನಡುಗುತ್ತಿದ್ದವು. ದಿನಗಳು ಉರುಳಿದಂತೆ ಏನೋ ಒಂದು ಬಗೆಯ ಮೌನವು ಅವರನ್ನು ಆವರಿಸಿತು. ಇನ್ನೊಬ್ಬನು ಏನು ಚಿಂತಿಸುತ್ತಿರುವನೆಂದು ಮತ್ತೊಬ್ಬನಿಗೆ ಗೊತ್ತಿತ್ತು. ಆದರೆ ಒಡೆದು ಹೇಳುವ ಧೈರ್ಯವು ಮಾತ್ರ ಯಾರಿಗೂ, ಮಿಸ್ ಬಿಲಿಬೋಬಳಿಗೂ ಇದ್ದಿಲ್ಲ. ಪೋಸ್ಟ ಮಿಸ್ಟ್ರೆಸ್ ಮಾತ್ರ ಸ್ಪಷ್ಟವಾಗಿ ಮಾತನಾಡಿದಳು. "ಆ ಮನುಷ್ಯ ಶುದ್ಧ ಪೋಕರಿ. ಮೊದಲಿನಿಂದಲೂ ಅಂಥವನೆಂದು ನಾನು ಬಲ್ಲೆನು." ಎಂದಳು. "ಪುನಃ ನೀವು ಸುಮ್ಮನೆ ಈ ಕಡೆಗೆ ಬಂದರೆ ನಾನು ನನ್ನನ್ನು ಗುಂಡಿಕ್ಕಿಕೊಂಡು ಆತ್ಮಹತ್ಯೆ ಮಾಡಿಕೊಳ್ಳುವೆ." ಎಂದಳು.

ಆ ನಂತರ ಎರಡು ವಾರದ ಮೇಲೆ ಮಿಸ್ ಬೊಬಿಟಳೇ ಆ ಅಸಹ್ಯ ಮೌನವನ್ನು ಭೇದಿಸಿದಳು. ಉಳಿದವರು ಅಪೇಕ್ಷಿಸಿದ್ದಕ್ಕಿಂತ ಅವಳ ಕಣ್ಣುಗಳು ನಿಸ್ತೇಜವಾಗಿದ್ದವು. ಒಂದು ದಿನ ಕೊನೆಯ ಬಟವಾಡೆಯ ನಂತರ ಅವಳ ಕೋಪವೆಲ್ಲ ಹೊರಚಿಮ್ಮಿತು. "ಒಳ್ಳೇದು ಹುಡುಗರೇ, ಇದೇ ಸೀಡೆ (ಲಿಂಚ)" ಎಂದು ಅವಳು ಆ ತಂಡವನ್ನು ಅಟ್ಟುತ್ತ ಮನೆಗೆ ಮರಳಿದಳು. ಇದೇ ಈಗ ಇಂದಿಗೂ ಹೆಚ್ಚು ಸಾಮಾಜಿಕ ರೂಪದಲ್ಲಿ ಪ್ರಸಿದ್ಧವಾಗಿರುವ ಮೆನಿಫಾಕ್ಸ ಹೆಂಗಸುನ್ನನ ಕ್ಲಬ್ಬಿನ ಮೊದಲನೇ ಸಭೆ. ಆ ಮೆನಿಫಾಕ್ಸ ಮಾತ್ರ ಹಿಂದೆಯೇ ಸೆರೆಸಿಕ್ಕು ಗಲ್ಲಿಗೇರಿಸಲ್ಪಟ್ಟನು. ಆ ಕೆಲಸದ ಮುಖ್ಯ ಭಾಗವೆಲ್ಲ ಮಿಸ್ ಬೊಬಿಟಳಿಗೇ ಸಲ್ಲಬೇಕು. ಒಂದೇ ಒಂದು ವಾರದೊಳಗೆ ಇಡೀ ದಕ್ಷಿಣ-ಅಮೇರಿಕದೊಳಗಿನ ಶೆರೀಫರಿಗೆ ಮೆನಿಫಾಕ್ಸನ ೩೦೦ ವರ್ಣನೆಗಳನ್ನು ಬರೆದು ರವಾನಿಸಿದ್ದಳು. ಅದಲ್ಲದೇ ದೊಡ್ಡ ಪಟ್ಟಣದೊಳಗಿನ ವೃತ್ತಪತ್ರಿಕಗಳಿಗೆ ಸಹ ಬರೆದಳು. ಅದು ಬಹುಜನ ಸಮಾಜದ ಲಕ್ಷ್ಯವನ್ನು ಸೆಳೆಯಿತು. ಪರಿಣಾಮವಾಗಿ ನಾಲ್ವರು ಹುಡುಗರಿಗೆ ಯುನೈಟೆಡ್ ಫ್ರುಟ ಕಂಪನಿಯಲ್ಲಿ ಒಳ್ಳೇಯ ನೌಕರಿಗಳು ದೊರೆತವು. ತನ್ನ ವಂಚನೀಯ ನಾಟಕವನ್ನಾಡುತ್ತಿದ್ದ ಆರಕಾನಾಸದ ಆಸ್ಪತ್ರೆಯಲ್ಲಿ ಮೆನಿಫಾಕ್ಸನು ಸೆರೆಸಿಕ್ಕನು. ಆಗ ಅಮೇರಿಕಾದ ಸನ್‌ಬೀಮ ಸಂಸ್ಥೆಯಿಂದ ಮಿಸ್ ಬೊಬಿಟಳಿಗೆ ಗುಡ್ ಡೀಡ್ ಮೆರಿಟ್ ಇನಾಮು ದೊರೆಯಿತು. ಯಾವುದೋ ಕಾರಣಕ್ಕಾಗಿ ತನಗೆ ಅದರಿಂದ ರೋಮಾಂಚನವಾಗಲಿಲ್ಲ ಎನ್ನುವ ವಿಷಯವನ್ನು ಜಗತ್ತಿಗೆ

ಸಾರಿದಳು. "ಆ ಸಂಸ್ಥೆಯನ್ನೇನು ನಾನು ಸಿಫಾರಸು ಮಾಡಲಾರೆ. ಒಳ್ಳೆಯ ಕೆಲಸ (ಉಪಕಾರ)ವೆಂದರೇನು ? ಯಾರೂ ನಿಮ್ಮನ್ನು ಮೋಸಗೊಳಿಸದಂತೆ ನೋಡಿಕೊಳ್ಳಿ. ಪರೋಪಕಾರವೆಂದರೆ ನಿಮಗೆ ಪ್ರತಿಯಾಗಿ ಏನಾದರೂ ದೊರೆಯಬೇಕೆಂಬ ಆಸೆಯಿಂದ ನೀವು ಮಾಡುವ ಕೆಲಸ. ಆ ಸಂಸ್ಥೆಯಲ್ಲಿ ಒಳ್ಳೆಯದೂ ಸ್ತ್ರೀ ಸಹಜವಾದುದೂ ಇಲ್ಲ." ಆದರೆ ಅವಳು ಹೇಳಿದ್ದೆಲ್ಲ ತಪ್ಪಾಗಿತ್ತೆಂದು ಹೇಳಲು ಸಂತೋಷವಾಗುತ್ತದೆ. ಅವಳಿಗೆ ಯೋಗ್ಯವಾದ ಬಹುಮಾನವು ಸಹಜವಾಗಿ ಸಕಾಲದಲ್ಲಿ ಪ್ರೀತಿಯಿಂದಲೂ ಸಹಾನುಭೂತಿಯಿಂದಲೂ ದೊರೆಯಿತೆಂದು ಹೇಳಬೇಕು. ಒಂದು ವಾರದ ಹಿಂದೆ ಮೆನಿಫಾಕ್ಸ ಸಂಸ್ಥೆಯಿಂದ ಮೋಸದ ವ್ಯವಹಾರದಲ್ಲಿ ಸಿಲುಕಿದ ಹುಡುಗರಿಗೆಲ್ಲ ಸಲ್ಲತಕ್ಕ ಹಣವು ಮರಳಿ ಬಂದಿತು. ಆಗ ವೃಥ ನಿಶ್ಚಯದ ಹೆಜ್ಜೆ ಹಾಕುತ್ತ ಹೆಂಗ ಮನ್ನ ಕ್ಲಬ್ಬಿಗೆ (ಅಲ್ಲಿ ಪ್ರತಿ ಗುರುವಾರ ಮದ್ಯ ಕುಡಿಯುವದು ಪೋಕರ್ ಆಡುವದು ನಡೆಯುತ್ತಿತ್ತು.) ಬಂದು ಹುಡುಗರನ್ನು ಉದ್ದೇಶಿಸಿ ಹೇಳಿದಳು. "ಹುಡುಗರೇ, ಈ ಹಣವು ಎಂದಾದರೂ ಮರಳಿ ಬರುತ್ತದೆಂದು ಕನಸಿನಲ್ಲಾದರೂ ಎಣಿಸಿದ್ದಿರಾ? ಈ ಹಣವನ್ನು ನೀವು ಮತ್ತೆ ಸಂಪಾದಿಸಿರುವದರಿಂದ ಇದನ್ನು ಸದುಪಯೋಗ ಪಡಿಸಿ" ಎಂದಳು. ಅಂದರೆ ಅವರೆಲ್ಲರೂ ತಮ್ಮ ಹಣವನ್ನು ಕೂಡಿಸಿ ಅವಳ ಹಾಲಿವುಡ್ ಪ್ರವಾಸಕ್ಕೆ ಸಹಾಯ ಮಾಡಬೇಕೆಂದೂ ಅವಳು ತಾರೆಯಾದ ನಂತರ ಅವಳ ಜೀವನಮಾನದ ಆದಾಯದ ಮೇಲೆ ಅವರೆಲ್ಲರಿಗೂ ಶೇಕಡಾ ಇಂತಿಷ್ಟು ಲಾಭವು ದೊರೆತು ಅವರು ಶ್ರೀಮಂತರಾಗಬಹುದೆಂದೂ ಅವಳ ಸೂಚನೆಯಿತ್ತು. "ಈ ಪ್ರದೇಶದಲ್ಲಾದರೂ ಶ್ರೀಮಂತರೆಂದು ಕೊಳ್ಳಬಹುದು" ಎಂದಳು. ಆದರೆ ಮಿಸ್ ಬೊಬಿಟ್ ನಿಮ್ಮನ್ನೇ ನೋಡುತ್ತಿರುವಾಗ ಹೇಗೆ ತಾನೇ ಬೇಡವೆನ್ನಬಹುದು ?

ಸೋಮವಾರದಿಂದ ಬೇಸಿಗೆ ಬಿಸಿಲಿಲ್ಲ. ಬರಿಯಲ್ಲಿ ಬೀಳ ಹೊಮ್ಮಿದ ಜಡಿಮಳೆಯು ಸುರಿಯುತ್ತಿದೆ. ರಾತ್ರಿಯೆಲ್ಲ ಕಗ್ಗತ್ತಲೆ. ಎಲ್ಲೆಲ್ಲೂ ನೀರಿನ ನಿನಾದ. ನಿದ್ದೆಗೆ ಸಂಚಕಾರ. ಬಲಿಬೋಬಿ ಎಚ್ಚರವಾಗಿದ್ದಾನೆ. ಕಣ್ಣುಗಳು ತೇವಗೊಂಡಿಲ್ಲ. ಆದರೂ ಮಾಡುವದೆಲ್ಲ ಸಿರಾಪ, ಸಿರುತ್ತಾನೆ ಪ್ರಕಟಿಸುತ್ತದೆ. ಗಂಟೆಯ ನಾಲಿಗೆಯಂತೆ ಗಟ್ಟಿಯಾಗಿದೆ ಅವನ ನಾಲಿಗೆ. ಇದನ್ನು ಆತನು ಹೇಗೆ ಸಹಿಸುವದು ? ಮಿಸ್ ಬೊಬಿಟ್ ಹೊರಟು ಹೋಗುತ್ತಿದ್ದಾಳೆ.

ಅವಳು ಅದಕ್ಕಿಂತ ಮಿಗಿಲಾದವಳು. ಯಾವುದಕ್ಕಿಂತ ? ಅವಳು ಹದಿಮೂರು ವರ್ಷದವಳು ಪ್ರಣಯಾಸಕ್ತಳು ಎನ್ನುವದಕ್ಕಿಂತ. ಅವನ ಜೀವನದಲ್ಲಿ ಪ್ರವೇಶಿಸಿದ ಅನೇಕ ವಸ್ತುಗಳಿಗಿಂತ ಆಕೆ ವಿಲಕ್ಷಣವಾಗಿದ್ದಳು. ಪೆಕಾನ ಮರದಂತೆ ಅಥವಾ ಅವನ ಮೆಚ್ಚಿಕೆಯ ಪುಸ್ತಕಗಳಿಗಿಂತ ಜನರನ್ನು ಕುರಿತು ಅವನು ಎಚ್ಚರದಿಂದ (ಅವರನ್ನು ನೋಯಿಸದಂತೆ) ಇರುತ್ತಿದ್ದ. ಅವಳನ್ನು ಅವನು ಯಾರಿಗೂ ತೋರಿಸಲಾರನು. ಆ ಕತ್ತಲೆಯ ಮಳೆಯ ಹನಿಗಳ ಸಪ್ಪಳದೊಂದಿಗೆ ಅವಳ ಮಧುರ ಗೀತವು ಕೇಳಿ ಬರುತ್ತಿತ್ತು. ಅದು ನಿಜವಾಗಿಯೂ ಇನ್ನೆಂದಿಗೂ ಕೇಳಿಸಲಿಕ್ಕಿಲ್ಲವೇ ? ಮಧ್ಯಾಹ್ನದ ಸಮಯ ನೆರಳುಗಳು ಸಂಕುಚಿತವಾಗುವಾಗ ಲಾನಿನಲ್ಲಿ ಗಾಳಿಗೆ ತೂರಾಡುವ ಅಂದವಾದ ರಿಬ್ಬನಿನಂತೆ ಅವಳು ನಮ್ಮ ಕಣ್ಣೆದುರಿಗೆ ಸುಳಿದಾಡುತ್ತಿಲ್ಲವೇ ? ಅವಳು ಬಿಲಿಬೋಬನನ್ನು ಕಂಡು ನಕ್ಕಳು. ಅವನ ಕೈ ಹಿಡಿದು ಮುದ್ದಿಸಿದಳು. "ನಾನು ಸಾಯಲು ಹೋಗುವದಿಲ್ಲ" ಎಂದಳು. " ನೀನೂ ಅಲ್ಲಿಗೆ ಬರಬಹುದು. ನಾವೆಲ್ಲ ಒಂದು ಮರಡಿಯನ್ನೇರಿ— ನಾನು ನೀನೂ ರೊಸಾಲ್ಬಾ ಒಟ್ಟಾಗಿ ಉಳಿಯೋಣ." ಆದರೆ ಆ ಕನಸು ನೆನಸಾಗಲಿಕ್ಕಿಲ್ಲವೆಂದು ಬಿಲಿಬೋಬನು ಅರಿತಿದ್ದ. ಹಾಗೆಂದು ಕತ್ತಲೆಯನ್ನು ತೂರಿ ಬರುವ ಸಂಗೀತವನ್ನು ಕೇಳಿ ಆತನು ತನ್ನ ತಲೆಯನ್ನು ಹಣೆಗೆ ಒತ್ತಿಕೊಳ್ಳುತ್ತಿದ್ದ.

ನಿನ್ನೆ ಮಾತ್ರ ಒಂದು ವಿಲಕ್ಷಣ ನಗುವನ್ನು ಹೊಮ್ಮಿಸಿದ. ಏಕೆಂದರೆ ನಿನ್ನೆಯೇ ಅವಳು ಹೊರಟು ಹೋಗುವ ದಿನ. ಮಧ್ಯಾಹ್ನದ ಸೂರ್ಯನು ಗಾಳಿಯೊಳಗಿನಿಂದ ಯಾವುದೋ ವಿಲಕ್ಷಣವಾದ ಸುವಾಸನೆಯನ್ನು ಹರಡಿದ್ದ. ಚಿಕ್ಕ ಎಲಳ ಗುಲಾಬಿ ಹೂವುಗಳು ಪುನಃ ಅರಳತೊಡಗಿದ್ದವು. ಅವಳು ಆಶ್ಚರ್ಯಕರವಾದ ಮಾತನ್ನಾಡಿದಳು. ಅಂದರೆ ಬಿಲಿಬೋಬನು ಒಂದೆರಡು ಹೂವುಗಳನ್ನು ಕೊಯ್ದು ಮಿಸ್ ಬೊಬಿಟಳಿಗೆ ಕಾಣಿಕೆಯಾಗಿ ಕೊಡಬಹುದೆಂದು ಒಪ್ಪಿಕೊಂಡಳು. ಮಧ್ಯಾಹ್ನವೆಲ್ಲ ಮಿಸ್ ಬೊಬಿಟಳು ಪೌಳಿಯಲ್ಲಿ ಕುಳಿತಿದ್ದಳು. ಅವಳ ಶುಭಕಾಮನೆಯನ್ನು ಮಾಡಬಂದವರೆಲ್ಲ ಅವಳನ್ನು ಸುತ್ತುವರಿದಿದ್ದರು. ಅವಳು ಮಹಾ ಸಮಾರಂಭಕ್ಕೆ ಹೋಗುತ್ತಿದ್ದಂತೆ ಅವಳು ಶುಭ್ರ ವಸ್ತ್ರಧಾರಿಯಾಗಿದ್ದಳು. ಕೈಯಲ್ಲಿ ಬೆಳ್ಳಗಿನ ಕೊಡೆಯಿತ್ತು. ರೊಸಾಲ್ಬಾ ಅವಳಿಗೆ ಒಂದು ಕರವಸ್ತ್ರವನ್ನು ಕೊಟ್ಟಳು. ಆದರೆ ಉಕ್ಕಿಬರುವ ಕಣ್ಣೀ

ರನ್ನು ತಡೆಯಲು ಅದನ್ನು ತಿರುಗಿ ತೆಗೆದುಕೊಂಡಳು. ಇನ್ನೊಬ್ಬ ಹುಡುಗಿಯು ಪ್ರವಾಸದಲ್ಲಿ ತಿನ್ನಲಿಕ್ಕೆಂದು ಒಂದು ಬೇಯಿಸಿದ ಕೋಳಿಮರಿಯನ್ನು ತಂದು ಕೊಟ್ಟಳು. ಆದರ ಅದರ ಒಳಗೆ ಸ್ವಚ್ಛಮಾಡಿದ್ದಿಲ್ಲವೆಂದು ಕಾಣುತ್ತದೆ. ಬೊಬಿಟಳ ತಾಯಿಯು ಇದುವರೆಗೆ ಸುಮ್ಮನಿದ್ದಳು. ಅವಳು ಬಾಯಿಬಿಟ್ಟು "ಇದೇನು ಮಹಾ? ಕೋಳಿಮರಿಯೆಂದರೆ ಕೋಳಿಮರಿಯೇ" ಎಂದು ಹೇಳಿದಳು. ಆಗ ಒಂದೇ ಒಂದು ಸುಖಕರವಾದ ಪ್ರಸಂಗವೊದಗಿತು. ಪ್ರೀಚರಸ್ಟಾರನು ಒಂದು ಮೂಲೆಯಲ್ಲಿ ಸುಳಿದಾಡುತ್ತಿದ್ದ. ಒಮ್ಮೆ ತುಸು ತಡೆದು ನಾಣ್ಯವೊಂದನ್ನು ಹಾರಿಸುತ್ತಿದ್ದ. ಆ ನಂತರ ಯಾವುದಾದರೂ ಮರದ ಹಿಂದೆ ಅವಿತುಕೊಳ್ಳುತ್ತಿದ್ದ. ಯಾರೂ ತನ್ನನ್ನು ನೋಡಬಾರದೆಂದು ಆತನ ಇಚ್ಛೆ ಇದ್ದಂತೆ ಕಾಣಿಸುತ್ತಿತ್ತು. ಎಲ್ಲರನ್ನೂ ಭಯಾತುರರನ್ನಾಗಿ ಮಾಡಿದ. ಬಸ್ಸು ಬಿಡುವ ಇಪ್ಪತ್ತು ನಿಮಿಷ ಮುಂಚೆ ಸುಳಿದಾಡುತ್ತ ಬಂದು ನಮ್ಮ ಗೇಟಿಗೆ ಒರಗಿಕೊಂಡು ನಿಂತ. ಬಿಲಿಬೋಬನು ಇನ್ನೂ ಗುಲಾಬಿ ಹೂವುಗಳನ್ನು ಕೊಯ್ಯುತ್ತಲೇ ಇದ್ದ. ಒಂದು ಸಮಾರಂಭಕ್ಕೆ ಸಾಲುವಷ್ಟು ಹೂವುಗಳನ್ನು ಆತ ರಾಶಿಮಾಡಿದ್ದ. ಅವುಗಳಿಂದ ಹೊರಡುವ ಸುವಾಸನೆ ಗಾಳಿಯಲ್ಲಿ ತೂರಿಕೊಂಡು ಬರುತ್ತಿತ್ತು. ಆತನು ತಲೆಯನ್ನೆತ್ತಿ ನೋಡುವದರೊಳಗೆ ಪ್ರೀಚರನು ಆತನನ್ನೇ ದಿಟ್ಟಿಸಿ ನೋಡತೊಡಗಿದ. ಅವರು ಪರಸ್ಪರರನ್ನು ನೋಡಿಕೊಳ್ಳುತ್ತಿದ್ದಾಗ ಕಾಮನಬಿಲ್ಲಿನಿಂದೊದಗಿದ ಆಲ್ಹಾದಕರವಾದ ತುಂತುರ ಮಳೆಯು ಪ್ರಾರಂಭವಾಯಿತು. ಪ್ರೀಚರನು ಸುಮ್ಮನೆ ಬಿಲಿಬೋಬನ ಬಳಿಸಾರಿ ಎರಡು ಪುಷ್ಪ ಗುಚ್ಛಗಳನ್ನು ಮಾಡುವದರಲ್ಲಿ ನೆರವಾದನು. ಅವರಿಬ್ಬರೂ ಅವುಗಳನ್ನು ರಸ್ತೆಯ ಪಕ್ಕದಲ್ಲಿ ತೆಗೆದುಕೊಂಡು ಹೋಗಿ ಇಟ್ಟರು. ಆಚೆ ಜನ ಗುಜುಗುಜು ಮಾತನಾಡುತ್ತಿದ್ದರು. ಮಿಸ್ ಬಾಬಿಟಳು ಹೂವುಗಳನ್ನು ತರುತ್ತಿದ್ದ ಆ ಹುಡುಗರನ್ನು ಕಂಡು ತೋಳುಗಳನ್ನು ಚಾಚಿ ಮೆಟ್ಟಲುಗಳನ್ನು ಇಳಿದು ಧಾವಿಸಿ ನಡೆದಳು. ಹುಡುಗರಿಬ್ಬರೂ ಗುಲಾಬಿ ಹೂವುಗಳೆಂಬ ನಕ್ಷತ್ರಗಳ ಮಧ್ಯೆ ಚಂದ್ರರಂತೆ ಒಪ್ಪುತ್ತಿದ್ದರು. ನಾವು "ಮಿಸ್ ಬೊಬಿಟ್ ಬೊಬಿಟ್" ಎಂದು ಗಟ್ಟಿಯಾಗಿ ಕೂಗಿದೆವು. ಆದರೆ ಚಂದ್ರರಂತಹ ಗುಲಾಬಿ ಹೂವುಗಳ ಕಡೆಗೆ ಧಾವಿಸುತ್ತಿದ್ದ ಬೊಬಿಟಳಿಗೆ ನಮ್ಮ ಮಾತುಗಳು ಕೇಳಿಸಲಿಲ್ಲವೆಂದು ತೋರುತ್ತದೆ. ಆಗಲೇ ಆರು ಘಂಟೆಯ ಬಸ್ಸಿನ ಕೆಳಗೆ ಬಿದ್ದು ಅವಳು ಅಪಘಾತಕ್ಕೀಡಾದಳು.

# ದೋಣಿ

ಸ್ಟೀಫನ್ ಕ್ರೇನ

ಅನು: ಎಸ್. ಎನ್. ಕೋಡಕಣಿ

# ಸ್ಟೀಫನ್ ಕ್ರೇನ (1871–1900)

'ರೆಡ್ ಬೆಜ್ ಆಫ್ ಕರೇಜ' ಎಂಬ ಒಂದೇ ಒಂದು ಕಾದಂಬರಿಯಿಂದ ಅವನ ಹೆಸರು ಅಮೇರಿಕದ ಸಾಹಿತ್ಯದಲ್ಲಿ ಶಾಶ್ವತವಾಗಿದೆ. ಹೃದಯುವನ್ನು ಅಲ್ಲೋಲ ಕಲ್ಲೋಲಗೊಳಿಸುವ, ಯಾದವೀ ಯುದ್ಧದ ಕತೆಯನ್ನೊಳಗೊಂಡ ಗ್ರಂಥದ ಈ ಲೇಖಕನು ತನ್ನ ಜೀವಮಾನದಲ್ಲಿಲ್ಲ, ಒಂದು ಪುಟ್ಟ ದಾದಾಟವನ್ನು ಸಹ ನೋಡಿದ್ದಿಲ್ಲವೆಂದರೆ ಅವನ ಅಸಾಧಾರಣ ಕಲ್ಪನಾ ಶಕ್ತಿಯನ್ನೂ ವರ್ಣನ ವೈಖರಿಯನ್ನೂ ನಾವು ಮನಗಾಣುವೆವು. 'ರೆಡ್ ಬೆಜ್' ಒಂದು ವಿಶಿಷ್ಟ ಕೃತಿ. 'ದೋಣಿ' ಮತ್ತು ಇತರ ಅನೇಕ ಕಥೆಗಳಿಂದ ಅಮೇರಿಕದ ಉತ್ತಮ ಲೇಖಕರಲ್ಲಿ ಒಬ್ಬನೆಂದು ಅವನ ಗಣನೆಯಾಗುತ್ತದೆ.

ಅವನು ನ್ಯೂಜರ್ಸಿಮ ನ್ಯೂಯಾರ್ಕದಲ್ಲಿ ಹುಟ್ಟಿದನು. ತನ್ನ ಅಲ್ಪಾಯುಷ್ಯದಲ್ಲಿ ಹಲವಾರು ಬೇನೆಗಳಿಗೂ ಎಣೆಯಿಲ್ಲದ ಸಂಕಟಗಳಿಗೂ ತುತ್ತಾಗಿದ್ದನು. ಪತ್ರಿಕಾಕರ್ತನೂ ಯುದ್ಧದ ಸುದ್ದಿಗಾರನೂ ಆಗಿದ್ದ ಅವನು ಅನೇಕ ನಿರಾಶೆಗಳನ್ನೂ ಸೋಲುಗಳನ್ನೂ ಸಹಿಸಬೇಕಾಯಿತು. ಅವನು ಸಾಹಿತ್ಯವನ್ನು ಕುರಿತು, ತನ್ನ ಕಾಲಕ್ಕೂ ಮುಂದುವರಿದ, ಉಚ್ಚ ಆದರ್ಶಗಳನ್ನಿರಿಸಿಕೊಂಡಿದ್ದನು. ಆದರೆ ಅವನ ಸಂಪಾದಕರಾರೂ ಆ ಧ್ಯೇಯಗಳನ್ನು ಲೆಕ್ಕಿಸಲಿಲ್ಲ. ಆರೋಗ್ಯದ ಸುಧಾರಣೆಗಾಗಿ ಪರದೇಶಕ್ಕೆ ಹೋಗಿದ್ದಾಗ, ಅವನು ಅಲ್ಲಿಯೇ ಮೃತಪಟ್ಟನು.

ಸುಪ್ರಸಿದ್ಧ ಲೇಖಕ ಜೊಸೆಫ ಕೊನ್ರಾಡ 'ದೋಣಿ' ಯನ್ನು ತುಂಬ ಮೆಚ್ಚಿಕೊಂಡಿದ್ದ. ಅದನ್ನು ಕುರಿತು "ದೋಣಿಯೊಳಗಿನ ನಾಲ್ವರ, ಸರಳವಾದರೂ ಹೃದಯಸ್ಪರ್ಶಿಯಾದ ಕಥೆಯು, ಅಖಿಲ ಜೀವನದ ಅನೇಕ ವಿಷಯಗಳನ್ನು ನಮ್ಮ ಕಣ್ಣೆದುರಿಗೆ ತಂದಿರಿಸುತ್ತದೆ," ಎಂದು ಬರೆದಿದ್ದಾನೆ.

# ದೋಣಿ

ಅವರಲ್ಲಿ ಯಾರೂ ಮುಗಿಲಿನ ಬಣ್ಣವನ್ನು ಗಮನಿಸಲಿಲ್ಲ. ಅವರ ಕಣ್ಣುಗಳು ಒಂದೇ ಮಟ್ಟದಲ್ಲಿ ನೋಡುತ್ತಿದ್ದುವು. ತಮ್ಮ ಕಡೆಗೆ ಉರುಳುತ್ತಿರುವ ತರಂಗಗಳ ಪರಂಪರೆಯ ಮೇಲೆ ನಟ್ಟಿದ್ದವು. ಆ ತರಂಗಗಳ ಬಣ್ಣ, ಬರೆಯುವ ಹಲಗೆಯ ನೀಲಿಯಂತಿತ್ತು. ಅವುಗಳ ಮೇಲುಗಡೆಯಲ್ಲಿ ಮಾತ್ರ ಬಿಳಿ ನೊರೆಗಳು ತುಂಬಿಕೊಂಡಿದ್ದವು. ಅವರೆಲ್ಲರೂ ಸಮುದ್ರದ ಬಣ್ಣಗಳನ್ನು ಬಲ್ಲರು ಕ್ಷಿತಿಜವು ಒಮ್ಮೆ ಸಂಕುಚಿತವಾಗುತ್ತಿತ್ತು; ಮತ್ತೆ ವಿಶಾಲವಾಗುತ್ತಿತ್ತು. ಒಮ್ಮೆ ಆಳವಾಗುತ್ತಿತ್ತು; ಮತ್ತು ಏಳುತ್ತಿತ್ತು. ಎಲ್ಲಾ ಕಾಲದಲ್ಲೂ ಅದರ ಅಂಚು ಬಂಡೆಗಳನ್ನು ಹೋಲುವ ತೆರೆಗಳ ತುದಿಗಳಿಂದ ನೂಕಲ್ಪಟ್ಟು ನೆಗ್ಗಿಹೋದಂತೆ ಒಪ್ಪುತ್ತಿತ್ತು.

ಇವರು ಕುಳಿತುಕೊಂಡ ದೋಣಿಗಿಂತ ದೊಡ್ಡ ಸ್ನಾನದ ಟಬ್ ಯಾರಲ್ಲಾದರೂ ಇದ್ದಿರಬಹುದು. ಇಂತಹ ಆ ಪುಟ್ಟ ದೋಣಿಯು ಏರುತ್ತಿರುವ ತೆರೆಗಳನ್ನೇರುತ್ತಿದ್ದಾಗ ಒಮ್ಮಿಂದೊಮ್ಮೆ ಹೆದ್ದೆರೆಗಳು ಉತ್ತುಂಗವಾಗಿ, ಭಯಾನಕವಾಗಿ ಪುಟಿದೇಳುತ್ತಿದ್ದವು. ಹಾಗೆ ಇಂತಹ ಪುಟ್ಟ ದೋಣಿಯಲ್ಲಿ ಸಮುದ್ರಯಾನ ಮಾಡುವ ಪ್ರಸಂಗದಲ್ಲಿ, ನೊರೆಯು ತುದಿಯಲ್ಲಿ ಉಳ್ಳ ಈ ದೊಡ್ಡ ದೊಡ್ಡ ತೆರೆಗಳು ಒಂದು ಮಹಾ ಸಮಸ್ಯೆಯಾಗುತ್ತವೆ.

ಅಡಿಗೆಯವನು ತಳದಲ್ಲಿ ಕುಳಿತುಕೊಂಡಿದ್ದ. ತನ್ನನ್ನೂ ಮಹಾ ಸಮುದ್ರವನ್ನೂ ಬೇರ್ಪಡಿಸುವ ಕೇವಲ ಆರು ಅಂಗುಲದಷ್ಟಿರುವ ಹಡಗಿನ ಮೇಲಿನ ಅಂಚನ್ನು ನಿರೀಕ್ಷಿಸುತ್ತಿದ್ದ. ಆತನು ತನ್ನ ಅಂಗಿಯ ತೋಳುಗಳನ್ನು ಪುಷ್ಟವಾದ ಮುಂದೋಳುಗಳ ಮೇಲಕ್ಕೇರಿಸಿಕೊಂಡಿದ್ದ. ಆತ ನೀರನ್ನು ಒತ್ತುವದಕ್ಕಾಗಿ ದೋಣಿಯ ಹೊರಗಡೆಗೆ ಬಗ್ಗಿದಾಗ ಗುಂಡಿಗಳನ್ನು ಹಾಕದಿದ್ದ ಆತನ ಬಿಳಿ ಅಂಗಿಯ ಪದರುಗಳು ಹಾರಾಡುತ್ತಿದ್ದವು.

ಎಣ್ಣೆಯವನು ದೋಣಿಯಲ್ಲಿದ್ದ ಎರಡು ಹುಟ್ಟುಗಳ ಪೈಕಿ ಒಂದರಿಂದ

ದೋಣಿಯನ್ನು ನಡಿಸುತ್ತಾ ಹಿಂಭಾಗದಲ್ಲಿ ನುಗ್ಗಿ ಬರುತ್ತಿದ್ದ ನೀರಿನಿಂದ ಉಳಿಸಿಕೊಳ್ಳಲು ಒಮ್ಮೊಮ್ಮೆ ಎದ್ದು ನಿಲ್ಲುತ್ತಿದ್ದ. ಆ ಹುಟ್ಟು ತೆಳ್ಳಗೆ ಚಿಕ್ಕ ದಾಗಿದ್ದುದರಿಂದ ಯಾವಾಗಲೋ ಮುರಿದು ಹೋಗುವಂತಿತ್ತು.

ಜತೆಗಾರನು ಇನ್ನೊಂದು ಹುಟ್ಟನ್ನು ಎಳೆಯುತ್ತ ತರಂಗಗಳನ್ನು ನೋಡುತ್ತ ತಾನು ಅಲ್ಲಿ ಹೇಗೆ ಬಂದು ಮುಟ್ಟಿದನೆಂದು ಅಚ್ಚರಿ ಪಡುತ್ತಿದ್ದ.

ಗಾಯಗೊಂಡ ನಾವಿಕನು ಮುಂಭಾಗದಲ್ಲಿ ಒರಗಿಕೊಂಡಿದ್ದ. ಯಾವ ದೊಂದು ವ್ಯಾಪಾರದಲ್ಲಿ ದಿವಾಳಿಯಾದರೆ, ಸೈನ್ಯಕ್ಕೆ ಅಪಜಯವಾದರೆ, ಅಥವಾ ನೌಕೆಯು ಅಪಾಯಕ್ಕೆ ಒಳಗಾದರೆ ಕೊನೆಗೆ ತಾತ್ಕಾಲದಲ್ಲಾದರೂ ಎಂತಹ ಧೈರ್ಯಶಾಲಿಯನ್ನೂ ತಾಳ್ಮೆಗಾರನನ್ನೂ ಕವಿಯುವ ಅನಾಸಕ್ತಿಯಂತಹ ದಟ್ಟವಾದ ನಿರಾಸೆ ಮತ್ತು ವೈರಾಗ್ಯಗಳಲ್ಲಿ ಆತನು ಮುಳುಗಿದ್ದ. ಅಂತಹ ಅಪಘಾತಗಳು ಒಮ್ಮಿಂದೊಮ್ಮೆ ಸಂಭವಿಸಿದರೆ ಎಂತಹ ಧೀರನನ್ನೂ ಎದೆಗುಂದಿಸುತ್ತವೆ. ತಜ್ಞನು ಒಂದು ದಿವಸವಾಗಲೀ ಹತ್ತು ವರುಷವಾಗಲೀ ಯಾವುದಾದರೊಂದು ಹಡಗಿನ ಮಾರ್ಗದರ್ಶಕನಾಗಿದ್ದರೆ ಆತನು ದೋಣಿಯ ಸೂಕ್ಷ್ಮಾತಿಸೂಕ್ಷ್ಮ ಭಾಗಗಳಲ್ಲಿ ಬೆರೆತುಹೋಗುತ್ತಾನೆ. ನಾವಿಕನೂ ಅರುಣೋದಯದ ನಸುಬೆಳಕಿನಲ್ಲಿ ಉದಾಸೀನ ಮುಖದ ಒಂದು ದೃಶ್ಯ ಛಾಯೆಯನ್ನು ತೋರಿಸುತ್ತಿದ್ದ. ಸ್ತಂಭದ ಒಂದು ತುಂಡಿನ ಮೇಲೆ ಕೇವಲ ಬಿಳಿಯ ಚಂಡೊಂದು ತರಂಗಗಳ ಹೊಡತಕ್ಕೆ ಅತ್ತಿಂದಿತ್ತ ಅಲುಗಾಡು ತ್ತಿತ್ತು. ಅದು ಕೆಳಗೆ ಹೋಯಿತು. ಇನ್ನೂ ಕೆಳಗೆ ಹೋಯಿತು. ಕ್ರಮೇಣ ತೀರ ಕೆಳಗೆ ಸರಿಯಿತು.—ಆ ದೃಶ್ಯವನ್ನು ಇನ್ನೂ ತನ್ನೆದುರಿಗೆ ಕಾಣುತ್ತಿದ್ದ. ಆ ನಂತರ ಅವನ ಧ್ವನಿಯು ವಿಲಕ್ಷಣ ಸ್ವಭಾವವನ್ನು ಪಡೆಯಿತು. ಅದು ನಿಶ್ಚಲವಾಗಿದ್ದರೂ ಮಾತುಗಳಿಗೂ ಕಣ್ಣೀರಿಗೂ ಮೀರಿದ ಯಾವುದೋ ಒಂದು ಗಾಢವಾದ ವೇದನೆಯಿಂದ ತುಂಬಿ ತುಳುಕುತ್ತಿತ್ತು.

ಅವನು " ಬಿಲ್ಲಿ, ದೋಣಿಯನ್ನು ಸ್ವಲ್ಪ ದಕ್ಷಿಣ-ಕಡೆಯಿಂದಲೇ ನಡಿಸು" ಎಂದನು.

ದೋಣಿಯ ಹಿಂಭಾಗದಲ್ಲಿ ಕುಳಿತುಕೊಂಡ ಎಣ್ಣೆಯವನು " ಇನ್ನೂ ಸ್ವಲ್ಪ ದಕ್ಷಿಣದ ಕಡೆಗೆ " ಎಂದನು.

ದೋಣಿಯು ಪ್ರಾಣಿಗಳಂತೆ ಅತ್ತಿತ್ತ ಜಿಗಿದಾಡುತ್ತಿತ್ತು. ಹಿಂದೆ

ಸರಿಯುತ್ತಿತ್ತು. ಮುಳುಕು ಹಾಕುತ್ತಿತ್ತು. ಪ್ರತಿಯೊಂದು ತೆರೆಯು ಬಂದಾಗ ದೋಣಿಯು ಮೇಲಕ್ಕೇಳುತ್ತಿದ್ದಾಗ ಎತ್ತರವಾದ ಬೇಲಿಯನ್ನೇರ ಬಯಸಿದ ಕುದುರೆಯಂತೆ ಕಾಣುತ್ತಿತ್ತು. ಹೀಗೆ ಆ ನೀರಿನ ಗೋಡೆಗಳ ಮೇಲೆ ಆ ದೋಣಿಯು ಏರುತ್ತಿರುವದೊಂದು ವಿಲಕ್ಷಣವಾದ ರಹಸ್ಯಮಯವಾದ ದೃಶ್ಯ ವಾಗಿತ್ತು. ಆ ತರಂಗ ಶಿಖರಗಳ ಮೇಲೆ ನೊರೆಗಳು ಕುಣಿಯುತ್ತಿದ್ದವು. ಅದನ್ನು ತಪ್ಪಿಸಿಕೊಳ್ಳಲು ದೋಣಿಯು ಗಾಳಿಯಲ್ಲಿ ಎತ್ತರವಾಗಿ ಜಿಗಿಯ ಬೇಕಾಗಿತ್ತು. ಹಾಗೆ ಒಮ್ಮೆ ಜಿಗಿದಾಡಿದ ಬಳಿಕ ಪುನಃ ವೇಗವಾಗಿ ನೀರನ್ನು ಭೇದಿಸಿಕೊಂಡು ಅಧೋಮುಖವಾಗಿ ಸಾಗುತ್ತಿತ್ತು. ಪುನಃ ನೊರೆ ತುಂಬಿದ ತೆರೆಗಳ ಸಂಕಟವನ್ನು ಎದುರಿಸಬೇಕಿತ್ತು.

ಸಮುದ್ರ ಪ್ರಯಾಣದ ವಿಶಿಷ್ಟ ಸಂಕಟವೆಂದರೆ ಹೀಗೆ. ಒಂದು ಹೆದ್ದೆರೆ ಯನ್ನು ಏರಿಳಿದು ಪಾರಾದೆವೆಂದು ಬಿಡುಗಡೆಯ ನಿಟ್ಟುಸಿರು ಬಿಡುವಂತಿಲ್ಲ. ಅದರ ಹಿಂದೆ ಇನ್ನೂ ದೊಡ್ಡ ಮತ್ತು ನೌಕೆಯನ್ನು ನೀರಿನಿಂದ ಹೊಡೆದು ಮುಳುಗಿಸಬೇಕೆಂದು ಬಯಸುವ ಹೆದ್ದೆರೆಯು ನುಗ್ಗಿ ಬರುತ್ತದೆ. ಆದುದರಿಂದ ಸಾಮಾನ್ಯವಾಗಿ ಯಾರೂ ಇಂತಹ ಹತ್ತು ಅಡಿ ಉದ್ದದ ಪುಟ್ಟ ದೋಣಿಯಲ್ಲಿ ಸಮುದ್ರದಲ್ಲಿ ಪ್ರಯಾಣ ಮಾಡುವದಿಲ್ಲ. ಆದರೆ ಹೀಗೆ ಸಣ್ಣ ದೋಣಿಯಲ್ಲಿ ಪ್ರಯಾಣ ಮಾಡುತ್ತಿದ್ದರೆ ಸಮುದ್ರದ ಅಗಾಧ ಶಕ್ತಿಯ ಅರಿವಾಗುತ್ತದೆ. ಪ್ರತಿಯೊಂದು ನೀರಿನ ಗೋಡೆಯು ಸಮೀಪ ಬಂದಂತೆ ದೋಣಿಯಲ್ಲಿದ್ದವರಿಗೆ ಇನ್ನೇನೂ ಕಾಣಿಸುತ್ತಿದ್ದಿಲ್ಲ. ಆ ತೆರೆಯೂ ಸಮುದ್ರದ ಕೊನೆಯ ಸ್ಫೋಟ ವೆಂದೋ, ಅಥವಾ ಭಯಂಕರವಾದ ನೀರಿನ ಕೊನೆಯ ಪ್ರಯತ್ನವೆಂದೋ, ನಮಗೆ ಅನಿಸದೇ ಇರುವದಿಲ್ಲ. ತರಂಗಗಳ ಚಲನವಲನದಲ್ಲಿ ಒಂದು ಭಯಾ ನಕವಾದ ಗಾಂಭೀರ್ಯವಿತ್ತು. ಅವು ಮೌನವಾಗಿ ನುಗ್ಗುತ್ತಿದ್ದವು. ಆದರೆ ಅವುಗಳ ಶಿಖರದ ಮೇಲೆ ಇದ್ದ ನೊರೆಯು ಮಾತ್ರ ಮೊರೆಯುತ್ತಿತ್ತು.

ಆ ಮಸಕು ಬೆಳಕಿನಲ್ಲಿ ಆ ಜನರ ಮುಖಗಳು ಮಂಕಾಗಿ ಕಾಣುತ್ತಿ ದ್ದವು. ದೋಣಿಯ ಹಿಂಭಾಗವನ್ನು ದಿಟ್ಟಿಸುತ್ತಿದ್ದ ಅವರ ಕಣ್ಣುಗಳು ಮಿಂಚಿದವೇನೊ. ಒಂದು ಹಡಗಿನ ಮೇಲ್ಭಾಗದ ಕೈಸಾಲೆಯಲ್ಲಿ ಕುಳಿತು ನಿರೀಕ್ಷಿಸಿದ್ದರೆ ಆ ದೃಶ್ಯವೆಲ್ಲ ವಿಲಕ್ಷಣಮಯವಾಗಿ ವಿಚಿತ್ರವಾಗಿ ಕಾಣಿಸು ತ್ತಿತ್ತು. ಆದರೆ ದೋಣಿಯಲ್ಲಿದ್ದವರಿಗೆ ಕುಳಿತುಕೊಳ್ಳಲು ಸಾಕಷ್ಟು ಸ್ಥಳ

ವಿದ್ದಿಲ್ಲ. ಅವರು ಅನೇಕ ಕೆಲಸಗಳನ್ನು ಮುಗಿಸಬೇಕಿತ್ತು. ಸೂರ್ಯನು ನಿಧಾನವಾಗಿ ಆಕಾಶವನ್ನೇರಿದನು. ಅವರಿಗೆ ಮಧ್ಯಾನ್ಹವಾಗಿದೆಯೆಂದು ತಿಳಿಯಿತು. ಏಕೆಂದರೆ ಸಮುದ್ರವು ನೀಲಿಯಿಂದ ಪಚ್ಚ ಹಸಿರಾಗಿತ್ತು. ನೊರೆಯು ಹಾರಾಡುವ ಬರ್ಫದಂತೆ ಒಪ್ಪುತ್ತಿತ್ತು. ವಿಕಾಸವಾಗುವ ದಿವಸದ ವಿಧಾನವು ಅವರಿಗೆ ತಿಳಿಯುತ್ತಿದ್ದಿಲ್ಲ. ಅವರನ್ನು ಅರಸಿ ನುಗ್ಗುತ್ತಿದ್ದ ತೆರೆಗಳ ಮೇಲಿನ ಬದಲಾಗುತ್ತಿರುವ ಬಣ್ಣದಾಟದಿಂದಲೇ ಅವರು ಅದನ್ನು ಊಹಿಸುತ್ತಿದ್ದರು.

ಅಡಿಗೆಯವನೂ ಅವನ ಜತೆಗಾರನೂ ಜೀವರಕ್ಷಣ ಕೇಂದ್ರ ಮತ್ತು ಅಭಯಸ್ಥಾನಗಳಲ್ಲಿರುವ ಅಂತರವನ್ನು ಕುರಿತು ಹರಕು ಮುರುಕು ವಾಕ್ಯಗಳಲ್ಲಿ ಚರ್ಚಿಸುತ್ತಿದ್ದರು. "ಮೊಸ್ಕ್ವಿಟೋ ಇನ್ ಲೆಟ್ ಲೈಟ್‌ದ ಉತ್ತರಕ್ಕೆ ಒಂದು ಅಭಯಸ್ಥಾನವಿದೆ. ಅವರು ನಮ್ಮನ್ನು ಕಂಡು ಒಂದು ದೋಣಿಯಲ್ಲಿ ಬಂದು ನಮ್ಮನ್ನು ಒಯ್ಯುವರು." ಎಂದು ಅಡಿಗೆಯವನು ಹೇಳಿದನು.

"ಯಾರು ನಮ್ಮನ್ನು ನೋಡಿದ ಕೂಡಲೇ?" ಎಂದು ಜತೆಗಾರನು ಕೇಳಿದನು.

"ಅಭಯಾಶ್ರಮಗಳೆಂದರೆ ಅಲ್ಲಿ ಜನರೇ ಇರುವದಿಲ್ಲವೆಂದು ನಾನು ಕೇಳಿದ್ದೇನೆ. ಅಲ್ಲಿ ನೌಕಾಘಾತಕ್ಕೀಡಾದ ಜನರಿಗಾಗಿ ವಸ್ತ್ರಗಳನ್ನೂ ಆಹಾರಗಳನ್ನೂ ಸಂಗ್ರಹಿಸಿ ಇಡುತ್ತಾರಂತೆ. ಅವರು ಪ್ರಯಾಣಿಕರನ್ನು ಒಯ್ಯುವದಿಲ್ಲ" ಎಂದು ಸುದ್ದಿಗಾರನು ಹೇಳಿದ.

"ನಾನು ಹೇಳುವದೇ ನಿಜ. ಅವರು ಪ್ರಯಾಣಿಕರನ್ನು ಒಯ್ದೇ ಒಯ್ಯುತ್ತಾರೆ." ಎಂದ ಅಡಿಗೆಯವ.

"ಛೆ, ಎಂದಿಗೂ ಒಯ್ಯುವದಿಲ್ಲ." ಸುದ್ದಿಗಾರನು ಹೇಳಿದ.

ಹಿಂಭಾಗದಲ್ಲಿ ಕುಳಿತ ಎಣ್ಣೆಯವನು "ಹೇಗೂ ನಾವೇನು ಅಲ್ಲಿಗೆ ತಲುಪಲಿಲ್ಲವಲ್ಲಾ." ಎಂದು ಹೇಳಿದ.

ಅಡಿಗೆಯವನು ಮತ್ತೆ, "ಮೊಸ್ಕ್ವಿಟೋ ಇನ್ ಲೆಟ್ ಲೈಟದ ಬಳಿ ಅಭಯಾಶ್ರಮದ ಸ್ಥಾನ ಇರುವುದೆಂದು ನನಗೆ ಎನಿಸುವದಿಲ್ಲ. ಪ್ರಾಯಶಃ ಅದೊಂದು ಜೀವರಕ್ಷಣ ಸ್ಥಳವಿರಬೇಕು." ಎಂದನು.

ಎಣ್ಣೆಯವನು, "ಅದು ಯಾವುದಾದರೂ ಆಗಿರಲಿ. ಅಂತೂ ನಾವಂತೂ ಅಲ್ಲಿಗೆ ತಲ್ಪಲಿಲ್ಲವಲ್ಲ" ಎಂದ.

ದೋಣಿಯು ಪ್ರತಿಯೊಂದು ತರಂಗ ಶಿಖರಗಳ ಮೇಲಕ್ಕೆ ಜಿಗಿದಾಡುತ್ತಿರುವಂತೆ ಗಾಳಿಯು ಟೊಪ್ಪಿಗೆಗಳಿಲ್ಲದಿದ್ದ ಆ ಜನರ ತಲೆಕೂದಲನ್ನು ದಿಕ್ಕುಪಾಲಾಗಿ ಕೆದರಿಸಿ ಬೀಸುತ್ತಿತ್ತು. ಪುನಃ ದೋಣಿಯ ಹಿಂಭಾಗವು ನೀರಿನಲ್ಲಿ ಜಾರುತ್ತಿರುವಾಗ ನೀರಿನ ತುಂತುರಗಳು ಅವರಿಗೆ ಚಿಮ್ಮುತ್ತಿದ್ದವು. ಪ್ರತಿಯೊಂದು ತರಂಗದ ತುದಿಯೂ ಒಂದೊಂದು ಶಿಖರದಂತಿತ್ತು. ಅದರ ಮೇಲೆ ನಿಂತು ಜನರು ಗಾಳಿಯು ಕತ್ತರಿಸುತ್ತಿರುವ ಕೋಲಾಹಲಮಯವಾದ ವಿಶಾಲ ದೃಶ್ಯವನ್ನು ನಿರೀಕ್ಷಿಸುತ್ತಿದ್ದರು. ನೀರಿನ ಪಚ್ಚೆ ಹಸುರು–ನೊರೆಗಳ ಬಿಳುಪು–ಹೀಗೆ ಸಮುದ್ರದ ಸ್ವೇಚ್ಛೆಯಾದ ಬಣ್ಣಗಳ ಆಟವು ಬಹಳ ಆಕರ್ಷಣೀಯವೂ ವಿಲಕ್ಷಣವೂ ಪ್ರಕಾಶಮಯವೂ ಆಗಿದ್ದಿತ್ತು.

"ಓ, ಬಿಲ್ಲೀ, ಸಮುದ್ರ ದಡದ ಗಾಳಿಯು ಬೀಸುವಂತಿದೆ. ಇಲ್ಲದಿದ್ದರೆ ನಾವು ಎಲ್ಲಿ ಇರುತ್ತಿದ್ದೆವು? ಪ್ರವಾಸವು ಹೇಗೆ ಆಟವೆನಿಸುತ್ತಿದೆ." ಎಂದು ಅಡಿಗೆಯವನು ಹೇಳಿದ.

ಅದನ್ನು ಕೇಳಿ ಮೂವರೂ ಸ್ತಬ್ಧರಾದರು. ಆದರೆ ನಡುನಡುವೆ ವಿರಳವಾಗಿ ಕೇಕರಿಸುತ್ತಿದ್ದರು; ನಗುತ್ತಿದ್ದರು. ಆ ಅವಸರದಲ್ಲಿ ಯಾವದೇ ಪ್ರಕಾರದ ಆಶಾವಾದವನ್ನು ಹೊರಪಡಿಸುವದು ಮೂರ್ಖತನವೆಂದೂ ಹುಡುಗಾಟ (ದಡ್ಡತನ) ವೆಂದೂ ಅವರಿಗೆ ಅನಿಸುತ್ತಿತ್ತು. ಆದರೆ ಅವರೆಲ್ಲರೂ ಆ ಪ್ರಸಂಗದ ವೈಶಿಷ್ಟ್ಯವನ್ನು ಅರಿತುಕೊಂಡಂತಿತ್ತು. ಇಂತಹ ಪ್ರಸಂಗಗಳಲ್ಲಿ ತರುಣನಾದವನು ಹಟವಾದಿಯಾಗಿ ಯೋಚಿಸುತ್ತಾನೆ. ಇದಲ್ಲದೆ ಅವರ ವಿಶೇಷ ಪರಿಸ್ಥಿತಿಯಲ್ಲಿ ಯಾವುದೇ ನಿರಾಶೆಯ ಭಾವನೆಯನ್ನು ತಳೆಯುವದು ಅಸಂಗತವೆನಿಸುತ್ತಿತ್ತು. ಆದ್ದರಿಂದ ಎಲ್ಲರೂ ಮೌನವನ್ನು ತಳೆದರು.

ತನ್ನ ಜತೆಗಾರನನ್ನು ಮುಕ್ಕಳಂತೆ ಸಂತೈಸುತ್ತ ನಾವಿಕನು "ಸರಿ, ನಾವು ಇನ್ನೇನು ದಂಡೆಗೆ ಮುಟ್ಟಿಯೇ ಮುಟ್ಟುತ್ತೇವೆ." ಎಂದನು.

ಆದರೆ ಆತನ ಧ್ವನಿಯಲ್ಲಿ ಅವರನ್ನು ಯೋಚನೆಗೆ ತೊಡಗಿಸುವ ಯಾವುದೋ ಸೂಚನೆಯಿತ್ತು. ಎಣ್ಣೆಯವನು ಅದನ್ನು ಅರಿತವನಂತೆ, "ಹೌದು ಈ ಗಾಳಿಯು ಹೀಗೆಯೇ ಬೀಸಿದರೆ ಮಾತ್ರ" ಎಂದನು.

ಸಮುದ್ರ ಪಕ್ಷಿಗಳು ಅತ್ತಿಂದಿತ್ತ ಹತ್ತಿರದಲ್ಲೂ ದೂರದಲ್ಲೂ ಹಾರಾಡುತ್ತಿದ್ದವು. ಸ್ವಲ್ಪ ಹೊತ್ತು ಅವು ಸಮುದ್ರದ ಮೇಲೆ ಕೂಡ್ರುತ್ತಿದ್ದವು. ಗಾಳಿಯ ಹೊಡೆತಕ್ಕೆ ಸಿಕ್ಕಿ ರತ್ನಗಂಬಳಿಯಂತೆ ಒಪ್ಪುವ, ತರಂಗಗಳ ಮೇಲೆ ತೇಲಾಡುವ ಬೂದು ಬಣ್ಣದ ಸಮುದ್ರದ ಹಾವಸೆಯ ಬಳಿ ಸಾರುತ್ತಿದ್ದವು. ಹಕ್ಕಿಗಳು ಗುಂಪುಕಟ್ಟಿಕೊಂಡು ಸುಖವಾಗಿ ವಿರಮಿಸುತ್ತಿದ್ದವು. ದೋಣಿಯಲ್ಲಿ ಕುಳಿತುಕೊಂಡ ಕೆಲವರಿಗೆ ಅವನ್ನು ಕಂಡು ವಿಲಕ್ಷಣವಾದ ಅಸೂಯೆಯೆನಿಸಿತು. ಆ ಸಮುದ್ರ ಪಕ್ಷಿಗಳಿಗೆ, ನೂರಾರು ಮೈಲು ದೂರದ ಪ್ರೈಅರಿ ಹುಲ್ಲುಗಾವಲಿನಲ್ಲಿ ಓಡಾಡುತ್ತಿರುವ ಕೋಳಿಮರಿಗಳಂತೆ, ಸಮುದ್ರ ಸಂಚಾರದ ಭೀಕರ ಕಷ್ಟದ ಅನುಭವವೇ ಆಗುತ್ತಿದ್ದಿಲ್ಲ. ಒಮ್ಮೆ ಆ ಜನರ ಬಳಿಸಾರಿ ತಮ್ಮ ಮಣಿಗಳಂತೆ ಒಪ್ಪುವ ಕಣ್ಣುಗಳಿಂದ ಅವರನ್ನು ದಿಟ್ಟಿಸುತ್ತಿದ್ದವು. ಅವು ಹಾಗೆ ಎವೆಯಿಕ್ಕದೇ ನಿರೀಕ್ಷಿಸುತ್ತಿದ್ದಾಗ ವಿಕಾರವಾಗಿಯೂ ಅಮಂಗಳಕರವಾಗಿಯೂ ಕಾಣುತ್ತಿದ್ದವು. ಜನರು ಸಿಟ್ಟಿನಿಂದ ಅವುಗಳನ್ನು ಓಡಿಸುವರು. ಒಂದು ಹಕ್ಕಿಯು ಹಾರಿ ಆ ನಾವಿಕನ ತಲೆಯ ಮೇಲೆ ಇಳಿಯಲು ಹವಣಿಸಿತು ಆ ಹಕ್ಕಿಯು ದೋಣಿಗೆ ಸಮಾಂತರವಾಗಿ, ಆದರೆ ಸುತ್ತುಹಾಕದೆ ಕೋಳಿಮರಿಯಂತೆ ಅತ್ತಿಂದಿತ್ತ ಗಾಳಿಯಲ್ಲಿ ಕುಣಿದಾಡುತ್ತಿತ್ತು. ಅದರ ಕಪ್ಪು ಕಣ್ಣುಗಳು ಆ ನಾವಿಕನ ತಲೆಯ ಮೇಲೆ ನಟ್ಟಿದ್ದುವು. "ಹೊಲಸು ಪ್ರಾಣಿ. ನಿನ್ನನ್ನು ಚೂರಿಯಿಂದಲೇ ರಚಿಸಿದಂತೆ ಕಾಣುತ್ತದೆ." ಎಂದು ಎಣ್ಣೆಯವನು ಉದ್ಗರಿಸಿದನು. ಸುದ್ದಿಗಾರನು ಆ ಪಕ್ಷಿಯನ್ನು ಕಟುವಾಗಿ ಶಪಿಸಿದನು. ನಾವಿಕನು ದೋಣಿಯ ಹಗ್ಗದ ತುದಿಯಿಂದ ಹೊಡೆದೋಡಿಸ ಬಯಸಿದನು. ಆತನು ಆ ಕೆಲಸವನ್ನು ಮಾಡಲಿಲ್ಲ. ಏಕೆಂದರೆ ಯಾವುದಾದರೂ ಶಕ್ತಿ ಪ್ರಯೋಗದಿಂದ ದೋಣಿಯಲ್ಲಿ ತೀವ್ರವಾದ ಚಲನವಲನವನ್ನು ಮಾಡಿದರೆ ಆ ಪುಟ್ಟ ದೋಣಿಯು ಮುಳುಗುವ ಸಂಭವವಿತ್ತು. ಆದ್ದರಿಂದ ತನ್ನ ಬರಿಗೈಯಿಂದಲೇ ಆ ಪಕ್ಷಿಯನ್ನು ಓಡಿಸಿದನು. ಆ ಪಕ್ಷಿಯಿಂದ ತನ್ನ ತಲೆಗೂದಲು ಬಿಡುಗಡೆಯಾದ್ದರಿಂದ ನಾವಿಕನು ಸುಖವಾಗಿ ಉಸಿರಾಡಿಸಹತ್ತಿದನು. ಉಳಿದವರೂ ಆ ಅವಸರದಲ್ಲಿ ಪಕ್ಷಿಯು ಬಳಿಯಲ್ಲಿಯೇ ಹಾರಾಡುತ್ತಿರುವದು ಅಶುಭವೆಂದು ನಂಬಿದ್ದರಿಂದ ಬಿಡುಗಡೆಯ ಉಸಿರು ಬಿಟ್ಟರು.

ಈ ಮಧ್ಯೆ ಎಣ್ಣೆಯವನು ಮತ್ತು ಸುದ್ದಿಗಾರನು ಹುಟ್ಟು ಹಾಕುತ್ತಿದ್ದರು. ಎಡಬಿಡದೆ ಹುಟ್ಟು ಹಾಕಿದರು. ಅವರಿಬ್ಬರೂ ಒಂದೇ ಆಸನದಲ್ಲಿ ಕುಳಿತು ಕೊಂಡು ಒಂದೊಂದು ಹುಟ್ಟನ್ನು ಆಡಿಸುತ್ತಿದ್ದರು. ಆ ನಂತರ ಎಣ್ಣೆಯವನು ಎರಡೂ ಹುಟ್ಟುಗಳನ್ನು ಹಾಕಿದ. ಅವರು ಹುಟ್ಟು ಹಾಕಿದರು. ಎಡಬಿಡದೆ ಕೆಲಸ ನಡೆಯಿತು. ಆ ಪುಟ್ಟ ಜಾಗದಲ್ಲಿ ಹಿಂಭಾಗದಲ್ಲಿ ವಿರಮಿಸುತ್ತಿದ್ದವನು ಮುಂದೆ ನಡೆದು ಹುಟ್ಟು ಹಿಡಿಯುವ ಕೆಲಸ ಹೆಚ್ಚು ತ್ರಾಸಿನದಾಗಿತ್ತು. ಹಿಂಭಾಗದಲ್ಲಿದ್ದ ಮನುಷ್ಯನು ಅಡ್ಡ ಪಟ್ಟಿಯ ಮೂಲಕ ತನ್ನ ಕೈಯನ್ನು ಜಾರಿಸುತ್ತ ಜಾಗರೂಕತೆಯಿಂದ ಮುಂದೆ ಸರಿಯುತ್ತಿದ್ದ. ಆ ನಂತರ ಹುಟ್ಟು ಹಾಕುವ ಜಾಗದಲ್ಲಿದ್ದ ಮನುಷ್ಯ ತನ್ನ ಕೈಯನ್ನು ಅಡ್ಡ ಪಟ್ಟಿಯ ಮೂಲಕ ಸರಿಸುತ್ತ ನಿಧಾನವಾಗಿ ಬರುತ್ತಿದ್ದ. ಇದೆಲ್ಲ ಅಸಾಧಾರಣ ಜಾಗರೂಕತೆಯಿಂದ ನಡೆಯುತ್ತಿತ್ತು. ಅವರಿಬ್ಬರೂ ಇದುರು ಬದುರಾಗಿ ಸರಿಯುತ್ತಿದ್ದಾಗ ಎಲ್ಲರೂ ಲಕ್ಷಪೂರ್ಣವಾಗಿ ತೆರೆಗಳ ಬರವನ್ನು ನಿರೀಕ್ಷಿಸುತ್ತಿದ್ದರು. " ಜಾಗ್ರತೆ, ಮೆಲ್ಲನೆ, ಇದೋ ! ಸರಿಯಾಗಿ ನಿಲ್ಲು. " ಎಂದು ನಾವಿಕನು ಆಗಾಗ ಎಚ್ಚರಿಕೆ ಕೊಡುತ್ತಿದ್ದ.

ನಾವಿಕನು, ದೋಣಿಯು ತೆರೆಯೊಂದನ್ನೇರಿದಾಗ ಜಾಗರೂಕತೆಯಿಂದ ಮುಂಭಾಗದತ್ತ ಸರಿದು ತಾನು ಮೊಸ್ಕ್ವಿಟೋ ಇನ್ ಲೆಟ್‌ದಲ್ಲಿ ದೀಪ ಸ್ತಂಭವನ್ನು ನೋಡಿದೆನೆಂದು ಹೇಳಿದೆನು. ಆಗ ಸುದ್ದಿಗಾರನು ಹುಟ್ಟು ಹಾಕುತ್ತಿದ್ದ. ಆತನ ಬೆನ್ನು ದೂರದ ದಂಡೆಯ ದಿಕ್ಕಿನಲ್ಲಿತ್ತು. ತೆರೆಗಳ ಮೇಲೆ ತೆರೆಗಳೇಳುತ್ತಿದ್ದವು. ಆದ್ದರಿಂದ ಆತನಿಗೆ ದೀಪ ಸ್ತಂಭದ ಕಡೆಗೆ ನೋಡುವ ಅವಕಾಶವೇ ದೊರೆಯಲಿಲ್ಲ. ಆ ನಂತರ ಕೊನೆಗೊಮ್ಮೆ ಉಳಿದ ತೆರೆಗಳಿಗಿಂತ ಅಲ್ಪ ರಭಸದ ತೆರೆಯೊಂದು ಬಂದಿತು ಆಗ ಆತನು ಲಗುಬಗೆಯಿಂದ ಪಶ್ಚಿಮದತ್ತ ನೋಡಿದನು.

" ನೋಡಿದೆಯಾ ? " ನಾವಿಕನು ಕೇಳಿದನು.

ಸುದ್ದಿಗಾರನು ಮೆಲ್ಲನೆ, " ಇಲ್ಲ. ನನಗೆ ಏನೂ ಕಾಣಿಸಲಿಲ್ಲ " ಎಂದನು.

" ಇನ್ನೊಮ್ಮೆ ನೋಡು. ಅದೋ ಆ ದಿಕ್ಕಿನಲ್ಲಿ. ಅಲ್ಲಿದೆ " ಎಂದು ನಾವಿಕನು ಬೆರಳನ್ನತ್ತಿ ತೋರಿಸಿದನು.

ಇನ್ನೊಂದು ತೆರೆಯು ನೆತ್ತಿಯನ್ನೇರಿದಾಗ ಸುದ್ದಿಗಾರನು ನಾವಿಕನು ಹೇಳಿದಂತೆ ಇನ್ನೊಮ್ಮೆ ಕಣ್ಣು ಹಾಯಿಸಿದನು. ಈಗ ಆತನಿಗೆ ದೂರದ, ತೂಗುತ್ತಿದ್ದ ಕ್ಷಿತಿಜದ ಬಳಿಯಲ್ಲಿ ಒಂದು ನಿಶ್ಚಲವಾದ ಅಸ್ಪಷ್ಟ ವಸ್ತುವು ಕಾಣಿಸಿತು. ಅದು ಬಹಳ ಚಿಕ್ಕದಾಗಿ ಅಂದರೆ ಟಾಚಣಿಯ ಮೊನೆಯಷ್ಟು ಸೂಕ್ಷ್ಮವಾಗಿ ಕಾಣುತ್ತಿತ್ತು. ಅಂತಹ ಪುಟ್ಟ ದೀಪ ಸ್ತಂಭವನ್ನು ಕಾತರ ಗಣ್ಣಿನಿಂದ ನೋಡಿದ.

"ನಾವಿಕನೇ ನಾವಲ್ಲಿ ತಲಪಬಹುದೆಂದು ಕಾಣುತ್ತದೆ." ಎಂದ ಸುದ್ದಿಗಾರ.

" ಈ ಗಾಳಿಯು ಹೀಗೆ ಬೀಸಿದರೆ— ದೋಣಿಯು ಮುಳುಗದಿದ್ದರೆ— ನಾವು ಮತ್ತೇನೂ ಮಾಡಲಾರೆವು. " ಎಂದ ನಾವಿಕ.

ಆ ಪುಟ್ಟ ದೋಣಿಯು ತೆರೆಗಳನ್ನೇರುತ್ತ ಒಡೆಯುತ್ತಿರುವ ನೊರೆಗಳಿಂದ ತುಂಬಿದ ನೀರಿನ ಹೊಡೆತವನ್ನು ಅನುಭವಿಸುತ್ತ ಮುಂದುವರಿಯಿತು. ಮುಂದು ಮುಂದಕ್ಕೆ ಹೋದಂತೆ ಅದರೊಳಗಿದ್ದ ಜನರು ಸಮುದ್ರದೊಳಗಿನ ಹಾವಸೆ ಕಡಿಮೆಯಾಗುತ್ತಿದೆಯೆನ್ನುವದನ್ನು ಅರಿಯಲಿಲ್ಲ. ಮಹಾ ಸಮುದ್ರದ ಹೆದ್ದೆರೆಗಳ ಚಿನ್ನಾಟಕ್ಕೆ ತುತ್ತಾದ ಆ ದೋಣಿಯು ಒಂದು ಕ್ಷುದ್ರ ವಸ್ತುವಿನಂತೆ ಕಾಣುತ್ತಿತ್ತು. ಒಮ್ಮೊಮ್ಮೆ ನೊರೆ ತುಂಬಿದ ನೀರು ದೋಣಿಯನ್ನು ಸೇರುತ್ತಿತ್ತು.

"ಅಡಿಗೆಯವನೇ, ನೀರನ್ನು ಎತ್ತಿ ಹಾಕು" ಎಂದು ನಾವಿಕನು ಗಂಭೀರವಾಗಿ ಹೇಳಿದನು.

" ಒಳ್ಳೆಯದು. ನಾವಿಕ " ಉಲ್ಲಸಿತ ಅಡಿಗೆಯವನು ಉತ್ತರವಿತ್ತ.

ಆ ಸಮುದ್ರದ ಮಧ್ಯದಲ್ಲಿ ಆ ಜನರಲ್ಲಿ ನೆಲೆಯೂರಿದ ಸೂಕ್ಷ್ಮ ಸ್ನೇಹವನ್ನು ಬಣ್ಣಿಸುವದು ತುಂಬ ಕಠಿಣವಾದೀತು. ಅದು ಅಷ್ಟು ಸೂಕ್ಷ್ಮವೆಂದು ಯಾರೂ ಹೇಳಲಿಲ್ಲ. ಯಾರೂ ಅದನ್ನು ಕುರಿತು ಚರ್ಚಿಸಲಿಲ್ಲ. ಆದರೂ ದೋಣಿಯಲ್ಲಿ ಬೀಡುಬಿಟ್ಟ ಆ ಸ್ನೇಹದ ಗಾಳಿಯು ಅವರಿಗೆ ಅನುಭವವಾಗುತ್ತಿತ್ತು. ಅವರಿಂದಲೇ ಒಬ್ಬ ನಾವಿಕ, ಒಬ್ಬ ಎಣ್ಣೆಯವ, ಒಬ್ಬ ಅಡಿಗೆಯವ, ಮತ್ತೊಬ್ಬ ಸುದ್ದಿಗಾರ. ಸಾಮಾನ್ಯವಾಗಿ ಸೆಳೆಯುವ ಗೆಳೆತನದ ಬಂಧನಕ್ಕಿಂತ ಆ ಆಕರ್ಷಣೆಯು ಹೆಚ್ಚು ಗಾಢವಾಗಿತ್ತು; ಬಿಗಿಯಾಗಿತ್ತು. ನಾವಿಕ ಗಾಯ

ಗೊಂಡದ್ದರಿಂದ ಮುಂಭಾಗದಲ್ಲಿಯೇ ಒರಗಿ ಕೊಂಡಿರುತ್ತಿದ್ದನು. ಮತ್ತು ನಿಧಾನವಾಗಿಯೂ ಶಾಂತವಾಗಿಯೂ ಮಾತನಾಡುತ್ತಿದ್ದನು. ಆದರೂ ಆ ಮೂವರೂ ಆತನ ಆಜ್ಞೆಗಳನ್ನು ಸಂತೋಷದಿಂದ ಬಹು ತ್ವರೆಯಿಂದ ಪಾಲಿಸುತ್ತಿದ್ದರು. ಹಾಗೆ ದೋಣಿ ನಡೆಸುವದರಲ್ಲಿ ಧುರೀಣನೆಂದು ಆರಿಸಿ ಕೊಂಡವನನ್ನು ಭಯಭಕ್ತಿಗಳಿಂದ ಅನುಸರಿಸುತ್ತಿರುವದು ಎಲ್ಲರ ಸಂರಕ್ಷಣವನ್ನು ಭದ್ರಪಡಿಸುತ್ತಿತ್ತು. ಅವರ ನಿಷ್ಠೆಯಲ್ಲಿ ಆತ್ಮೀಯತೆಯೂ ಮಮತೆಯೂ ತುಂಬಿದ್ದವು. ದೋಣಿಯು ನಾವಿಕನಿಗೆ ತೋರಿಸಿದ ಭಕ್ತಿಯು ಪರಿಣಾಮವಾಗಿ ಮನುಷ್ಯನನ್ನು ಕುರಿತು ಅನಾಸಕ್ತನಾಗಿರಬೇಕೆಂದು ಪಾಠವನ್ನು ಕಲಿತಿದ್ದ ಸುದ್ದಿಗಾರನೂ ಸಹ ಆ ಅನುಭವವು ತನ್ನ ಬದುಕಿನ ವಿಶಿಷ್ಟ ಅನುಭವವೆಂದು ಬಗೆದನು. ಹಾಗೆಂದು ಯಾರೂ ಬಾಯಿಬಿಟ್ಟು ಹೇಳಲಿಲ್ಲ. ಯಾರೂ ಚರ್ಚಿಸಲಿಲ್ಲ.

"ನಮ್ಮ ಹತ್ತರ ಒಂದು ಪಟವಿದ್ದಿದ್ದರೆ" ನಾವಿಕನು ಉದ್ಗರಿಸಿದನು. "ನಾವು ನನ್ನ ಓವರ ಕೋಟನ್ನು ಪಟಸ್ತಂಭಕ್ಕೆ ಹಾಕಿ ನಿಮಗಿಬ್ಬರಿಗೂ ಸ್ವಲ್ಪ ವಿಶ್ರಾಂತಿ ಕೊಡಬಹುದೇನೋ'' ಎಂದು ಮುಗಿಸಿದನು.

ಅಡಿಗೆಯವ ಮತ್ತು ಸುದ್ದಿಗಾರನು ಪಟಸ್ತಂಭವನ್ನು ಹಿಡಿದು ಅದರ ಮೇಲೆ ಓವರ ಕೋಟನ್ನು ಬಿಚ್ಚಿ ಹರಡಿದರು. ಎಣ್ಣೆಯವನು ಹುಟ್ಟು ಹಾಕಿದ ಆ ಪುಟ್ಟ ದೋಣಿಯು ತನ್ನ ಹೊಸ ಪಟದ ಸಹಾಯದಿಂದ ತೀವ್ರವಾಗಿ ಮುಂದೆ ಸಾಗತೊಡಗಿತು. ಒಮ್ಮೊಮ್ಮೆ ಎಣ್ಣೆಯವನೂ ತೆರೆಗಳಿಂದ ತಪ್ಪಿಸಿಕೊಳ್ಳಲು ಬೇಗ ಬೇಗ ಹುಟ್ಟು ಹಾಕಬೇಕಾಗುತ್ತಿತ್ತು. ಉಳಿದ ವೇಳೆ ದೋಣಿ ಸುಖವಾಗಿ ಮುಂದುವರಿಯುತ್ತಿತ್ತು.

ಅಷ್ಟರಲ್ಲಿ ದೂರದಲ್ಲಿ ಕಾಣುತ್ತಿದ್ದ ಮಾರ್ಗದರ್ಶಕ ದೀಪವು ಕ್ರಮವಾಗಿ ದೊಡ್ಡದಾಗಿ ಕಾಣತೊಡಗಿತು. ಈಗ ಅದರ ಬಣ್ಣವು ಸ್ಪಷ್ಟವಾಗಿ ಕಾಣುತ್ತಿತ್ತು. ಆಕಾಶದ ಅಂಚಿನಲ್ಲಿ ಒಂದು ಮಸುಕಾದ ನೆರಳಿನಂತೆ ಒಪ್ಪುತ್ತಿತ್ತು. ಹುಟ್ಟು ಹಾಕುತ್ತಿದ್ದವರು ಸಹ ಒಮ್ಮೊಮ್ಮೆ ತಮ್ಮ ತಲೆಯನ್ನು ತಿರುಗಿಸಿ ಆ ನೆರಳನ್ನು ನೋಡುತ್ತಿದ್ದರು.

ಕಟ್ಟ ಕಡೆಗೆ ಪ್ರತಿಯೊಂದು ತರಂಗ ಶಿಖರದಿಂದ ಹೊಯ್ದಾಡುವ ಆ ದೋಣಿಯೊಳಗಿನ ಜನತೆಗೆ ಭೂಮಿಯು ಕಾಣಿಸತೊಡಗಿತ್ತು. ದೀಪಸ್ತಂಭವು ಆಕಾಶದ ಅಂಚಿನಲ್ಲಿ ನಿಂತ ನೆರಳಿನಂತೆ ಆ ಭೂ

ಪ್ರದೇಶವು ಸಮುದ್ರದ ಮೇಲೆ ಉದ್ದವಾಗಿ ಬಿದ್ದ ಕಪ್ಪು ನೆರಳಿನಂತೆ ಒಪ್ಪುತ್ತಿತ್ತು. ಕಾಗದಕ್ಕಿಂತಲೂ ಅದು ತೆಳ್ಳಗಾಗಿತ್ತು. ಆ ದಂಡೆಯ ಗುಂಟ ಅನೇಕ ಸಲ ಪ್ರಯಾಣ ಮಾಡಿದ ಅಡಿಗೆಯವನು, "ನಾವು ಸಾಧಾರಣ ಸ್ಮ್ಯಾಸ್ಮಿರ್ನಾದ ಇದಿರು ದಿಕ್ಕಿನಲ್ಲಿ ಇದ್ದಿರಬೇಕು. ನಾವಿಕನೇ, ಪ್ರಾಯಶಃ ಅವರು ಹೋದ ವರುಷ ಆ ಜೀವರಕ್ಷಣ ಕೇಂದ್ರವನ್ನು ತೊರೆದಿರಬಹುದೆಂದು ನನಗೆ ನಂಬಿಕೆಯಿದೆ" ಎಂದನು.

"ನಿಜವೇ ?" ಎಂದು ನಾವಿಕನು ಕೇಳಿದ.

ಗಾಳಿಯು ಮೆಲ್ಲನೆ ಕಡಿಮೆಯಾಗುತ್ತ ಬಂದಿತು. ಅಡಿಗೆಯವನಿಗೆ ಮತ್ತು ಸುದ್ದಿಗಾರನಿಗೆ ಆ ಹುಟ್ಟನ್ನು ನೆಟ್ಟಗೆ ಹಿಡಿಯುವ ಕಷ್ಟಕರವಾದ ಶ್ರಮದಿಂದ ಬಿಡುಗಡೆ ಆಯಿತು. ಆದರೆ ತೆರೆಗಳು ತಮ್ಮ ವಾಡಿಕೆಯ ಕೇಡಿಗತನವನ್ನು ತೊರೆಯಲಿಲ್ಲ. ಆ ಪುಟ್ಟ ದೋಣಿಯ ಮೇಲೆ ಅವು ನೀರನ್ನು ಎರಚುತ್ತಿದ್ದವು. ದೋಣಿಯು ಆ ತರಂಗಗಳ ಅಪಘಾತವನ್ನು ತಪ್ಪಿಸಿಕೊಳ್ಳಲು ಹಿಂದಿನಂತೆ ನರಳುತ್ತ ಮುನ್ನುಗ್ಗಬೇಕಾಯಿತು. ಎಣ್ಣೆಯವನೋ ಅಥವಾ ಸುದ್ದಿಗಾರನೋ ಪುನಃ ಹುಟ್ಟು ಹಾಕತೊಡಗಿದ. ನೌಕಾಘಾತದಲ್ಲಿ ಸಿಲುಕಿದವರಿಗೆ ಇದೆಲ್ಲವನ್ನೂ ಎದುರಿಸುವ ಪ್ರಸಂಗ ಒದಗುತ್ತದೆ. ಅವರಿಗೆ ಜೀವರಕ್ಷಣೋಪಾಯದ ಶಿಕ್ಷಣವನ್ನು ಕೊಟ್ಟಿದ್ದಾದರೆ ಮುಳುಗಿ ಸಾಯುವವರ ಸಂಖ್ಯೆಯು ಎಷ್ಟೋ ಕಡಿಮೆಯಾಗುತ್ತಿತ್ತು. ದೋಣಿಯೊಳಗಿದ್ದ ನಾಲ್ವರೂ ದೋಣಿಯೊಳಗೆ ಕೂಡ್ರುವ ಮುಂಚೆ ಎರಡು ದಿನ, ಎರಡು ರಾತ್ರಿ ಒಮ್ಮೆಯೂ ಸರಿಯಾಗಿ ನಿದ್ದೆ ಮಾಡಿದ್ದಿಲ್ಲ. ಅಪಘಾತಕ್ಕೊಳಗಾದ ಹಡಗವನ್ನೇರುವ ವಿಫಲ ಪ್ರಯತ್ನದಲ್ಲಿ ತೊಡಗಿದ ಅವರು ಹೊಟ್ಟೆತುಂಬ ಊಟ ಮಾಡುವದನ್ನೂ ಮರೆತಿದ್ದರು.

ಈ ನಿದ್ರಾಭಂಗದಿಂದ ಮತ್ತು ಅನೇಕ ಕಾರಣಾಂತರಗಳಿಂದ ಎಣ್ಣೆಯವನಿಗಾಗಲೀ ಸುದ್ದಿಗಾರನಿಗಾಗಲೀ ಆ ಸಮಯ ಹುಟ್ಟು ಹಾಕುವ ಚೈತನ್ಯವೇ ಇದ್ದಿರಲಿಲ್ಲ. ಜನರಿಗೆ ದೋಣಿಯಲ್ಲಿ ಹುಟ್ಟು ಹಾಕುವದೆಂದರೆ ಹುಚ್ಚು ಹವ್ಯಾಸ ಎನ್ನುವ ವಿಷಯವನ್ನು ನೆನೆದು ಸುದ್ದಿಗಾರನಿಗೆ ತುಂಬ ಆಚ್ಚರಿಯಾಯಿತು. ಅದು ಮನರಂಜನೆಯಲ್ಲ; ಅತಿ ಘೋರವಾದ ಶಿಕ್ಷೆ. ಯಾವ ಚಿತ್ತ ವಿಭ್ರಮೆಗೊಂಡ ವ್ಯಕ್ತಿಯೂ ದೋಣಿ ನಡೆಸುವದೆಂದರೆ ಸ್ನಾಯು

ಗಳಿಗೆ ಕಠಿಣ ಅಗ್ನಿ ದಿವ್ಯವೆಂದು ಬೆನ್ನಿಗೆ ಮಾಡಿದ ಮಹಾಪರಾಧವೆಂದೂ ಖಂಡಿತವಾಗಿ ಹೇಳದಿರಲಾರರು. ಆತನು ದೋಣಿಗೆ (ಅದು ತನ್ನ ಗೆಳೆಯನೋ ಅನ್ನುವಂತೆ) ಹುಟ್ಟು ಹಾಕುವ ಮನರಂಜನೆಯಿಂದ ತನಗಾದ ಆಘಾತವನ್ನು ನಿವೇದಿಸಿಕೊಂಡ. ನಿರುತ್ಸಾಹದಿಂದ ಮ್ಲಾನ ಮುಖನಾದ. ಎಣ್ಣೆಯವನು ಸಹಾನುಭೂತಿಯಿಂದ ನಸುನಕ್ಕನು. ನೌಕಾಘಾತಕ್ಕಿಂತ ಮುಂಚಿನ ರಾತ್ರಿ ಎಣ್ಣೆಯವನು ಹಡಗಿನ ಯಂತ್ರದ ಕೋಣೆಯಲ್ಲಿ ಎರಡು ಸರದಿ ಕಾದು ಕೊಂಡಿದ್ದ.

"ಗೆಳೆಯರೇ, ಸಾವಧಾನವಾಗಿ ನಡಿಸಿ. ಸೋತು ಹೋಗಬೇಡಿ. ನಾವು ದಂಡೆಯ ತೆರೆಗಳನ್ನು ದಾಟಬೇಕಾಗಿದೆ. ನೀವು ನಿಮ್ಮ ಸರ್ವಶಕ್ತಿಯನ್ನೂ ಉಪ ಯೋಗಿಸಬೇಕಾದೀತು. ವಿಶ್ರಾಂತಿ ತೆಗೆದುಕೊಳ್ಳಿ" ನಾವಿಕನು ಎಚ್ಚರಿಸಿದನು.

ನಿಧಾನವಾಗಿ ಆ ಭೂಪ್ರದೇಶವು ಸಮುದ್ರದ ಮೇಲಕ್ಕೇಳುವಂತೆ ಕಂಡಿತು. ಅಸ್ಪಷ್ಟವಾದ ಕಪ್ಪುಗೆರೆಗಳು ಸ್ಪಷ್ಟವಾದವು. ಮರಗಳೂ ಮರಳೂ ಕಾಣತೊಡಗಿದವು. ಕೊನೆಗೆ ನಾವಿಕನು ತನಗೆ ಒಂದು ಮನೆಯು ಕಾಣಿ ಸುತ್ತಿದೆಯೆಂದು ಹೇಳಿದನು. "ಅದೇ ಅಭಯಾಶ್ರಮಸ್ಥಾನ. ಅಲ್ಲಿಯವರು ಕರೆದೊಯ್ಯಲು ಬಂದೇ ಬರುತ್ತಾರೆ." ಎಂದ ಅಡಿಗೆಯವ.

ದೀಪಸ್ತಂಭವು ನಿಚ್ಚಳವಾಗಿ ಕಾಣುತ್ತಿತ್ತು. "ಸ್ತಂಭದ ರಕ್ಷಕನು ದುರ್ಬೀನಿನಿಂದ ನಮ್ಮನ್ನು ನೋಡುತ್ತಿದ್ದರೆ ನಮ್ಮನ್ನು ಖಂಡಿತವಾಗಿಯೂ ಕಾಣುತ್ತಾನೆ. ಆತನು ಜೀವ ರಕ್ಷಣೆ ಮಾಡುವವರಿಗೆ ಕೂಡಲೇ ಆದೇಶವನ್ನು ಕೊಡುತ್ತಾನೆ." ಎಂದು ನಾವಿಕನು ಹೇಳಿದನು.

"ಉಳಿದ ದೋಣಿಗಳಲ್ಲಿ ಯಾವುದೂ ನೌಕಾಘಾತದ ವಿಷಯವನ್ನು ತಿಳಿದಿರಲಿಕ್ಕಿಲ್ಲ. ಇಲ್ಲದಿದ್ದರೆ ಜೀವರಕ್ಷದ ದೋಣಿಯು ಈಗಾಗಲೇ ಹುಡುಕಿ ಕೊಂಡು ಬರುತ್ತಿತ್ತು." ಎಂದ ಎಣ್ಣೆಯವ.

ನಿಧಾನವಾಗಿ ಮನೋಹರ ಭೂಪ್ರದೇಶವು ಸಮುದ್ರದ ಮೇಲಕ್ಕೆದ್ದಿತು. ಮತ್ತೊಮ್ಮೆ ಗಾಳಿ ಬೀಸತೊಡಗಿತು. ಈಶಾನ್ಯದಿಂದ ಅದು ಆಗ್ನೇಯಕ್ಕೆ ದಿಕ್ಕು ಬದಲಾಯಿಸಿತು. ಕೊನೆಗೆ ದೋಣಿಯಲ್ಲಿದ್ದವರಿಗೆ ಒಂದು ಹೊಸ ಸಪ್ಪಳ ಕೇಳ ಬಂದಿತು. ದಂಡೆಯ ಹತ್ತಿರದ ತೆರೆಗಳು ದಂಡೆಯನ್ನು ಮುದ್ದಿ ಡುತ್ತ ಮೊರೆಯುತ್ತಿದ್ದವು. "ಇನ್ನು ನಾವೆಂದಿಗೂ ದೀಪಸ್ತಂಭವನ್ನು ಮುಟ್ಟ

ಲಾರೆವು. ದೋಣಿಯನ್ನು ಸ್ವಲ್ಪ ಉತ್ತರಕ್ಕೆ ತಿರುಗಿಸಿ. ” ನಾವಿಕನೆಂದ.

“ಇನ್ನೂ ಸ್ವಲ್ಪ ಉತ್ತರಕ್ಕೆ. ” ಎಣ್ಣೆಯವನು ಹೇಳಿದ.

ನಂತರ ದೋಣಿಯು ಗಾಳಿಯತ್ತ ತನ್ನ ಮುಖವನ್ನು ತಿರುಗಿಸಿತು. ಹುಟ್ಟು ಹಾಕುವವರಿಗೆ ಮಾತ್ರ ಸ್ಪಷ್ಟವಾಗುತ್ತಿರುವ ಭೂಪ್ರದೇಶವು ಕಾಣುತ್ತಿತ್ತು. ಆ ವಿಶಾಲ ಪ್ರದೇಶದ ಪ್ರಭಾವವು ಅವರನ್ನು ಘೋರವಾದ ಭಯದಿಂದ ಮುಕ್ತಗೊಳಿಸಿತು. ದೋಣಿಯನ್ನು, ಹುಟ್ಟುಹಾಕಿಕೊಂಡು ತೆರೆಗಳೊಳಗಿಂದ ಸಾಗಿಸಿಕೊಂಡು ಹೋಗುವದು ಇನ್ನೂ ದುಸ್ತರವಾಗಿಯೇ ಇತ್ತು. ಆದರೂ ಏನೋ ವಿಲಕ್ಷಣವಾದ ಉತ್ಸಾಹವು ಅವರಲ್ಲಿ ಮೂಡುತ್ತಿತ್ತು. ಇನ್ನೊಂದು ತಾಸಿನಲ್ಲಿ ಅವರೆಲ್ಲ ದಂಡೆಯನ್ನು ಮುಟ್ಟುವವರು.

ಆ ದೋಣಿಯಲ್ಲಿ ತಮ್ಮ ಬೆನ್ನಿನ ಸಮತೋಲವನ್ನು ಕಾಯ್ದುಕೊಳ್ಳುವದು ಅವರಿಗೆ ರೂಢಿಯಾಗಿ ಹೋಗಿತ್ತು. ಅವರು ಸರ್ಕಸ್ಸಿನ ಜನರು ಕುದುರೆಯನ್ನೇರುವಂತೆ ಈ ಪುಟ್ಟ ದೋಣಿಯಲ್ಲಿ ಸವಾರಿ ನಡಿಸಿದ್ದರು. ಸುದ್ದಿಗಾರನು ಸಂಪೂರ್ಣವಾಗಿ ಒದ್ದೆಯಾಗಿದ್ದ. ಅವನು ತನ್ನ ಅಂಗಿಯ ಮೇಲಿನ ಕಿಸೆಯಲ್ಲಿ ಕೈಹಾಕಿ ನೋಡಿದಾಗ ಎಂಟು ಸಿಗರೇಟುಗಳು ಉಳಿದಿದ್ದವು. ನಾಲ್ಕು ಸಿಗರೇಟುಗಳು ಒದ್ದೆಯಾಗದೇ ಉಳಿದಿದ್ದವು. ಉಳಿದ ನಾಲ್ಕು ಒದ್ದೆಯಾಗಿ ಮುದ್ದೆಯಾಗಿಬಿಟ್ಟಿದ್ದವು. ಮೂರು ಒಣಗಿದ ಬೆಂಕಿಕಡ್ಡಿಯನ್ನು ಯಾರೋ ತಂದು ಕೊಟ್ಟರು. ಆ ನಾಲ್ವರೂ ತುಂಬ ಉತ್ಸಾಹದಿಂದ ದೋಣಿಯಮೇಲೆ ತಮ್ಮ ಸವಾರಿಯನ್ನು ಸಾಗಿಸಿದರು. ಇನ್ನೇನು ಸದ್ಯದಲ್ಲಿಯೇ ಒದಗಿದ್ದ ಕಷ್ಟದಿಂದ ಪಾರಾಗುತ್ತೇವೆ ಎನ್ನುವ ಆಸೆಯು ಅವರ ಕಣ್ಣುಗಳಲ್ಲಿ ಮಿಂಚುತ್ತಿತ್ತು. ಅವರು ನಾಲ್ಕೂ ಸಿಗರೇಟುಗಳನ್ನೂ ತುಟಿಗಿರಿಸಿ ಹೊಗೆ ಬಿಡತೊಡಗಿದರು. ಎಲ್ಲ ಜನರನ್ನೂ ಒಳ್ಳೆಯವರೆಂದೂ ಕೆಟ್ಟವರೆಂದೂ ಒಂದೇ ಉಸುರಿನಲ್ಲಿ ನಿರ್ಣಯಿಸಿದರು. ಪ್ರತಿಯೊಬ್ಬನೂ ಒಂದೊಂದು ಗುಟುಕು ನೀರು ಕುಡಿದ.

“ ಅಡಿಗೆಯವನೇ ನಿನ್ನ ಅಭಯಾಶ್ರಮದ ಬಳಿಯಲ್ಲಿ ಜೀವನದ ಚಿನ್ಹೆಯೇ ಕಾಣುತ್ತಿಲ್ಲವಲ್ಲ ” ಎಂದು ಹೇಳಿದನು.

“ ಇಲ್ಲ, ನಾವು ಅವರಿಗೆ ಕಾಣಿಸುತ್ತಿಲ್ಲವೇನೋ.” ಅಡಿಗೆಯವನೆಂದ.

ಅವರ ಎದುರಿಗೆ ವಿಶಾಲವಾದ ತಗ್ಗು ದಿಂಡೆಯ ಪ್ರದೇಶವು ಹರಡಿಕೊಂಡಿತ್ತು. ಮಳಲು-ಬಯಲುಗಳ ಅಂಚಿಗೆ ದಟ್ಟವಾದ ಗಿಡ ಮರಗಳಿದ್ದವು.

ದಂಡೆ ದರೆಗಳ ಮೊರೆತವು ಸ್ಪಷ್ಟವಾಗಿ ಕೇಳಿಸುತ್ತಿತ್ತು. ದಂಡೆಯನ್ನು ಅಪ್ಪಳಿಸುತ್ತಿರುವ ಸಮಯ ತರಂಗ ಶಿಖರದ ಮೇಲೆ ಬಿಳಿ ನೊರೆಯು ಹರಡಿಕೊಳ್ಳುವದೂ ಕಾಣಿಸುತ್ತಿತ್ತು. ದಕ್ಷಿಣ ದಿಕ್ಕಿಗೆ ಆ ತೆಳ್ಳಗಿನ ಮತ್ತು ಪುಟ್ಟ ದೀಪಸ್ತಂಭವು ಮಸುಕು ಮಸುಕಾಗಿ ತೋರುತ್ತಿತ್ತು.

ಏರಿಳಿತ, ಗಾಳಿ ಮತ್ತು ತೆರೆಗಳು ದೋಣಿಯನ್ನು ಉತ್ತರ ದಿಕ್ಕಿಗೆ ಎಳೆಯುತ್ತಿದ್ದವು. "ಅಯ್ಯೋ! ನಾವಿನ್ನೂ ಅವರಿಗೆ ಕಾಣಿಸುತ್ತಿಲ್ಲವೇನೋ!" ಎಂದುಕೊಂಡರು ನಾಲ್ವರೂ.

ದಂಡೆ ದರೆಗಳ ಸಪ್ಪಳ ತುಸು ತಗ್ಗಿತ್ತು. ಆದರೆ ಅದರ ಸತ್ವವು ಇನ್ನೂ ಭಯಾನಕವಾಗಿಯೂ ರಭಸಯುಕ್ತವಾಗಿಯೂ ಇದ್ದಿತ್ತು. ಆ ಹೆದ್ದೆರೆಗಳನ್ನು ದೋಣಿಯು ದಾಟುತ್ತಿರುವಾಗ ಆ ಜನರು ಮೊರೆತವನ್ನು ಕೇಳುತ್ತ ಕುಳಿತುಕೊಂಡಿದ್ದರು. "ನಾವು ಖಂಡಿತವಾಗಿಯೂ ಮುಳುಗಿ ಹೋಗುತ್ತೇವೆ." ಎಲ್ಲರೂ ನುಡಿದರು.

ನಿಜವಾಗಿಯೂ ಇಕ್ಕೆಲಗಳಲ್ಲಿ ೨೦ ಮೈಲ ಅಂತರಗಳಲ್ಲಿ ಯಾವದೊಂದು ಜೀವ ರಕ್ಷಣ ಕೇಂದ್ರವಿದ್ದಿಲ್ಲ. ಈ ಸಂಗತಿ ದೋಣಿಯಲ್ಲಿದ್ದವರಿಗೆ ಗೊತ್ತಿದ್ದಿಲ್ಲ. ಅವರು ರಾಷ್ಟ್ರದ ಜೀವ ರಕ್ಷಕ ಜನರ ದೃಷ್ಟಿದೋಷವನ್ನು ಕುರಿತು ಅಪಶಬ್ದಗಳನ್ನು ಉಚ್ಚರಿಸತೊಡಗಿದ್ದರು. ಬೈಗಳನ್ನು ರಚಿಸುವದರಲ್ಲಿ ದೋಣಿಯಲ್ಲಿ ಹುಬ್ಬುಗಂಟಿಕ್ಕಿಕೊಂಡು ಕುಳಿತಿದ್ದ ಆ ನಾಲ್ವರನ್ನೂ ಯಾರೂ ಸರಿಗಟ್ಟುತ್ತಿದ್ದಿಲ್ಲವೇನೋ.

"ಇನ್ನೂ ನಮ್ಮನ್ನು ನೋಡುತ್ತಿದ್ದಿಲ್ಲವೆಂದರೆ" ಎಂದು ಅವರು ಇನ್ನೊಮ್ಮೆ ನುಡಿದರು.

ಹಿಂದಿನ ಉಲ್ಹಾಸವೃತ್ತಿಯು ಎಲ್ಲ ಉಡುಗಿ ಹೋಗಿತ್ತು. ಅವರ ಸಂತಪ್ತ ಚಿತ್ತಗಳಿಗೆ ಅಸಮರ್ಥತೆ, ಸಂಕುಚಿತ ವೃತ್ತಿ ಮತ್ತು ಹೇಡಿತನಗಳು ಕಂಡವು. ಅವರೆದುರಿಗೆ ಜನತೆಯಿಂದ ತುಂಬಿದ ಭೂಪ್ರದೇಶವಿತ್ತು. ಆದರೆ ಅಲ್ಲಿಂದ ಯಾವ ಸೂಚನೆಯೂ ಬರಲಿಲ್ಲವೆಂದು ನಾಲ್ವರ ಮನಸ್ಸಿಗೆ ತುಂಬ ಜುಗುಪ್ಸೆಯಾಯಿತು. ಆ ಜನರ ಸ್ವಭಾವವನ್ನು ಕುರಿತು ಅವರು ಬಗೆ ಬಗೆಯ ತಪ್ಪು ಕಲ್ಪನೆಗಳನ್ನು ಮಾಡಿಕೊಂಡು ಬಯ್ಯತೊಡಗಿದರು.

"ಸರಿ. ನಾವೇ ಪ್ರಯತ್ನಿಸಿ ನೋಡಬೇಕೆಂದು ಕಾಣುತ್ತದೆ. ನಾವು

ಬಹು ಹೊತ್ತು ಹೀಗೆ ಉಳಿದರೆ, ದೋಣಿಯು ಮುಳುಗಿದ ನಂತರ ನಮ್ಮಲ್ಲಿ ಯಾರಿಗೂ ಈಜಾಡುವ ಶಕ್ತಿಯೇ ಉಳಿಯಲಿಕ್ಕಿಲ್ಲ. ” ನಾವಿಕನು ನುಡಿದನು.

ಆಗ ಹುಟ್ಟು ಹಾಕುತ್ತಿದ್ದ ಎಣ್ಣೆಯುವನು ನೇರವಾಗಿ ದೋಣಿಯನ್ನು ದಂಡೆಯತ್ತ ತಿರುಗಿಸಿದನು. ಸ್ನಾಯುಗಳು ಸ್ವಲ್ಪ ಬಿಗಿಯಾದವು. ತುಸು ವಿಚಾರ ವಿನಿಮಯ ನಡೆಯಿತು.

“ನಾವೆಲ್ಲರೂ ದಂಡೆಯನ್ನು ತಲುಪದಿದ್ದರೆ— ದಂಡೆಯನ್ನು ತಲುಪದಿದ್ದರೆ, ನನ್ನ ಕೊನೆಯ ವರ್ತಮಾನವನ್ನು ಎಲ್ಲಿ ಕಳಿಸಬೇಕೆಂದು ಗೊತ್ತಿದೆಯಲ್ಲವೆ ? ” ಎಂದು ನಾವಿಕನು ಕೇಳಿದನು.

ಆನಂತರ ಪರಸ್ಪರರ ಸಂಗಡ ಮಾತುಕತೆ ನಡೆಸಿದರು. ಉಪದೇಶ, ಆಶೀರ್ವಾದ, ಶುಭಕಾಮನೆಗಳು ನಡೆದ ಮೇಲೆ ಅವರ ವಿಚಾರಗಳೆಲ್ಲ ಸಂತಾಪದಿಂದ ತುಂಬಿದ್ದವು. ಅವನ್ನು ಹೀಗೆಂದು ಊಹಿಸಬಹುದಿತ್ತು. “ನಾನು ಮುಳುಗಿ ಸಾಯುವದಿದ್ದರೆ ಸಪ್ತಸಾಗರಗಳ ದೇವತೆಗಳು ಇಲ್ಲಿ ಬರುವಂತೆ ಮಾಡಿದುದೇಕೋ ? ಈ ಮಳಲನ್ನೂ ಮರಗಳನ್ನೂ ನೋಡುತ್ತ ಆಸೆ ಹಿಡಿಯುವಂತಾಯ್ತಲ್ಲ. ಇಂತಹ ಹಾಳು ಪ್ರದೇಶದಲ್ಲಿ ನನ್ನ ಅವಸಾನಕಾಲವು ಸಮೀಪಿಸಿರುವಾಗ ಸುಮ್ಮನೆ ವಿಲಿವಿಲಿ ಒದ್ದಾಡಲು ನನ್ನನ್ನು ತರಲಾಯಿತೇ. ಇದು ಸಂಪೂರ್ಣವಾಗಿಯೂ ಅಸಂಬದ್ಧ. ವಿಧಿ ಎನಿಸಿಕೊಳ್ಳುವ ಈ ದುಷ್ಟ ಪುರುಷನು ಇದಕ್ಕಿಂತ ಹೆಚ್ಚಿನದೇನನ್ನೂ ಮಾಡಲಾರನಾದರೆ ಮಾನವನ ಜೀವನವನ್ನು ನಿರ್ಧರಿಸುವ ಆತನ ಕರ್ತವ್ಯದಿಂದ ಆತನನ್ನು ಚ್ಯುತಗೊಳಿಸಬೇಕಾದೀತು. ಈ ವೃದ್ಧ ವಿಧಿಯು ಇಂತಹ ಯೋಜನೆಯನ್ನು ಬಿಟ್ಟು ಬೇರಾವುದನ್ನೂ ಯೋಚಿಸಲಾರನು. ತನ್ನ ಉದ್ದೇಶವೇನೆನ್ನುವದೇ ಆ ಮೂರ್ಖನಿಗೆ ತಿಳಿಯುವದಿಲ್ಲ. ಆತನು ನನ್ನನ್ನು ಮುಳುಗಿಸಿ ಸಾಯಿಸುವದನ್ನು ನಿಶ್ಚಯಿಸಿದ್ದರೆ ಮೊದಲೇ ನನ್ನನ್ನು ನಾಶಪಡಿಸಿ ಈ ಸಂಕಟ ಪರಂಪರೆಯಿಂದ ಏಕೆ ಉಳಿಸಲಿಲ್ಲ ? ಈ ವ್ಯವಹಾರವೆಲ್ಲ ಅರ್ಥಹೀನವೆಂದು ಕಾಣುತ್ತದೆ. ಅಥವಾ ನನ್ನನ್ನು ಮುಳುಗಿಸಲೇಬೇಕೆಂದು ಆತನ ಇಚ್ಛೆಯಿಲ್ಲವೇನೋ. ಆತನು ನನ್ನನ್ನು ಮುಳುಗಿಸಲಾರ. ಆತನಿಗೆ ಧೈರ್ಯವಿದ್ದರಲ್ಲವೇ ? ಇಷ್ಟೆಲ್ಲ ಸಂಕಟ ಪರಂಪರೆಯಿಂದ ದಾಟಿಸಿದ ಮೇಲೆ ಮುಳುಗಿಸಬಹುದೆಂದು ನನಗನಿಸುವದಿಲ್ಲ. ” ನಂತರ ಆ ಮನುಷ್ಯನು ತನ್ನ ಮುಷ್ಟಿಯನ್ನು ಆಕಾಶದತ್ತ

ಎತ್ತಿ ತೋರಿಸಿದ. "ನನ್ನನ್ನು ಮುಳುಗಿಸಿ ನೋಡು. ಮುಂದೆ ನಿನ್ನನ್ನು ನಾನು ಏನೆಂದು ಕರೆಯುವೆನೆಂದು ನೋಡು" ಎಂದೂ ಹೇಳುತ್ತಿದ್ದರು.

ಆಗ ನುಗ್ಗಿ ಬರುತ್ತಿದ್ದ ತರಂಗಗಳು ಭಯಂಕರವಾಗಿದ್ದವು. ಅವು ಇನ್ನೇನು ಆ ಪುಟ್ಟ ದೋಣಿಯನ್ನು ನೊರೆಯ ಕೋಲಾಹಲದಲ್ಲಿ ಉರುಳಿಸಿ ನುಚ್ಚುನೂರಾಗಿ ಮಾಡುವವೆಂದು ಪ್ರತಿ ನಿಮಿಷಕ್ಕೂ ಅನಿಸುತ್ತಿತ್ತು. ಅವರು ಯಾವಾಗಲೂ ಆ ಹೆದ್ದೆರೆಗಳಿಂದ ಉಳಿಯುವ ಉಪಾಯವನ್ನು ಯೋಚಿಸುತ್ತಿದ್ದರು. ಸಮುದ್ರ ಪ್ರವಾಸವನ್ನು ಮಾಡದಿದ್ದ ಯಾರೂ, ಆ ಪುಟ್ಟ ದೋಣಿಯು ಹೆದ್ದೆರೆಗಳನ್ನು ಏರಿ ಪಾರಾಗಬಹುದೆಂದು ಬಗೆಯುತ್ತಿದ್ದಿಲ್ಲ. ದಂಡೆಯು ಇನ್ನೂ ದೂರದಲ್ಲಿಯೇ ಇದ್ದಿತ್ತು. ಎಣ್ಣೆಯವ ತುಂಬ ಚುರುಕಾಗಿ ಹುಟ್ಟು ಹಾಕುವವ. "ಗೆಳೆಯರೇ, ದೋಣಿಯು ಇನ್ನು ಮೂರು ನಿಮಿಷಗಳಿಗಿಂತ ಹೆಚ್ಚುಕಾಲ ಉಳಿಯುವಂತಿಲ್ಲ. ಈಜಾಡೋಣವೆಂದರೆ ದಂಡೆಯು ಬಹಳ ದೂರವಿದೆ. ನಾನು ದೋಣಿಯನ್ನು ಪುನಃ ಸಮುದ್ರದ ಕಡೆಗೆ ಹೊರಳಿಸಲೇ ?" ಎಂದು ಕೇಳಿದನು.

"ಸರಿ ಮುಂದೆ ಸಾಗಲಿ" ನಾವಿಕನು ಸಮ್ಮತಿಸಿದ.

ಎಣ್ಣೆಯವನು ಅದ್ಭುತ ಚಾಣಾಕ್ಷತನದಿಂದ ವೇಗವಾಗಿ ಹುಟ್ಟು ಹಾಕುತ್ತ ದಂಡೆಯ ತೆರೆಗಳೊಳಗಿಂದ ದೋಣಿಯನ್ನು ಪಾರು ಮಾಡಿ, ಸಮುದ್ರದ ಕಡೆಗೆ ಅದನ್ನು ತಿರುಗಿಸಿ ಬಿಟ್ಟ.

ತೆರೆಗಳಿಂದ ಪ್ರಕ್ಷುಬ್ಧವಾದ ಪ್ರದೇಶದಿಂದ ದೋಣಿಯ ಆಳವಾದ ಸಮುದ್ರವನ್ನು ಸೇರಿದಾಗ ನಾಲ್ವರೂ ಸ್ತಬ್ಧರಾಗಿಬಿಟ್ಟಿದರು. ಆಗ ಗುಂಪಿನೊಳಗಿನವನೊಬ್ಬನು ಉದಾಸೀನನಾಗಿ, "ಈಗಲಾದರೂ ಅವರು ( ದಂಡೆಯಿಂದ ) ನಮ್ಮನ್ನು ನೋಡಿದ್ದಾರೆ" ಎಂದನು.

ಸಮುದ್ರ ಪಕ್ಷಿಗಳು ತೀರ ಕೆಳಗಿನಿಂದ ಹಾರುತ್ತ ನಿರ್ಜನವಾದ ಮಸುಕು ಮಸುಕಾದ ಪೂರ್ವದತ್ತ ಸಾಗಿದ್ದವು. ಆಗ್ನೇಯದಿಂದ ಮೋಡಗಳನ್ನು ಅಟ್ಟಿಕೊಂಡು ಬರುತ್ತಿದ್ದ ಮಂಜಿನ ಗಾಳಿಯೊಂದು ಬೀಸತೊಡಗಿತು.

"ಆ ಜೀವರಕ್ಷಕ ಜನರನ್ನು ಕುರಿತು ನಿನ್ನ ಅಭಿಪ್ರಾಯವೇನು ? ಅವರು ನಮ್ಮನ್ನು ಉಳಿಸಲಿಕ್ಕಿಲ್ಲ ?"

"ಅಯ್ಯೋ ! ಅವರು ನಮ್ಮನ್ನು ನೋಡಬೇಕಲ್ಲವೇ ?"

"ನಾವು ಕ್ರೀಡೆಗಾಗಿ ಬಂದವರು ಎಂದು ಅವರು ತಿಳಿದಿರಬೇಕು. ಅಥವಾ ನಾವು ಮೀನುಹಿಡಿಯುವವರೆಂದು ತಿಳಿದಿರಬೇಕು. ಇಲ್ಲವೇ ನಮ್ಮನ್ನು ಮಹಾ ಮೂರ್ಖರೆಂದು ಬಗೆದಿರುವರೇನೋ."

ಅದು ದೀರ್ಘಕಾಲದ ಮಧ್ಯಾಹ್ನವೆನಿಸಿತು. ಉಬ್ಬರವು ಅವರನ್ನು ದಕ್ಷಿಣಕ್ಕೆ ಹೊರಳಿಸಲು ಯತ್ನಿಸಿತು. ಆದರೆ ಗಾಳಿ ಮತ್ತು ತೆರೆಗಳಿಗೆ ಸಿಕ್ಕಿ ಅವರು ಉತ್ತರಾಭಿಮುಖರಾದರು. ಸ್ವಲ್ಪ ದೂರದಲ್ಲಿ ದಂಡೆ, ಸಮುದ್ರ ಮತ್ತು ಆಕಾಶಗಳ ತ್ರಿವೇಣಿ ಸಂಗಮದಲ್ಲಿ ಚಿಕ್ಕ ಚಿಕ್ಕ ಗುರುತುಗಳು ಕಾಣಿಸುತ್ತಿದ್ದವು. ದಂಡೆಯ ಮೇಲೆ ಒಂದು ಪಟ್ಟಣವು ನೆಲಿಸಿರುವಂತೆ ತೋರುತ್ತದೆ.

"ಅದು ಸೇಂಟ ಆಗಾಸ್ಟೈನ್?"

ನಾವಿಕನು ತಲೆಯುಲ್ಲಾಡಿಸುತ್ತ, "ಅಲ್ಲ. ಮೊಸ್ಕ್ವಿಟೊ ಇನ್‌ಲೆಟ್ ಸಮೀಪವಿದೆ."

ಆಗ ಎಣ್ಣೆಯವನು ಹುಟ್ಟು ಹಾಕಿದ. ಅನಂತರ ಸುದ್ದಿಗಾರನು ಹುಟ್ಟುಹಾಕಿದ. ಪುನಃ ಎಣ್ಣೆಯವ, ನಂತರ ಸುದ್ದಿಗಾರ. ಅದೊಂದು ಬೇಸರು ಹುಟ್ಟಿಸುವ ಕೆಲಸ. ಅವರ ಬೆನ್ನುಗಳು ನೋವನ್ನು ತಡೆಯಲಾರದೆ ಉಪಾಯವಿಲ್ಲದೇ ನರಳುತ್ತಿದ್ದವು. ಮನುಷ್ಯನ ಬೆನ್ನು ಎಷ್ಟು ಚಿಕ್ಕ ಪ್ರದೇಶ. ಆದರೆ ಅದು ಹಲವಾರು ನೋವು ನರಳಿಕೆಗಳ ತೊಡಕು-ತಲ್ಲಣಗಳ ರಂಗಭೂಮಿಯಾಗುತ್ತದೆ.

"ನಿನಗೆ ಎಂದಾದರೂ ಹುಟ್ಟು ಹಾಕುವ ಹವ್ಯಾಸವೆನಿಸಿತ್ತೇ ಬಿಲ್ಲೀ" ಎಂದು ಸುದ್ದಿಗಾರನು ಕೇಳಿದನು.

"ಛೆ. ಸಾಯಲಿ ಬಿಡು ಆ ಸುದ್ದಿ." ಎಂದು ಎಣ್ಣೆಯವನು ಉತ್ತರವಿತ್ತ.

ಒಬ್ಬನು ಹುಟ್ಟು ಹಾಕುವ ಜಾಗದಿಂದ ಸರಿದು ಕೆಳಗೆ ಹೋಗುತ್ತಿರುವಾಗ ತುಂಬ ಆಯಾಸಗೊಂಡು ಹಣ್ಣಾಗಿ ಅಂಚು ಪಟ್ಟಿಯ ಮೇಲೆ ತನ್ನ ಬೆರಳುಗಳನ್ನು ಮೆಲ್ಲನೆ ಜಾರಿಸುವಾಗ ಸಮುದ್ರದ ತಣ್ಣೀರು ದೋಣಿಯ ತಳದಲ್ಲಿ ಕುಳಿತವನ ಮೈಮೇಲೆ ಬೀಳುತ್ತಿತ್ತು. ಆತನು ಅಂಚು ಪಟ್ಟಿಯ ಮೇಲೆ ತಲೆಯಿರಿಸಿ ಒರಗಿಕೊಂಡಾಗ ಅವನ ತಲೆಯು ತರಂಗ ಶಿಖರದ ಬಹು ಸಮೀಪದಲ್ಲಿರುತ್ತಿತ್ತು. ಒಮ್ಮೊಮ್ಮೆ ಮೊರೆಯುವ ತೆರೆಯು ಅವನನ್ನು ತೊಯ್ಯಿಸಿ ಬಿಡುತ್ತಿತ್ತು. ಆದರೆ ಅದೆಲ್ಲ ಆತನಿಗೆ ಬೇಸರವೆನಿಸುತ್ತಿದ್ದಿಲ್ಲ. ದೋಣಿಯು ಸ್ವಲ್ಪ ಉರುಳಿ

ಬಿದ್ದರೆ ಆತನು ಸಮುದ್ರದ ತಣ್ಣೀರಿನಲ್ಲಿ ಹಾಯಾಗಿ ಮಲಗುವ ಪ್ರಸಂಗ ಬರುತ್ತಿತ್ತು.

" ಅದೋ, ದಂಡೆಯ ಮೇಲೆ ಒಬ್ಬ ಮನುಷ್ಯನಿದ್ದಾನೆ. "

" ಎಲ್ಲಿ ? "

" ಅದೋ ಅಲ್ಲಿ ಕಾಣುವದಿಲ್ಲವೇ ? "

" ನಿಜ. ಅವನು ನಡೆಯುತ್ತಿದ್ದಾನೆ. "

" ಈಗ ಅವನು ತಡೆದ. ಅದೋ ! ನಮ್ಮನ್ನು ನೋಡುತ್ತಿರುವನು. "

" ಆತನು ನಮ್ಮ ಕಡೆಗೆ ವಸ್ತ್ರವನ್ನು ಅಲುಗಾಡಿಸುತ್ತಿದ್ದಾನೆ. "

" ನಿಜ. ನಿಜ. "

" ಪಾರಾದೆವು. ಪಾರಾದೆವು. ಇನ್ನು ಅರ್ಧ ತಾಸಿನಲ್ಲಿ ನಮ್ಮನ್ನುಳಿಸಲು ಒಂದು ದೋಣಿ ಬರುತ್ತದೆ. "

" ಅವನು ಹೋಗುತ್ತಿದ್ದಾನೆ. ಓಡುತ್ತಿದ್ದಾನೆ. ಅವನು ಆ ಮನೆಯ ಕಡೆಗೆ ಹೋಗುತ್ತಿದ್ದಾನೆ. "

ದೂರದ ದಂಡೆಯ ಪ್ರದೇಶವು ಸಮುದ್ರಕ್ಕಿಂತಲೂ ತಗ್ಗಿನಲ್ಲಿರುವಂತೆ ಕಂಡಿತು. ಆ ಕಪ್ಪು ಆಕೃತಿಯನ್ನು ಕಾಣಲು ಸ್ವಲ್ಪ ಪ್ರಯಾಸ ಪಡಬೇಕಾಗುತ್ತಿತ್ತು. ನಾವಿಕನು ತೇಲಾಡುತ್ತಿರುವ ಒಂದು ಕಟ್ಟಿಗೆಯನ್ನು ಕಂಡು ಆ ಕಡೆಗೆ ದೋಣಿಯನ್ನು ಹೊರಳಿಸಿದ. ವಿಧಿವಶಾತ್ ದೋಣಿಯಲ್ಲಿ ಒಂದು ಬಾಥಟವೆಲ್ ಇದ್ದಿತ್ತು. ನಾವಿಕ ಅದನ್ನು ಒಂದು ತುಂಡು ಕಟ್ಟಿಗೆಗೆ ಕಟ್ಟಿ ಗಾಳಿಯಲ್ಲಿ ಅಲುಗಾಡಿಸಿದ. ಹುಟ್ಟು ಹಾಕುವವನಿಗೆ ತಲೆ ತಿರುಗಿಸಿ ನೋಡುವ ಧೈರ್ಯವಿದ್ದಿಲ್ಲ. ಆದರೂ ಆತ ಪ್ರಶ್ನೆಗಳನ್ನು ಕೇಳಹತ್ತಿದ.

" ಈಗ ಅವನೇನು ಮಾಡುತ್ತಿದ್ದಾನೆ? "

" ಅವನಿನ್ನೂ ನಿಶ್ಚಲನಾಗಿದ್ದಾನೆ. ಓಹೋ, ಅದೋ ಅವನು ಮನೆಯ ಕಡೆಗೆ ಹೋಗುತ್ತಿದ್ದಾನೆ. ಈಗ ಪುನಃ ಅವನು ತಡೆದ. "

" ಪುನಃ ವಸ್ತ್ರವನ್ನು ಅಲುಗಾಡಿಸುತ್ತಿರುವನೇ ? "

" ಇಲ್ಲ, ಇಲ್ಲ. ಆಗ ಅಲುಗಾಡಿಸುತ್ತಿದ್ದ."

" ಅದೊ ! ಇನ್ನೊಬ್ಬನು ಬರುತ್ತಿದ್ದಾನೆ. ! "

" ಅವನು ಓಡುತ್ತಿದ್ದಾನೆ. "

"ಅವನನ್ನು ನೋಡು, ಕಾಣುವದಿಲ್ಲವೇ ?"

"ಅವನು ಸ್ಯಾಕಲ್ ಏರಿದ್ದಾನೆ. ಆ ಮನುಷ್ಯನನ್ನು ಭೇಟಿಯಾದ. ಅವರಿಬ್ಬರೂ ನಮ್ಮ ಕಡೆಗೆ ಸನ್ನೆಮಾಡುತ್ತಿದ್ದಾರೆ. ಆದೊ !"

"ಅಮೋ ದಂಡೆಯ ಬಳಿ ಏನೋ ಬರುತ್ತಿದೆ."

"ಅದೇನು ಹಾಳಾದ ವಸ್ತು ?"

"ಅದೋ ದೋಣಿಯಂತೆ ಕಾಣುತ್ತಿದೆಯಲ್ಲಾ."

"ನಿಜ ಅದು ದೋಣಿಯೇ."

"ಅಲ್ಲ. ಅದು ಗಾಲಿಗಳ ಮೇಲಿದೆ."

"ಹೌದು. ಅದು ಜೀವರಕ್ಷಕ ದೋಣಿ."

"ಅಲ್ಲ, ಅದೊಂದು ಬಾಡಿಗೆಯ ಬಸ್ಸು."

"ಅಯ್ಯೋ ! ಅದು ಜೀವರಕ್ಷಕ ದೋಣಿಯೇ."

"ಛೆ, ಅದು ದೋಣಿಯಲ್ಲ. ನನಗೆ ಸ್ಪಷ್ಟವಾಗಿ ಕಾಣಿಸುತ್ತಿಲ್ಲವೇ ? ಅಥವಾ ಅವರು ಜೀವರಕ್ಷಕ ಜನರನ್ನು ಕೂಡಿಕೊಂಡು ಬರುತ್ತಿರುವರೋ ಏನೋ."

"ಬಹುಶಃ. ಆದೋ, ಇನ್ನೊಬ್ಬನು ಕಪ್ಪು ಬಾವುಟವನ್ನು ಹಾರಿಸುತ್ತಿದ್ದಾನೆ. ಅವನು ಬಸ್ಸಿನ ಮೆಟ್ಟಿಲಮೇಲೆ ನಿಂತಿರುವನು. ಆ ಇಬ್ಬರೂ ಅಲ್ಲಿಗೆ ಬಂದು ತಲುಪಿದರು. ಆ ಬಾವುಟನ್ನು ಹಿಡಿದುಕೊಂಡ ವ್ಯಕ್ತಿಯನ್ನು ನೋಡು. ಇನ್ನೊಮ್ಮೆ ನೋಡು. ಬಹುಶಃ ಅವನು ಅದನ್ನು ಹಾರಿಸುತ್ತಿಲ್ಲವೇನೋ."

"ನಿಜ. ಅದು ಅವನ ಅಂಗಿಯು. ಅದನ್ನು ತೆಗೆದುಕೊಂಡು ಆತನು ತನ್ನ ತಲೆಯ ಸುತ್ತಲೂ ಅಲುಗಾಡಿಸುತ್ತಿದ್ದಾನೆ. ನೋಡು, ಹೇಗೆ ತಿರುಗಿಸುತ್ತಿದ್ದಾನೆ !"

"ಆದಹಾಗೆ ಅಲ್ಲಿ ಜೀವರಕ್ಷಣ ಕೇಂದ್ರವೇ ಇಲ್ಲವೆಂದು ತೋರುತ್ತದೆ. ಅದೊಂದು ಚಳಿಗಾಲದ ಬೀಡು. ನಾವು ಮುಳುಗುತ್ತಿರುವದನ್ನು ನೋಡಲು ಬಸ್ಸಿನಲ್ಲಿ ಜನಗಳನ್ನು ಕರೆತರಲಾಗಿದೆಯೇನೊ."

"ಆ ಅಂಗಿಯ ಘಟಿಂಗನ ಅಂಬೋಣವೇನು ? ಅವನು ಸನ್ನೆ ಮಾಡುತ್ತಿರುವದಾದರೂ ಏಕೆ ?"

"ಅಥವಾ ನಮಗೆ ಉತ್ತರಕ್ಕೆ ಹೋಗಬೇಕೆಂದು ಸೂಚಿಸಲು ಪ್ರಯತ್ನಿ

ಸುತ್ತಿರುವಂತೆ ಕಾಣುತ್ತದೆ. ಅಲ್ಲಿ, ಅಂದರೆ ದೂರದ ಉತ್ತರ ದಂಡೆಯಲ್ಲಿ ಜೀವ ರಕ್ಷಣ ಕೇಂದ್ರವಿದ್ದಿರಬೇಕು. ”

“ ಛೆ ನಾವು ಮೀನು ಹಿಡಿಯುತ್ತಿದ್ದೇವೆಂದು ಅವನು ತಿಳಿದುಕೊಂಡಿರುವನು. ತಾನೂ ನಿಮ್ಮ ಸಾಹಸದಲ್ಲಿ ಪಾಲುಗಾರನೆನ್ನುವಂತೆ ಹೇಳಬಯಸುತ್ತಾನೆ. ಅದೋ ಅಲ್ಲಿ ನೋಡು ಬಿಲ್ಲೀ.”

“ ಆ ಸಂಕೇತಗಳ ಅರ್ಥ ಹೇಗೆ ಮಾಡುವದು ? ಅವನ ಸಂಕೇತದ ಸಾರಾಂಶವಾದರೂ ಏನು ?”

“ ಅರ್ಥವೇನು ಮಹಾ! ಆತನಿಗೆ ಅದೊಂದು ಕೇವಲ ಆಟ. ಅಷ್ಟೆ!”

“ ಅವನು, ನಾವು ಪುನಃ ದಂಡೆಗೆ ಹೋಗಬೇಕೆಂದೋ, ಉತ್ತರಕ್ಕೋ ದಕ್ಷಿಣಕ್ಕೋ ಹೋಗಬೇಕೆಂದೋ ಸಮುದ್ರದ ಮಧ್ಯವನ್ನು ಮುಟ್ಟಿ ತುಸು ತಡೆಯಬೇಕೆಂದೋ ಅಥವಾ ನರಕಕ್ಕೆ ಹೋಗಬೇಕೆಂದೋ ಹೇಳಿದ್ದರೆ ತುಂಬ ಚನ್ನಾಗಿತ್ತು. ಅಲ್ಲಿ ನೋಡು ಆತನು ಅರ್ಥಹೀನವಾಗಿ ತನ್ನ ಅಂಗಿಯನ್ನು ಗಾಲಿಯಂತೆ ತಿರುಗಿಸುತ್ತಿದ್ದಾನೆ ಕೋತಿ !”

“ ಇನ್ನೂ ಜನ ಬರುತ್ತಿದ್ದಾರೆ.”

“ ಈ ಜನ ಸಂದಣಿ ನೆರೆದಿದೆ. ಅದೋ ! ದೋಣಿಯಲ್ಲವೇ ?”

“ ಒಹೋ ! ಅದನ್ನೇ ನೀನು ದೋಣಿಯೆನ್ನುತ್ತಿರುವದೇ? ಛಿ. ಅದು ದೋಣಿಯಲ್ಲ.”

“ ಆ ಕೋತಿಯು ಇನ್ನೂ ತನ್ನ ಅಂಗಿಯನ್ನು ಅಲುಗಾಡಿಸುತ್ತಾ ಇದ್ದಾನೆ.”

“ ತಾನು ಮಂಗಾಟವಾಡುವದು ನಮಗೆ ಸೊಗಸೆನಿಸುತ್ತದೆಯೆಂದು ಆತ ತಿಳಿದುಕೊಂಡಿರಬೇಕೆಂದು ಕಾಣುತ್ತದೆ. ಅವರು ಆ ಮೂರ್ಖನನ್ನೇಕೆ ತಡೆಯುವದಿಲ್ಲ ? ಅದಕ್ಕೆ ಅರ್ಥವೇ ಇಲ್ಲ.”

“ ನನಗೆ ಒಂದೂ ಸರಿಯಾಗಿ ತೋಚುವದಿಲ್ಲ. ನಮಗೆ ಉತ್ತರಕ್ಕೆ ಹೋಗಲು ಆತನು ಸೂಚಿಸುತ್ತಿರುವನೆಂದು ನನ್ನ ಊಹೆ. ಅಲ್ಲೆಲ್ಲೋ ಜೀವ ರಕ್ಷಣ ಕೇಂದ್ರವಿದ್ದಿರಬೇಕು. ”

“ ಅದೋ ! ಅವನಿನ್ನೂ ದಣಿದಿಲ್ಲ. ಅಂಗಿಯನ್ನು ಇನ್ನೂ ತಿರುಗಿಸುತ್ತಿದ್ದಾನೆ.

"ಎಷ್ಟು ಹೊತ್ತಿನ ವರೆಗೆ ಹಾಗೇ ತಿರುಗಾಡಿಸುತ್ತಿರುವನೋ. ನಮ್ಮನ್ನು ನೋಡಿದ ಸಮಯದಿಂದ ಅವನು ಅಂಗಿಯನ್ನು ತಿರುಗಿಸುತ್ತಿದ್ದಾನೆ. ಅವ ನೊಬ್ಬ ಶತಮೂರ್ಖ. ದೋಣಿಯನ್ನು ತರಲು ಜನರನ್ನೇಕೆ ಕೂಡಿಸುತ್ತಿಲ್ಲ ಅವರು? ಅಲ್ಲಿದ್ದ ಒಂದು ಮೀನು ಹಿಡಿಯುವ ದೋಣಿಯನ್ನಾದರೂ ಸರಿಯಾಗಿ ಕಳಿಸಿದ್ದರೆ ಇಲ್ಲಿಗೆ ಬಂದು ಮುಟ್ಟುತ್ತಿತ್ತು. ಅವನೇಕೆ ಏನೂ ಮಾಡದೆ ನಿಂತಿದ್ದಾನೆ ?"

"ಅದೋ. ಇನ್ನು ಎಲ್ಲವೂ ಸರಿಯಾಗುತ್ತಿದೆ."

"ಅವರೀಗ ನಮ್ಮನ್ನು ನೋಡಿದ್ದಾರೆ. ಶೀಘ್ರದಲ್ಲಿಯೇ ದೋಣಿಯನ್ನು ಇಲ್ಲಿಗೆ ಕಳಿಸುವ ವ್ಯವಸ್ಥೆ ಮಾಡುತ್ತಾರೆ."

ಆ ತಗ್ಗು ನೆಲದ ಮೇಲಿನ ಮುಗಿಲಿನಲ್ಲಿ ಒಂದು ನಸು ಹಳದಿಯ ನೆರಳು ಬಿದ್ದಿತು. ಸಮುದ್ರದ ಮೇಲಿನ ಛಾಯೆಗಳು ದಟ್ಟವಾದವು. ಗಾಳಿಯು ಚಳಿಯನ್ನು ಅಟ್ಟಿಕೊಂಡು ಬರುತ್ತಿತ್ತು. ಜನರು ನಡುಗತೊಡಗಿದ್ದರು.

"ಅಯ್ಯೋ ದೇವರೇ ! ನಾವು ಇಲ್ಲಿಯೇ ಹುಡುಗಾಟ ನಡೆಸುತ್ತ ನಿಂತರೆ........ ರಾತ್ರಿಯೆಲ್ಲ ಇಲ್ಲಿಯೇ ತಂಗಬೇಕಾದರೆ........"ಎಂದು ಒಬ್ಬನು ನುಡಿದ.

"ನಾವು ಇಡೀ ರಾತ್ರಿ ಇಲ್ಲಿ ಉಳಿಯಬೇಕಾಗುತ್ತದೆಯೆಂದು ಬೇಸರ ಮಾಡಬೇಡ. ಅವರು ನಮ್ಮನ್ನು ನೋಡಿದ್ದಾರೆ."

ದಂಡೆಯ ಮೇಲೆ ಮಬ್ಬು ಕವಿಯಿತು. ಮಬ್ಬಿನಲ್ಲಿ ಆ ಅಂಗಿ, ಬಸ್ಸು, ಜನಸಂದಣಿ ಎಲ್ಲವೂ ಕರಗಿಹೋದವು. ಸಮುದ್ರದ ತೆರೆಯು ಮೊರೆಯುತ್ತ ಅಂಚುಗಳನ್ನು ಅಪ್ಪಳಿಸುವಾಗ ಅವರು (ದೋಣಿಯಲ್ಲಿದ್ದವರು) ಮುದುಡಿ ಕೊಳ್ಳುತ್ತಿದ್ದರು, ಬರೆ ಹಾಕಿಸಿ ಕೊಳ್ಳುತ್ತಿರುವವರ ಹಾಗೆ ಚೀರಾಡುತ್ತಿದ್ದರು.

"ನನಗೆ ಅಂಗಿ ಹಿಡಿದು ಕೊಂಡಿರುವ ಆ ಘಟಿಂಗನನ್ನು ಹಿಡಿಯ ಬೇಕೆಂದು ಎನಿಸುತ್ತದೆ. ಹಿಡಿದು ದಂಡಿಸಬೇಕೆಂದೆನಿಸುತ್ತದೆ."

"ಅಯ್ಯೋ! ಅವನೇನು ಮಾಡಿದನು ?"

"ಅಯ್ಯೋ! ಏನೂ ಇಲ್ಲ. ಉಲ್ಲಾಸದಿಂದ ಆತನು ಅಂಗಿಯನ್ನಲ್ಲಾಡಿ ಸುತ್ತಿದ್ದನಲ್ಲವೇ ?"

ಆಗ ಎಣ್ಣೆಯವನು ಹುಟ್ಟು ಹಾಕಿದ. ನಂತರ ಸುದ್ದಿಗಾರನು ಹುಟ್ಟು

ಹಾಕಿದ, ನಿಸ್ತೇಜನಾಗಿ, ಮುಂದೆ ಬಗ್ಗಿ ಪಾಳಿಯ ಪ್ರಕಾರ. ದಕ್ಷಿಣದ ಕ್ಷಿತಿಜದಿಂದ ದೀಪಸ್ತಂಭದ ಆಕೃತಿಯು ಮಾಯವಾಗಿತ್ತು. ಆ ಎಡೆಯಲ್ಲಿ ಸಮುದ್ರದಿಂದ ತುಸು ಮೇಲಕ್ಕೆ ಪುಟ್ಟ ತಾರೆಯೊಂದು ಮಿನುಗತೊಡಗಿ ಎಲ್ಲವನ್ನೂ ಕಬಳಿಸುವ ಕತ್ತಲೆಯಲ್ಲಿ ಪಶ್ಚಿಮ ದಿಕ್ಕಿನಲ್ಲಿ ಬೆಳಗುತ್ತಿದ್ದ ಕೇಸರಿ ಬಣ್ಣವು ಕರಗಿಹೋಗಿತ್ತು. ಪೂರ್ವದಿಕ್ಕಿನಲ್ಲಿದ್ದ ಸಮುದ್ರವಂತೂ ಕಾಡಿಗೆಯ ಮುದ್ದೆಯಾಗಿ ಕಾಣುತ್ತಿತ್ತು. ನೆಲವೂ ಕಣ್ಮರೆಯಾಗಿತ್ತು; ಕೇವಲ ದಂಡೆದೆರೆಗಳ ಮೊರೆತದಿಂದ ಅದರ ಇರುವಿಕೆಯನ್ನು ಊಹಿಸಬಹುದಿತ್ತು.

"ನಾನು ಮುಳುಗಿ ಸಾಯುವದಿದ್ದರೆ....ನಾನು ಮುಳುಗಿ ಸಾಯುವದಿದ್ದರೆ ಸಪ್ತಸಾಗರಗಳ ದೇವತೆಗಳು ನನ್ನನ್ನು ಇಲ್ಲಿಗೇಕೆ ಕರೆದು ತರಬೇಕಿತ್ತು. ಈ ಮಳಲನ್ನೂ ಮರಗಳನ್ನೂ ಕುರಿತು ಚಿಂತಿಸುವಂತೇಕೆ ಮಾಡಬೇಕಿತ್ತು? ನನ್ನ ಅವಸಾನಕಾಲವು ಸಮೀಪಿಸಿದೆಯೆಂದು ಜಲಸಮಾಧಿ ಹೊಂದಲು ನನ್ನನ್ನು ಇಲ್ಲಿ ಕರೆತರಲಾಗಿದೆಯೇ?"

ಸ್ತಬ್ಧನಾಗಿ ಒರಗಿಕೊಂಡಿದ್ದ ನಾವಿಕನು ಒಮ್ಮೊಮ್ಮೆ ಆ ಹುಟ್ಟು ಹಾಕುವವರನ್ನು ಮಾತನಾಡಿಸಲೇಬೇಕಿತ್ತು.

"ದೋಣಿಯ ಮುಂಭಾಗವನ್ನು ಮೇಲಕ್ಕೆ ಇರಿಸಿ. ಮೇಲಕ್ಕೆ ಇರಿಸಿ."

"ದೋಣಿಯ ಮುಂಭಾಗವನ್ನೇ ಮೇಲಕ್ಕೇರಿಸುತ್ತಿದ್ದೇವೆ." ಎಂದು ಆಯಾಸಗೊಂಡ ಸ್ವರಗಳು ಉತ್ತರ ಕೊಡುತ್ತಿದ್ದವು.

ತುಂಬ ಶಾಂತವಾದ ಸಂಜೆಯಾಗಿತ್ತು. ಹುಟ್ಟುಹಾಕುವವರನ್ನು ಬಿಟ್ಟು ಉಳಿದವರೆಲ್ಲ ದೋಣಿಯ ತಳದಲ್ಲಿ ಉದಾಸೀನರಾಗಿಯೂ ಹತಾಶರಾಗಿಯೂ ಒರಗಿಕೊಂಡಿದ್ದರು. ಆತನು ರುದ್ರ ಮೌನದಿಂದ ನುಗ್ಗಿ ಬರುತ್ತಿದ್ದ ಕಪ್ಪು ತೆರೆಗಳನ್ನು ನೋಡುತ್ತಿದ್ದ. ಆಗೀಗ ತರಂಗ ಶಿಖರವು ಒಡೆಯುವ ಮೊರೆತವು ಮಾತ್ರ ಕೇಳಿಸುತ್ತಿತ್ತು.

ಅಡಿಗೆಯವನು ಅಂಚು ಪಟ್ಟಿಯ ಮೇಲೆ ತಲೆಯಿರಿಸಿಕೊಂಡು ಕುಳಿತಿದ್ದ. ತನ್ನ ಮುಖದ ಬಹುಸಮೀಪದಲ್ಲಿದ್ದ ನೀರಿನ ಕಡೆಗೆ ಅನಾಸಕ್ತನಾಗಿ ನೋಡುತ್ತಿದ್ದ. ಆವನು ಉಳಿದ ಅನೇಕ ದೃಶ್ಯಗಳಲ್ಲಿ ಮೈಮರೆತಿದ್ದ "ಬಿಲ್ಲೀ, ನಿನಗೆ ಯಾವ ಪಾಯ್* ಸೇರುತ್ತದೆ? ಎಂದು ಗುಣುಗುಟ್ಟಿದ."

* ಒಂದು ಬಗೆಯ ತಿಂಡಿ.

ಪಾಯ್! ಇನ್ನೊಮ್ಮೆ ಅಂತಹ ಸುದ್ದಿಯನ್ನೆತ್ತಿದ್ದರೆ ನಿನ್ನ ತಲೆಯ ನ್ನೊಡೆಯುತ್ತೇವೆ." ಎಂದು ಎಣ್ಣೆಯುವ ಮತ್ತು ಸುದ್ದಿಗಾರರು ಕೂಗಿಕೊಂಡರು.

"ಸರಿ. ಸೇಂಡವಿಚೆಸ್‌ಗಳನ್ನು ಕುರಿತು ಯೋಚಿಸುತ್ತಿದ್ದೆ. ಮತ್ತು........"

ತೆರವು ದೋಣಿಯಲ್ಲಿ ಸಮುದ್ರದ ಮಧ್ಯದಲ್ಲಿ ಕಳೆಯಬೇಕಾಗುವ ರಾತ್ರಿ, ಬಹುದೀರ್ಘವಾದ ರಾತ್ರಿ. ಕತ್ತಲೆಯು ಸಂಪೂರ್ಣವಾಗಿ ಕವಿಯಲು ದಕ್ಷಿಣದ ದಿಕ್ಕಿನಲ್ಲಿ ಸಮುದ್ರದಿಂದೇಳುತ್ತಿದ್ದ ನಸುಬೆಳಕು ಹೊಂಬೆಳಕಾಯಿತು. ಉತ್ತರ ದಿಕ್ಕಿನಿಂದ ನೀರಿನ ಮೇಲೆ ಹರಡಿಕೊಂಡ ಪುಟ್ಟ ನೀಲಿ ಬೆಳಕು ಕಾಣಿಸಿಕೊಂಡಿತು. ಆ ಗಾಢವಾದ ಅಂಧಕಾರದಲ್ಲಿ ಎರಡೇ ಎರಡು ದೀಪಗಳು ಆಗಂತುಕರಂತೆ ಕಾಣಿಸುತ್ತಿದ್ದವು. ಇಲ್ಲದಿದ್ದರೆ ಸಮುದ್ರದಲ್ಲಿ ಸದಾಕಾಲವೂ ತರಂಗ ನರ್ತನವೊಂದು ಸಾಗಿರುತ್ತದೆ. ಅದನ್ನು ಬಿಟ್ಟರೆ ಬೇರೇನು ಕಾಣಿಸುತ್ತದೆ ?

ಆ ಇಬ್ಬರೂ ಹಡಗಿನ ಹಿಂಭಾಗದಲ್ಲಿ ಮೈಗೆ ಮೈ ತಾಗಿಸಿಕೊಂಡು ಒರಗಿಕೊಂಡಿದ್ದರು. ಆ ದೋಣಿಯೆಂದರೆ ತೀರ ಸಣ್ಣ ಅಂತರ. ಹುಟ್ಟು ಹಾಕುತ್ತಿದ್ದವನು ಅವರಿಬ್ಬರ ನಡುವೆ ತನ್ನ ಪಾದವನ್ನು ಸೇರಿಸಿ ಬೆಚ್ಚಗೆ ಮಾಡಿಕೊಳ್ಳಬಹುದಿತ್ತು. ಒರಗಿಕೊಂಡಿದ್ದವರ ಕಾಲುಗಳು ದೋಣಿಯಲ್ಲಿ ಇನ್ನೊಂದು ತುದಿಗೆ ಕುಳಿತುಕೊಂಡಿದ್ದ ನಾವಿಕನ ಕಾಲುಗಳನ್ನು ತಟ್ಟುತ್ತಿದ್ದುವು. ಹುಟ್ಟುಹಾಕುವವನು ಶತಪ್ರಯತ್ನಪಟ್ಟರೂ ರಾತ್ರಿಯ ತಣ್ಣೀರಿನ ತೆರೆಯೊಂದು ಒಳನುಗ್ಗಿ ಬರುತ್ತಿತ್ತು; ಒರಗಿಕೊಂಡಿದ್ದವರನ್ನೆಲ್ಲ ತೊಯ್ಸುತ್ತಿತ್ತು. ಅವರು ತಮ್ಮ ದೇಹವನ್ನು ಇನ್ನೂ ಮುದುಡಿಕೊಂಡು ಒಂದು ನಿಮಿಷ ತಾಳಲಾರದ ಚಳಿಯಿಂದ ನಡುಗಿ ನರಳುತ್ತಿದ್ದರು. ಪುನಃ ಗಾಢವಾದ ನಿದ್ರೆಯಲ್ಲಿ ಮೈ ಮರೆಯುತ್ತಿದ್ದರು. ದೋಣಿಯು ಹೊಯ್ದಾಡುತ್ತಿತ್ತು. ದೋಣಿಯೊಳಗಿನ ನೀರು ಸಳಸಳ ಸಪ್ಪಳ ಮಾಡುತ್ತಿತ್ತು.

ಎಣ್ಣೆಯುವನು ಮತ್ತು ಸುದ್ದಿಗಾರನು ತಾವು ಸೋತು ಹೋಗುವ ವರೆಗೆ ಹುಟ್ಟು ಹಾಕುತ್ತಿದ್ದರು. ನಂತರ ತಳದ ನೀರಿನ ಸುಖಾಸನದಲ್ಲಿ ಒರಗಿದವರನ್ನು ಎಬ್ಬಿಸುತ್ತಿದ್ದರು.

ಎಣ್ಣೆಯವನು ತಲೆಯು ಮುಂದೆ ಕುಗ್ಗುವ ವರೆಗೆ, ಕಣ್ಣುಗಳು ಕುರುಡಾಗುವ ವರೆಗೆ ಹುಟ್ಟು ಹಾಕುತ್ತಿದ್ದ. ಆದರೂ ಕೆಲಸವನ್ನು ಮುಂದೆ ಸಾಗಿಸುತ್ತಿದ್ದ. ನಂತರ ಬಳಿಯಲ್ಲಿ ಮಲಗಿದವನೊಬ್ಬನನ್ನು ಬೆರಳಿನಿಂದ ಮುಟ್ಟಿ ಎಬ್ಬಿಸುತ್ತಿದ್ದ. ಆತನು ವಿನಯದಿಂದ "ನನಗೆ ಸ್ವಲ್ಪ ಸಮಯ ವಿಶ್ರಾಂತಿ ಕೊಡುವೆಯಾ ?" ಎನ್ನುತ್ತಿದ್ದ.

ಕಣ್ಣುಗಳನ್ನು ಉಜ್ಜಿಕೊಳ್ಳುತ್ತ ತನ್ನ ದೇಹವನ್ನು ಆಸನದ ಕಡೆ ಎಳೆಯುತ್ತ, "ಖಂಡಿತವಾಗಿಯೂ ಬಿಲ್ಲಿ" ಎಂದು ಸುದ್ದಿಗಾರನು ಹೇಳುತ್ತಿದ್ದ. ಅವರು ಜಾಗ್ರುತೆ ತಮ್ಮ ಸ್ಥಳಗಳನ್ನು ಅದಲು ಬದಲು ಮಾಡುತ್ತಿದ್ದರು. ಆ ನಂತರ ಎಣ್ಣೆಯವನು ಕೆಳಗಿದ್ದ ಅಡಿಗೆಯವನ ಮಗ್ಗುಲಲ್ಲಿ ತಬ್ಬಿಕೊಂಡು ಮಲಗಿ ತಟ್ಟನೆ ನಿದ್ದೆ ಹೋಗುತ್ತಿದ್ದ.

ಸಮುದ್ರದ ಪರಮಾವಧಿ ಪೀಡೆಯು ಕುಗ್ಗಿತ್ತು. ತೆರೆಗಳು ಮೊರೆತವಿಲ್ಲದೇ ಬರುತ್ತಿದ್ದವು. ಹುಟ್ಟು ಹಾಕುವವನು ತೆರೆಗಳ ಹೊಡೆತಕ್ಕೆ ದೋಣಿಯು ಮಗುಚದಂತೆ,ತರಂಗ ಶಿಖರಗಳು ಒಡೆಯುತ್ತಿರುವಾಗ ನೀರು ಒಳ ಸೇರದಂತೆ ದೋಣಿಯನ್ನು ಚುರುಕುತನದಿಂದ ಸಾಗಿಸಿಕೊಂಡು ಹೋಗಬೇಕಾಗಿತ್ತು. ಆ ಅಂಧಕಾರದಲ್ಲಿ ಆ ಕಪ್ಪು ತೆರೆಗಳು ರುದ್ರ ಗಂಭೀರವಾಗಿ ಕಾಣುತ್ತಿದ್ದವು. ಒಮ್ಮೊಮ್ಮೆ ಹುಟ್ಟು ಹಾಕುವವನು ಎಚ್ಚರಗೊಳ್ಳುವವರೆಗೆ ತೆರೆಯೊಂದು ಒಳ ಸೇರುತ್ತಿತ್ತು.

ಸುದ್ದಿಗಾರನು ಮೆಲುದನಿಯಲ್ಲಿ ನಾವಿಕನನ್ನು ಕರೆದ. ಆತನು ಎಚ್ಚರವಾಗಿರುವನೋ ಇಲ್ಲವೋ ಎಂಬುದು ಆತನಿಗೆ ತಿಳಿಯಲಿಲ್ಲ. ಆ ಭೀಮಕಾಯನು ಯಾವಾಗಲೂ ಎಚ್ಚರಾಗಿದ್ದಂತೇ ಕಾಣುತ್ತಿತ್ತು. "ನಾವಿಕನೇ ನಾನು ಉತ್ತರದ ದೀಪದ ಕಡೆಗೆ ದೋಣಿಯನ್ನು ಸಾಗಿಸಲೇ ?" ಎಂದು ಕೇಳಿದನು.

"ಸರಿ." ನಾವಿಕನ ನಿಶ್ಚಲವಾದ ಧ್ವನಿ ಎಚ್ಚರಿಸಿತು.

ಅಡಿಗೆಯವನು ಆದಷ್ಟು ಉಷ್ಣತೆಯು ದೊರೆಯಲೆಂದು ಜೀವ ರಕ್ಷಣ ಪಟ್ಟಿಯನ್ನು ಬಿಗಿಯಾಗಿ ಕಟ್ಟಿಕೊಂಡಿದ್ದ. ಆತನು ಒಂದು ಸ್ಟೋವಿನಂತೆ ಕಾಣುತ್ತಿದ್ದ. ತನ್ನ ಕೆಲಸವನ್ನು ಮುಗಿಸಿ ಒರಗಿಕೊಂಡ ಕೂಡಲೇ ಆತನ ಹಲ್ಲುಗಳು ಕಟಕಟ ಶಬ್ದ ಮಾಡತೊಡಗಿದವು. ಅವನು ಒಮ್ಮೆಂದೊಮ್ಮೆ ನಿದ್ರೆ ಹೋಗಿದ್ದ.

ಹುಟ್ಟು ಹಾಕುತ್ತಿದ್ದ ಸುದ್ದಿಗಾರನು ತನ್ನ ಕಾಲುಗಳ ಕೆಳಗೆ ಮಲಗಿದ್ದ ಆ

ಇಬ್ಬರನ್ನು ನೋಡಿದ. ಅಡಿಗೆಯವನ ತೋಳು ಎಣ್ಣೆಯವನ ಭುಜಗಳನ್ನು ತಬ್ಬಿಕೊಂಡಿತ್ತು. ನಿಸ್ತೇಜ ಮುಖಗಳ ಆ ಮನುಷ್ಯರು ಸಮುದ್ರದ ಚೆಲ್ಲಾಟಕ್ಕೆ ತುತ್ತಾದ ಮಕ್ಕಳಂತೆ ಕಾಣುತ್ತಿದ್ದರು.

ಆ ನಂತರ ಆತನು ತನ್ನ ಕೆಲಸದಲ್ಲಿ ಅಜಾಗರೂಕನಾದನೇನೋ. ದೋಣಿಯ ಬಳಿಯಲ್ಲಿ ತೆರೆಯೊಂದು ನೊರೆಯಿತು. ಅದರ ಶಿಖರವು ದೋಣಿಯೊಳಗೆ ನಡೆದು ಜುಳು ಜುಳು ಹರಿಯಹತ್ತಿತು. ತನ್ನ ಜೀವರಕ್ಷಣ ಪಟ್ಟಿಯ ನೆರವಿನಿಂದ ಆ ನೀರಿನಲ್ಲಿ ಅಡಿಗೆಯವನು ತೇಲಲಿಲ್ಲವೆನ್ನುವದೇ ಅಚ್ಚರಿ. ಅಡಿಗೆಯವನು ಗೊರಕೆಹೊಡೆಯುತ್ತಿದ್ದ. ಆದರೆ ಎಣ್ಣೆಯವನು ಮಾತ್ರ ಕಣ್ಣು ಪಿಳುಕಿಸುತ್ತ ಕುಳಿತುಕೊಂಡ.

"ಬಿಲ್ಲಿ, ನನಗೆ ತುಂಬ ದುಃಖವಾಯಿತು ಬಿಲ್ಲಿ" ಎಂದು ಸುದ್ದಿಗಾರನು ಪಶ್ಚಾತ್ತಾಪದಿಂದ ನುಡಿದ.

"ಇರಲಿ ಬಿಡು" ಎಂದು ಎಣ್ಣೆಯವನು ಪುನಃ ಒರಗಿಕೊಂಡ. ಒಂದೆರಡು ನಿಮಿಷಗಳಲ್ಲಿ ಗೊರಕೆಹೊಡೆಯತೊಡಗಿದ.

ಅಷ್ಟರಲ್ಲಿ ನಾವಿಕನೂ ತೂಕಡಿಸುವಂತೆ ಕಂಡಿತು. ಸುದ್ದಿಗಾರನಿಗೆ ಆ ಸಮುದ್ರದ ಮೇಲೆ ತಾನೊಬ್ಬನೆ ಎಚ್ಚರವಾಗಿರುವಂತೆ ಭಾವನೆಯಾಯಿತು. ತೆರೆಗಳನ್ನು ದಾಟಿ ಬರುತ್ತಿರುವ ಗಾಳಿಯಲ್ಲಿ ಮರಣಕ್ಕಿಂತಲೂ ಕರುಣಾಜನಕ ಧ್ವನಿಯು ತುಂಬಿಕೊಂಡಿತ್ತು.

ಹಡಗಿನ ಹಿಂಭಾಗದಲ್ಲಿ ನೀರನ್ನು ಕೊಚ್ಚಿಕೊಂಡು ಹೋಗುವ ಒಂದು ದೀರ್ಘವಾದ ಸಪ್ಪಳವಾಯಿತು. ಆನಂತರ ಆ ಕಪ್ಪುನೀರಿನ ಮೇಲೆ ನೀಲಿ ಬಣ್ಣದ ಪ್ರಕಾಶವಾಹಿನಿಯೊಂದು ತೇಲಿಕೊಂಡು ಹೋಗುತ್ತಿರುವಂತೆ ಕಂಡಿತು. ನಂತರ ಎಲ್ಲೆಲ್ಲೂ ಸ್ತಬ್ಧತೆ. ಸುದ್ದಿಗಾರನು ಆಶ್ಚರ್ಯದಿಂದ ಬಾಯಿತೆರೆದು ಉಸಿರುಬಿಟ್ಟು ಸಮುದ್ರವನ್ನು ನಿರೀಕ್ಷಿಸಿದ.

ಅಕಸ್ಮಾತ್ತಾಗಿ ಇನ್ನೊಂದು ಕತ್ತರಿಸಿದ ಸಪ್ಪಳವಾಗಿ ಉದ್ದವಾದ ನೀಲಿ ಬೆಳಕಿನ ಮಿಂಚು ತೇಲಾಡಿತು. ಈಗ ಅದು ದೋಣಿಯ ತುಂಬ ಸಮೀಪದಲ್ಲಿತ್ತು. ಹುಟ್ಟಿನಿಂದ ಅದನ್ನು ಮುಟ್ಟಬಹುದಿತ್ತು. ಸುದ್ದಿಗಾರನು ಒಂದು ದೊಡ್ಡ ಮೀನು ನೆರಳಿನಂತೆ ನೀರೊಳಗಿಂದ ಹೋಗುತ್ತಿರುವದನ್ನು ಕಂಡನು. ತನ್ನ ಹಿಂದೆ ಮಿಂಚು ಬೆಳಕಿನ ಹಾದಿಯನ್ನು ಕೊರೆಯುತ್ತ ಅದು ಮುಂದೆ

ಸಾಗುತ್ತಿತ್ತು.

ಸುದ್ದಿಗಾರನು ತನ್ನ ಹೆಗಲಿನ ಹಿಂದೆ ದೃಷ್ಟಿ ಹೊರಳಿಸಿ ನಾವಿಕನನ್ನು ನೋಡಿದ. ಆತನ ಮುಖವು ಮರೆಯಾಗಿತ್ತು. ನಿದ್ದೆಯಲ್ಲಿರುವಂತೆ ಕಾಣುತ್ತಿದ್ದ ಆತನು ಸಮುದ್ರ ಶಿಶುಗಳನ್ನು ನಿರೀಕ್ಷಿಸಿದನು. ಅವರೆಲ್ಲರೂ ಗಾಢವಾದ ನಿದ್ರೆಯಲ್ಲಿದ್ದರು. ತನ್ನ ಬಗ್ಗೆ ಅನುಕಂಪವನ್ನು ತೋರಿಸುವ ಯಾರನ್ನೂ ಕಾಣದೇ ಆತನು ಒಂದು ಅಂಚಿಗೆ ಹೊರಳಿ ನೀರಿನಲ್ಲಿ ಬಗ್ಗಿ ನೋಡುತ್ತ ಏನನ್ನೋ ಶಪಿಸಿದ.

ಆದರೆ ಆ ಮೀನು ದೋಣಿಯ ಬಳಿಯಿಂದ ದೂರ ಸರಿಯಲಿಲ್ಲ. ಒಮ್ಮೆ ದೋಣಿಯ ಮುಂಭಾಗ, ಒಮ್ಮೆ ಹಿಂಭಾಗ, ಒಮ್ಮೆ ನಿಮಿಷಕ್ಕೊಮ್ಮೆ, ಒಮ್ಮೆ ಅರ್ಧತಾಸಿನ ಅವಧಿಯ ನಂತರ, ಆ ಮಿಂಚು ಬೆಳಕಿನ ರೇಖೆಯು ನೀರಿನಲ್ಲಿ ತೇಲಾಡುತ್ತಿತ್ತು. ನೀರನ್ನು ಕೊಚ್ಚಿಕೊಂಡು ಹೋದ ಸಪ್ಪಳವಾಗುತ್ತಿತ್ತು. ಆ ಮೀನಿನ ವೇಗ ಮತ್ತು ಶಕ್ತಿ ಅದ್ಭುತವಾಗಿತ್ತು. ಅದು ಒಂದು ತೀವ್ರವಾದ ಮಹಾಸ್ತ್ರದಂತೆ ನೀರನ್ನು ಕತ್ತರಿಸಿಕೊಂಡು ಮುನ್ನುಗ್ಗುತ್ತಿತ್ತು.

ಎಡಬಿಡದೆ ಪೀಡಿಸುತ್ತಿದ್ದ ಆ ಮೀನು ಅವನನ್ನು ಅಂಜಿಸಲಿಲ್ಲ. ವಿಹಾರಕ್ಕೆ ಬಂದ ವಿಲಾಸಿಯಂತೆ ಆತ ನಿಶ್ಚಲನಾಗಿದ್ದ. ಆದರೂ ಒಮ್ಮೊಮ್ಮೆ ಉದಾಸೀನನಾಗಿ ಮೆಲುದನಿಯಲ್ಲಿ ಸಮುದ್ರದ ಕಡೆ ಬಗ್ಗಿ ಶಪಿಸುತ್ತಿದ್ದ.

ಆದರೂ ಆ ಮೀನಿನ ಸಂಗಡ ಒಬ್ಬನೇ ಇರುವದು ಒಳ್ಳೇದೆನಿಸಲಿಲ್ಲ. ಅಕಸ್ಮಾತಾಗಿ ಅವನು ಗೆಳೆಯರಲ್ಲಿ ಒಬ್ಬನು ಎಚ್ಚರವಾಗಿ ತನಗೆ ಜೊತೆಯಾಗಬಹುದೆಂದು ಆಸೆಪಟ್ಟ. ಆದರೆ ನಾವಿಕನು ನೀರಿನ ಪೀಪಾಯಿಯ ಮೇಲೆ ತೂಕಡಿಸುತ್ತಿದ್ದ. ತಳದಲ್ಲಿದ್ದ ಎಣ್ಣೆಯವ ಮತ್ತು ಅಡಿಗೆಯವ ಗಾಢವಾದ ನಿದ್ರೆಯಲ್ಲಿದ್ದರು.

“ ನಾನು ಮುಳುಗಿ ಸಾಯುವದಿದ್ದರೆ — ನಾನು ಮುಳುಗಿ ಸಾಯುವದಿದ್ದರೆ — ಸಪ್ತಸಾಗರದ ದೇವತೆಗಳು ನನ್ನನ್ನು ಇಲ್ಲಿಗೇಕೆ ಕರತರಬೇಕಿತ್ತು ? ಈ ಮರಳನ್ನೂ ಮರಗಳನ್ನೂ ಚಿಂತಿಸುವಂತೆ ಏಕೆ ಮಾಡಬೇಕಿತ್ತು ? ”

ಆ ಘೋರ ರಾತ್ರಿ ಎಂತಹ ಅನ್ಯಾಯವಾದರೂ ತನ್ನನ್ನು ಮುಳುಗಿಸಿಕೊಲ್ಲುವದು ಸಪ್ತಸಾಗರಗಳ ಇಚ್ಛೆಯೆಂದು ಯಾವ ಮನುಷ್ಯನೂ ನಿರ್ಣಯಿಸ್ಸೆ ಬರುತ್ತಿದ್ದ. ಅಷ್ಟು ಕಠಿಣ ಶ್ರಮ ವಹಿಸಿದ – ಅತ್ಯಂತ ಕಠಿಣ ಶ್ರಮ

ವಹಿಸಿದ ಅಂತಹ ಮನುಷ್ಯನನ್ನು ಮುಳುಗಿಸಿ ಕೊಲ್ಲುವುದೆಂದರೆ ಘೋರ ಅನ್ಯಾಯವೇ. ಅದು ಅತ್ಯಂತ ಅಮಾನುಷವಾದ ಕ್ರೂರತನವಾದೀತೆಂದು ಅವನು ಭಾವಿಸಿದನು. ಆದರೆ ದೋಣಿಗಳಲ್ಲಿ ಜನರು ಪ್ರಯಾಣ ಮಾಡಲು ಪ್ರಾರಂಭಿಸಿದಂದಿನಿಂದ ಅನೇಕ ಜನರು ಮುಳುಗಿ ಸತ್ತಿದ್ದಾರೆ. ಆದರೂ........

ಮನುಷ್ಯನಿಗೆ ನಿಸರ್ಗವು ತನ್ನನ್ನು ಮಹತ್ವದವನಲ್ಲವೆಂದು ತಿಳಿಯುತ್ತದೆಂದೂ ಪ್ರಪಂಚಕ್ಕೆ ವ್ಯತ್ಯಯ ಬಾರದಂತೆ ತನ್ನನ್ನು ಮುಳುಗಿಸಬಹುದೆಂದು ಬಗೆಯುತ್ತಾಳೆಂದೂ ಮೊಟ್ಟ ಮೊದಲು ತಿಳಿದಾಗ ಆತ ದೇವಸ್ಥಾನದ ಕಡೆಗೆ ಕಲ್ಲುಗಳನ್ನು ಒಗೆಯುತ್ತಾನೆ. ಆದರೆ ಕಲ್ಲುಗಳಾಗಲೀ ದೇವಸ್ಥಾನವಾಗಲೀ ಇಲ್ಲವೆನ್ನುವ ವಿಷಯವನ್ನು ಅವನು ದ್ವೇಷಿಸುತ್ತಾನೆ. ನಿಸರ್ಗ ಅಥವಾ ವಿಧಿಯ ಹೆಸರನ್ನೆತ್ತಿದ ಕೂಡಲೇ ಆತನು ನಿಂದೆಯ ಕಲ್ಲುಗಳನ್ನು ಬೀಸಿ ಹೊಡೆಯುತ್ತಾನೆ.

ಆದರೆ ಶಪಿಸಲಿಕ್ಕೆ ಯಾವುದೇ ಇಚ್ಛಿತ ಆಕೃತಿಯು ದೊರೆಯದಿದ್ದರೆ ಆತನು ಯಾವುದಾದರೂ ಮೂರ್ತಿಯನ್ನು ಕಂಡು ಮೊಳಕಾಲೂರಿ ಪ್ರಾರ್ಥನೆಯಲ್ಲಿ ತೊಡಗಬಯಸುತ್ತಾನೆ. ಅಂಜಲೀ ಬದ್ಧನಾಗಿ, "ನಿಜ, ನನ್ನನ್ನು ನಾನು ಪ್ರೀತಿಸುತ್ತೇನೆ" ಎನ್ನುತ್ತಾನೆ.

ಚಳಿ ರಾತ್ರಿಯಲ್ಲಿ ಉತ್ತರದಲ್ಲಿ ಮಿನುಗುವ ತಾರೆಯು, ನಿಸರ್ಗವು ತನ್ನನ್ನು ಉದ್ದೇಶಿಸಿ ಹೇಳುವ ನುಡಿಯೆಂದು ಅವನು ನಂಬುತ್ತಾನೆ. ಆಗ ತನ್ನ ಪರಿಸ್ಥಿತಿಯ ದುರಂತವನ್ನು ಮನಗಾಣುತ್ತಾನೆ.

ದೋಣಿಯೊಳಗಿನ ಜನರು ಈ ವಿಷಯಗಳನ್ನು ಚರ್ಚಿಸಿದ್ದಿಲ್ಲ. ಆದರೆ ಪ್ರತಿಯೊಬ್ಬನೂ ಮೌನವಾಗಿ ತನಗೆ ತಿಳಿದಂತೆ ತನ್ನೊಳಗೆ ಅವುಗಳನ್ನು ಮಥಿಸಿದ್ದ. ಅವರ ಮುಖಗಳಲ್ಲಿ ಸಂಪೂರ್ಣ ಬಸವಳಿದ ಛಾಯೆಯನ್ನು ಬಿಟ್ಟರೆ ಇನ್ನಾವ ಭಾವನೆಯೂ ಬೆಳಗುತ್ತಿರಲಿಲ್ಲ. ಮಾತನಾಡುವ ಶಕ್ತಿಯನ್ನೆಲ್ಲಾ ಹುಟ್ಟು ಹಾಕುವ ಕೆಲಸಕ್ಕೆ ಮೀಸಲಾಗಿಟ್ಟಿದ್ದರು.

ತನ್ನ ಮನಸ್ಸಿನಲ್ಲಿ ಏಳುತ್ತಿದ್ದ ಭಾವನೆಗಳನ್ನು ಹಗುರಗೊಳಿಸಲು ಅತ್ಯಂತ ರಹಸ್ಯಮಯವಾಗಿ ಆತನ ತಲೆಯಲ್ಲಿ ಒಂದು ಪದ್ಯ ಸುಳಿಯಿತು. ತಾನು ಆ ಪದ್ಯವನ್ನು ಮರೆತಿರುವದನ್ನು ಆತ ಮರೆತಿದ್ದ.

"ಒಂದು ಸೇನೆಯೊಳಗಿನ ಒಬ್ಬ ಸೈನಿಕನು ಅಲ್ಜಿರಿಯಾದಲ್ಲಿ

ಮರಣೋನ್ಮುಖನಾಗಿ ಬಿದ್ದಿದ್ದಾನೆ. ಅವನ ಬಳಿಸಾರಿ ಕಣ್ಣೀರು ಸುರಿಸುವ ಒಲವಿನ ನಾರಿಯಿಲ್ಲ.

ಅವನ ಸೈನಿಕ ಬಂಧು ಒಬ್ಬನು ಅವನ ಬಳಿಗೆ ಬಂದು ಅವನ ಕೈಯನ್ನು ನೇವರಿಸಿದನು.

ಆಗ ಸೈನಿಕನು ತನ್ನ ತಾಯಿನೆಲವನ್ನು ಇನ್ನೆಂದೂ ನೋಡಲಾರೆನಲ್ಲಾ ಎಂದು ನೊಂದುಕೊಂಡನು. "

ಸುದ್ದಿಗಾರನಿಗೆ ಆತನ ಬಾಲ್ಯದಲ್ಲಿ ಒಬ್ಬ ಸೈನಿಕ ಅಲ್ಜೀರಿಯಾದಲ್ಲಿ ಮರಣೋನ್ಮುಖನಾಗಿರುವನೆಂದು ಅರುಹಿದಾಗ ಅದೇನು ಮಹಾವಿಷಯ ಎಂದುಕೊಂಡಿದ್ದ. ಆತನ ಅನೇಕ ಗೆಳೆಯರು ಸೈನಿಕನ ಪಾಡನ್ನು ಬಹಳ ಅನುಕಂಪದಿಂದ ಹೇಳುತ್ತಿದ್ದರು. ಆದರೆ ಸುದ್ದಿಗಾರನು ಅನಾಸಕ್ತನಾಗಿಯೇ ಉಳಿದಿದ್ದ. ಅಲ್ಜೀರಿಯಾದಲ್ಲಿ ಮರಣೋನ್ಮುಖನಾಗಿರುವ ಸೈನಿಕನ ಮರಣದ ವಿಷಯವು ತನಗೆ ಸಂಬಂಧಪಟ್ಟದ್ದಲ್ಲವೆಂದು ಭಾವಿಸಿದ್ದನು. ಆತನಿಗೆ ಆ ಸಂಗತಿಯು ಪೆನಸಿಲಿನ ತುದಿ ಮುರಿದುದಕ್ಕಿಂತಲೂ ಕ್ಷುದ್ರವಾಗಿ ಕಂಡಿತ್ತು.

ಆದರೆ ಈಗ ಅದು ಜೀವಂತವಾದ, ಮತ್ತು ಕರುಣೆಯನ್ನು ಹೊಮ್ಮಿಸುವ ವಿಷಯವೆಂದು ಆವನಿಗೆ ವಿಲಕ್ಷಣವಾಗಿ ಅನಿಸತೊಡಗಿತು. ಆ ಪದ್ಯವು ಇನ್ನು ಚಹಕುಡಿಯುತ್ತ ಒಲೆಯ ಬಳಿಯಲ್ಲಿ ಪಾದಗಳನ್ನು ಬೆಚ್ಚಗೆ ಮಾಡಿಕೊಳ್ಳುತ್ತಾ ಬರೆದ ಕವಿಯ ಹೃದಯವೇದನೆಯ ನಿರ್ಜೀವ ಚಿತ್ರವಲ್ಲ, ಅದೊಂದು ಸಜೀವವಾದ ದುಃಖಕರವಾದ, ಕೋಮಲವಾದ ಮಾನವ ಕ್ಲೇಶದ ಚಿತ್ರವಾಗಿ ಆತನಿಗೆ ಈಗ ಸ್ಪಷ್ಟವಾಗಿ ಕಂಡಿತು.

ಸುದ್ದಿಗಾರನ ಕಣ್ಣೆದುರಿಗೆ ಮರಣೋನ್ಮುಖನಾದ ಆ ಸೈನಿಕನು ಒರಗಿದ್ದನು. ಅವನು ನಿಶ್ಚಲನಾಗಿದ್ದ; ಕಾಲುಗಳನ್ನು ನೀಳವಾಗಿ ಉಸುಕಿನ ನೆಲದ ಮೇಲೆ ನೀಡಿದ್ದ. ಆತನ ಬಾಡಿದ ಎಡಕೈಯು ಹಾರಿಹೋಗುತ್ತಿರುವ ಪ್ರಾಣಗಳನ್ನು ತಡೆದು ಹಿಡಿಯುತ್ತಿರುವಂತೆ ಆತನ ಎದೆಯಮೇಲಿತ್ತು. ಆತನ ಬೆರಳುಗಳೊಳಗಿಂದ ರಕ್ತಧಾರೆ ಹರಿದಿತ್ತು. ಅತಿ ದೂರದ ಅಲ್ಜೀರಿಯಾದಲ್ಲಿ ಸಂಧಿಕಾಲದ ಸೂರ್ಯನ ಹೊಂಬಣ್ಣದಿಂದ ಬೆಳಗುವ ಪಟ್ಟಣವೊಂದು ನೆಲೆಸಿತ್ತು. ಹುಟ್ಟು ಹಾಕುತ್ತಾ ಸುದ್ದಿಗಾರನು ನಿಧಾನವಾಗುತ್ತ ನಡೆದ, ಆ ಸೈನಿಕನ ತುಟಿಗಳ ಚಲನವಲನವನ್ನು ಕಣ್ಣೆದುರು ಕಲ್ಪಿಸಿಕೊಳ್ಳುತ್ತಿದ್ದ. ಸುದ್ದಿಗಾರನ

ಹೃದಯದಲ್ಲಿ ಅಪೂರ್ವವಾದ ಅನುಕಂಪದ ತೆರೆಗಳೆದ್ದುವು. ಅಲ್ಜಿರಿಯಾದಲ್ಲಿ ಮರಣೋನ್ಮುಖನಾಗಿ ಬಿದ್ದ ಆ ಸೈನಿಕನನ್ನು ಕುರಿತು ಅವನಿಗೆ ಎಣೆಯಿಲ್ಲದ ಕರುಣೆ ಎನಿಸಿತು.

ದೋಣಿಯನ್ನು ಎಡೆಬಿಡದೆ ಹಿಂಬಾಲಿಸಿದ ಆ ವಸ್ತುವು ವಿಲಂಬದಿಂದ ಬೇಸರಪಟ್ಟಿರಬೇಕು. ನೀರನ್ನು ಕೊರೆದುಕೊಂಡು ಹೋಗುವ ಸಪ್ಪಳವು ಕೇಳುತ್ತಿದ್ದಿಲ್ಲ. ಉದ್ದವಾದ ಮಿಂಚುಬೆಳಕಿನ ಹಾದಿಯೂ ನೀರಿನಲ್ಲಿ ಮಾಯವಾಗಿದ್ದಿತು. ಉತ್ತರದಲ್ಲಿದ್ದ ದೀಪವು ಇನ್ನೂ ಮಿನುಗುತ್ತಿತ್ತು. ಆದರೆ ಅದು ಇನ್ನೂ ದೋಣಿಯಿಂದ ದೂರದಲ್ಲಿತ್ತು. ಒಮ್ಮೆ ಬಂಡೆಯನ್ನಪ್ಪಳಿಸುವ ತೆರೆಗಳ ಮೊರೆತವು ಸುದ್ದಿಗಾರನ ಕಿವಿಗೆ ಬಡಿಯುತ್ತಿತ್ತು. ಆಗ ಆತನು ದೋಣಿಯನ್ನು ಸಮುದ್ರದತ್ತ ಹೊರಳಿಸಿ ಇನ್ನೂ ವೇಗವಾಗಿ ಹುಟ್ಟು ಹಾಕುತ್ತಿದ್ದ. ಅದರ ಜ್ವಾಲೆಗಳ ಬೆಳಕು ನೀರಿನಲ್ಲಿ ಕುದಿಯುತ್ತಿರುವದನ್ನು ದೋಣಿಯಿಂದ ನಿಲುಕಿಸಬಹುದಿತ್ತು. ಗಾಳಿಯು ಬಿರುಸಾಗುತ್ತಿತ್ತು. ಒಮ್ಮೆ ಫಕ್ಕನೆ ತೆರೆಯೊಂದು ಕಾಡುಬೆಕ್ಕಿನಂತೆ ಕೂಗುತಿತ್ತು. ತರಂಗವು ಒಡೆದು ಬಿಳಿನೊರೆಯು ಹೊರಡುತ್ತಿರುವದನ್ನು ಅಸ್ಪಷ್ಟವಾಗಿ ಕಾಣಬಹುದಿತ್ತು.

ಮುಂಭಾಗದಲ್ಲಿ ನಾವಿಕನು ನೀರಿನ ಪೀಪಾಯಿಯ ಮೇಲೆ ಕುಳಿತುಕೊಂಡಿದ್ದ. "ತುಂಬಾ ಉದ್ದವಾದ ರಾತ್ರಿ" ಎಂದು ಆತನು ಸುದ್ದಿಗಾರನಿಗೆ ಹೇಳಿದ. "ಆ ಜೀವರಕ್ಷಕ ಜನರು ತಯಾರಾಗುತ್ತಿದ್ದಾರೆ."

"ಆ ಶಾರ್ಕ ಮೀನು ಆಟವಾಡುತ್ತಿರುವದನ್ನು ಕಂಡೆಯಾ?"

"ಹೂಂ, ನೋಡಿದೆ. ಅಜಸ್ರವಾಗಿತ್ತು."

"ನೀನು ಎಚ್ಚರವಾಗಿದ್ದರೆ ಒಳಿತಾಗಿತ್ತೆಂದು ಭಾವಿಸಿದೆ."

ಆ ನಂತರ ಸುದ್ದಿಗಾರನು ತಳದ ಕಡೆಗೆ ಮುಖಮಾಡಿ ಮಾತನಾಡಿದ.

"ಬಿಲ್ಲೀ." ಬಿಲ್ಲಿಯು ಬಹು ನಿಧಾನವಾಗಿ ಮಾತನಾಡಿದ. "ಬಿಲ್ಲೀ, ನನಗೆ ತುಸು ವಿಶ್ರಾಂತಿಯನ್ನು ಕೊಡುವೆಯಾ?"

"ಅವಶ್ಯವಾಗಿ" ಎಣ್ಣೆಯವನೆಂದ.

ಸುದ್ದಿಗಾರನು ತಳದಲ್ಲಿದ್ದ ಶೀತವೂ ಸುಖಕರವೂ ಆದ ಕಡಲ ನೀರಿನಲ್ಲಿ ಅಡಿಗೆಯವನ ಜೀವರಕ್ಷಕ ಪಟ್ಟಿಯನ್ನು ತಬ್ಬಿಕೊಂಡು ಒರಗಿಕೊಂಡ. ಆತನ ಹಲ್ಲುಗಳು ಮಾತ್ರ ಕಟಕಟ ಸಪ್ಪಳವನ್ನು ನಡಿಸಿದ್ದವು. ಆ ನಿದ್ದೆಯು

ಆತನ ಆಯಾಸವನ್ನೆಲ್ಲ ನೀಗಿಸಿಬಿಟ್ಟಿತು. ದಣುವಿನ ಕೊನೆಯ ಹಂತವನ್ನು ಮುಟ್ಟಿದ ಕ್ಷೀಣಧ್ವನಿಯು ನನಗೆ ವಿಶ್ರಾಂತಿ ಕೊಡುತ್ತೀಯಾ? ಎಂದು ಕೇಳಿಸಿತು. ಆತನು ಒಂದೇ ಉಸುರಿನಲ್ಲಿ 'ಅವಶ್ಯವಾಗಿ ಬಿಲ್ಲೀ' ಎಂದನು.

ಉತ್ತರದ ದ್ವೀಪವು ರಹಸ್ಯಮಯವಾಗಿ ಮಾಯವಾಗಿತ್ತು. ಆದರೂ ಎಚ್ಚರವಾಗಿದ್ದ ನಾವಿಕನಿಂದ ಸುದ್ದಿಗಾರನು ಆಜ್ಞೆಯನ್ನು ಪಡೆಯುತ್ತಿದ್ದ.

ಅನಂತರ ಅವರು ಇನ್ನೂ ದೋಣಿಯನ್ನು ಸಾಗಿಸಿಕೊಂಡು ಹೋದರು. ಹಿಂಭಾಗದಲ್ಲಿ ಒಂದು ಹುಟ್ಟು ಇರಿಸಿ ದೋಣಿಯು ಸಮುದ್ರಾಭಿಮುಖವಾಗಿ ಸಾಗಬೇಕೆಂದು ಆದೇಶವಿತ್ತ. ದಂಡೆಯುನ್ನಪ್ಪಳಿಸುವ ತೆರೆಗಳ ಮೊರೆತವನ್ನು ಕೇಳಿದರೆ ಹುಟ್ಟುಹಾಕುವವರಿಗೆ ಎಚ್ಚರಿಕೆ ಕೊಡುತ್ತಿದ್ದ ಈ ಯೋಜನೆಯಿಂದ ಎಣ್ಣೆಯುವ ಮತ್ತು ಸುದ್ದಿಗಾರ ಇಬ್ಬರಿಗೂ ಕೂಡಿಯೇ ವಿಶ್ರಾಂತಿ ದೊರೆಯುತ್ತಿತ್ತು. "ಅವರಿಬ್ಬರೂ ಪುನಃ ಉತ್ಸಾಹಯುಕ್ತರಾಗುವಂತೆ ಅವರಿಗೆ ಅವಸರ ಕೊಡೋಣ." ಎಂದು ನಾವಿಕನು ನುಡಿದ. ಅವರು ಮುದುಡಿಕೊಂಡು ಒರಗಿಕೊಳ್ಳುತ್ತಿದ್ದರು. ಒಂದೆರಡು ನಿಮಿಷ ಬಡಬಡಿಸುತ್ತಿದ್ದರು. ನಡುಗುತ್ತಿದ್ದರು. ನಂತರ ಗಾಢವಾದ ನಿದ್ರೆಯು ಅವರನ್ನು ಆವರಿಸುತ್ತಿತ್ತು. ಇಬ್ಬರಿಗೂ ತಾವು, ಹುಟ್ಟು ಹಾಕುತ್ತಿದ್ದ ಅಡಿಗೆಯವನನ್ನು ಇನ್ನೊಂದು ಅಥವಾ ಅದೇ ಶಾರ್ಕದ ಜೊತೆಗೆ ಬಿಟ್ಟುಬಿಟ್ಟಿದ್ದೇವೆ ಎಂಬುದು ಅವರಿಗೆ ಅರಿವಾಗುತ್ತಿದ್ದಿಲ್ಲ.

ದೋಣಿಯು ತೆರೆಗಳ ಮೇಲಿನಿಂದ ಸಾಗುತ್ತಿದ್ದಾಗ ನೀರು ಅಂಚುಗಳಿಗೆ ಒಡೆದು ಅವರನ್ನು ತೊಯ್ಸುತ್ತಿತ್ತು. ಆದರೂ ಅವರ ವಿಶ್ರಾಂತಿಯನ್ನು ಭಂಗಪಡಿಸುವದು ಸಾಧ್ಯವಿರಲಿಲ್ಲ. ಶಿಲಾಪ್ರತಿಮೆಗಳ ಮೇಲೆ ನೀರು ಹೊಯ್ದಂತೆ ಅಶುಭಕರವಾದ ಆ ಗಾಳಿ, ನೀರಿನ ಹೊಡೆತವು ಅವರನ್ನು ತಟ್ಟಿ ವಿಫಲವಾಗಿ ಮರುಳುತ್ತಿತ್ತು.

ಅಸಮ್ಮತಿಯನ್ನು ಸೂಚಿಸುವ ಧ್ವನಿಯಲ್ಲಿ ಅಡಿಗೆಯವನು "ಗೆಳೆಯರೇ ದೋಣಿಯು ಸಮೀಪಕ್ಕೆ ಹೊರಳಿದೆಯೆಂದು ಕಾಣುತ್ತದೆ. ಅದನ್ನು ಸಮುದ್ರದ ಕಡೆಗೆ ನೀವಾದರೂ ತಿರುಗಿಸಬೇಕು" ಎಂದನು. ಎಚ್ಚರಗೊಂಡ ಸುದ್ದಿಗಾರನು ತರಂಗ ಶಿಖರಗಳ ಮೇಲೆ ಸ್ಫೋಟದ ಸಪ್ಪಳವನ್ನು ಕೇಳಿದನು.

ಆತನು ಹುಟ್ಟು ಹಾಕುತ್ತಿದ್ದಾಗ ನಾವಿಕನು ಆತನಿಗೆ ವಿಸ್ಕಿ ಮತ್ತು

ನೀರು ಕೊಟ್ಟನು. ಇದರಿಂದಾಗಿ ಅವನ ಚಳಿಯು ಸ್ವಲ್ಪ ಮಟ್ಟಿಗೆ ತಗ್ಗಿತು. "ನಾನು ಎಂದಾದರೂ ದಂಡೆಯನ್ನು ತಲ್ಪಿದರೆ, ಯಾರಾದರೂ ಹುಟ್ಟಿನ ಚಿತ್ರವಾದರೂ ತೋರಿಸಿದರೆ........"

ಕಟ್ಟಕಡೆಗೆ ಅಲ್ಲಿ ಪುಟ್ಟ ಸಂಭಾಷಣೆ ನಡೆಯಿತು.

" ಬಿಲ್ಲೀ, ಬಿಲ್ಲಿ, ನನ್ನನ್ನು ತುಸು ಬಿಡುಗಡೆ ಮಾಡುತ್ತೀಯಾ ? "

" ಅವಶ್ಯವಾಗಿ " ಎಣ್ಣೆಯವನು ಉತ್ತರವಿತ್ತ.

ಸುದ್ದಿಗಾರನು ತನ್ನ ಕಣ್ಣುಗಳನ್ನು ಪುನಃ ತೆರೆದು ನೋಡುತ್ತಾನೆ, ಸಮುದ್ರ ಮತ್ತು ಆಕಾಶದಲ್ಲಿ ಅರುಣೋದಯದ ಮಸಕು ಬಣ್ಣವು ಕಾಣತೊಡಗಿತ್ತು. ಕ್ರಮೇಣ ಕೆಂಪು, ಹಳದಿ ಬಣ್ಣಗಳು ಬೆಳಗತೊಡಗಿದವು. ವೈಭವಪೂರ್ಣ ವಾದ ಪ್ರಭಾತ ಕೊನೆಗೆ ದರ್ಶನವಿತ್ತಿತು. ಮೇಲೆ ನಿರಭ್ರವಾದ ನೀಲಿ ಆಕಾಶ, ಕೆಳಗೆ ಸೂರ್ಯಪ್ರಕಾಶದಿಂದ ಹೊಳೆಯುವ ತರಂಗ ನರ್ತನ.

ಅತಿ ದೂರದ ಮಳಲ ನೆಳಲಿನಲ್ಲಿ ಕೆಲವು ಕಪ್ಪಾದ ಪುಟ್ಟ ಗುಡಿಸಲು ಗಳೂ ಅವುಗಳ ಹಿಂದೆ ಗಾಳಿಯಿಂದ ತಿರುಗುವ ಗಿರಣಿಯೂ ಕಾಣಿಸುತ್ತಿದ್ದವು. ದಂಡೆಯ ಮೇಲೆ ನಾಯಿ, ಮನುಷ್ಯ, ಸೈಕಲ್ ಯಾವುದೂ ಕಾಣಿಸಲಿಲ್ಲ. ಗುಡಿಸಲುಗಳಿಂದ ತುಂಬಿದ್ದರೂ ನಿರ್ಜನವಾದ ಹಳ್ಳಿಯಾಗಿತ್ತೇನೋ.

ಪ್ರಯಾಣಿಕರು ಆ ದಂಡೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದರು. ದೋಣಿಯಲ್ಲಿ ಒಂದು ಸಭೆ ನಡೆಯಿತು. " ಇನ್ನು ಯಾವದೇ ಸಹಾಯ್ಯವು ಬಾರದಿದ್ದರೂ ನಾವೊಮ್ಮೆ ಯತ್ನಿಸಬೇಕು. ದಡಕ್ಕೆ ಹೊಡೆಯುವ ತೆರೆಗಳನ್ನು ಕತ್ತರಿಸಿ ಸಾಗುವದು ಶಕ್ಯವೇ ನೋಡೋಣ. ಇಲ್ಲಿ ನಾವು ಬಹು ಸಮಯ ಉಳಿದರೆ ಮುಂದೆ ಏನೂ ಮಾಡಲಾರದಷ್ಟು ನಿಶ್ಯಕ್ತರಾಗುವೆವು. " ಎಂದು ನಾವಿಕನು ಹೇಳಿದನು. ದೋಣಿಯು ದಂಡೆಯ ಕಡೆಗೆ ಹೊರಳಿತು. ಸುದ್ದಿ ಗಾರನು ಯಾರೂ ವಾಯುಸ್ತಂಭವನ್ನೇರಲಿಲ್ಲವೆಂದೂ, ಏರಿದರೂ ಸಮುದ್ರದ ಕಡೆಗೆ ನೋಡಲಿಲ್ಲವೆಂದೂ ಅಚ್ಚರಿಪಟ್ಟನು. ಆ ಸ್ತಂಭವು, ಬವಣೆಪಡುತ್ತಿರುವ ಇವರ ಕಡೆಗೆ ಬೆನ್ನು ಮಾಡಿ ರಾಕ್ಷಸನಂತೆ ನಿಂತಿತ್ತು. ಒಂದು ರೀತಿಯಲ್ಲಿ ( ಆತನಿಗೆ ) ಮಾನವನು ಹೋರಾಟಗಳ ನಡುವೆ ಗಂಭೀರ ಮೌನದಿಂದ ನಿಂತುಕೊಂಡ ಪ್ರಕೃತಿಯಂತೆ ಒಪ್ಪುತ್ತಿತ್ತು—ವಾಯುವಿನಲ್ಲಿ ನಿಸರ್ಗ—ಜನ ತೆಯ ದೃಷ್ಟಿಯಲ್ಲಿ ನಿಸರ್ಗ. ಆಗ ಆತನಿಗೆ ನಿಸರ್ಗವು ಕ್ರೂರವಾಗಿ, ಅಹಿತ

ಕಾರಿಯಾಗಿ, ಘಾತಕವಾಗಿ ಅಥವಾ ಜ್ಞಾನವಂತವಾಗಿ ಕಾಣಿಸಲಿಲ್ಲ. ನಿಸರ್ಗವು ನಿಜವಾಗಿಯೂ ಅನಾಸಕ್ತ, ನಿಚ್ಚಳವಾಗಿಯೂ ಇಂತಹ ಪರಿಸ್ಥಿತಿಯಲ್ಲಿದ್ದ ಮನುಷ್ಯನು ನಿಸರ್ಗದ ಔದಾಸೀನ್ಯವನ್ನು ಚಿಂತಿಸಿ ತನ್ನ ಬಾಳಿನ ನೂರಾರು ದೋಷಗಳನ್ನು ನೆನೆಯುತ್ತ ಇನ್ನೊಂದು ಅವಕಾಶ ದೊರಕಿದರೆ ಎಂದು ಹಂಬಲಿಸುವ ಸಂಭವವಿದೆ. ಒಳಿತು ಕೆಡಕುಗಳ ನಡುವಿನ ಭೇದವು ಆತನಿಗೆ ಹುಚ್ಚು ಹುಚ್ಚಾಗಿ ಸ್ಪಷ್ಟವಾಗುತ್ತದೆ. ಆಗ ಮರಣವನ್ನು ಕುರಿತ ಹೊಸ ಅಜ್ಞಾನದಿಂದ ಆತನು ಇನ್ನೊಂದು ಅವಕಾಶ ದೊರೆತರೆ ತನ್ನ ನಡೆನುಡಿಗಳನ್ನು ಸುಧಾರಿಸಿಕೊಳ್ಳುತ್ತಿದ್ದೆನೆಂದು ಆಸೆ ಪಡುತ್ತಾನೆ.

" ಗೆಳೆಯರೇ, ಈಗ ದೋಣಿಯು ಮುಳುಗುವದು ಖಂಡಿತ. ನಾವು ಶಕ್ಯವಿದ್ದಷ್ಟು ದೋಣಿಯನ್ನು ದಂಡೆಯ ಬಳಿ ಒಯ್ಯೋಣ. ದೋಣಿಯು ಮುಳುಗಿದ ಕೂಡಲೇ ನೀರಿಗೆ ಹಾರಿ ದಡವನ್ನು ಮುಟ್ಟಲು ಯತ್ನಿಸೋಣ. ಈಗ ಶಾಂತಚಿತ್ತರಾಗಿರಿ. ಮುಳುಗುವ ಮುಂಚೆ ಹಾರಬೇಡಿ. " ನಾವಿಕ ನುಡಿದ.

ಎಣ್ಣೆಯವನು ಹುಟ್ಟು ಹಾಕಿದ, ತನ್ನ ಭುಜಗಳ ಮೇಲಿಂದ ದಂಡೆಯನ್ನು ನೋಡಿದ. " ನಾವಿಕನೇ, ನಾನು ದೋಣಿಯನ್ನು ಸಮುದ್ರಾಭಿಮುಖವಾಗಿಟ್ಟು ಹಿಂದಕ್ಕೆ ಹುಟ್ಟು ಹಾಕುವದು ಒಳ್ಳೆಯದೆಂದು ಕಾಣುತ್ತದೆ. " ಎಂದನು.

" ಒಳ್ಳೆಯದು ಬಿಲ್ಲಿ, ದೋಣಿಯನ್ನು ಹಿಂದಕ್ಕೆ ತೆಗೆದುಕೋ. " ನಾವಿಕನು ಸಮ್ಮತಿಸಿದ. ಎಣ್ಣೆಯವನು ದೋಣಿಯನ್ನು ಹೊರಳಿಸಿ ಹಿಂಭಾಗಕ್ಕೆ ಹೋಗಿ ಕುಳಿತುಕೊಂಡ. ನಿರಾಸಕ್ತರಾಗಿ ನಿರ್ಜನ ದಂಡೆಯ ಕಡೆಗೆ ಅಡಿಗೆಯವ ಮತ್ತು ಸುದ್ದಿಗಾರರು ನೋಡಹತ್ತಿದರು.

ದಂಡೆಯ ಹತ್ತರಿದ್ದ ತೆರೆಗಳು ದೋಣಿಯನ್ನು ಎತ್ತರಕ್ಕೆ ಹಾರಿಸಿದವು. ಜನರು ಇಳುಕಲಾದ ಜಲರಾಶಿಯನ್ನು ನೋಡುವದು ಶಕ್ಯವಾಯಿತು. "ನಾವು ಬಹಳ ಸಮೀಪಕ್ಕೆ ತಲುಪುವಂತೆ ಕಾಣುವದಿಲ್ಲ." ಎಂದ ನಾವಿಕ. ಹೆದ್ದೆರೆಗಳ ಸೆಳೆತದಿಂದ ತನ್ನ ನೋಟವನ್ನು ಹೊರಳಿಸಿ ಪ್ರತಿಯೊಬ್ಬನು ದಂಡೆಯನ್ನು ನೋಡಬಯಸುತ್ತಿದ್ದ. ಅವರ ದೃಷ್ಟಿಯಲ್ಲಿ ಯಾವದೋ ಛಾಯೆ ಕಾಣುತ್ತಿತ್ತು. ಸುದ್ದಿಗಾರನು ಉಳಿದವರನ್ನು ನಿರೀಕ್ಷಿಸಿ ಅದು ಭಯದ ಛಾಯೆ

ಯುಲ್ಲವೆಂದು ಮನಗಂಡ. ಆ ಛಾಯೆಯ ಸ್ಪಷ್ಟವಾದ ಅರ್ಥವು ಪ್ರಚ್ಛನ್ನವಾಗಿತ್ತು.

ವಸ್ತುಸ್ಥಿತಿಯನ್ನು ಕುರಿತು ಚಿಂತಿಸುವದು–ಅರಿತುಕೊಳ್ಳುವದು ಆತನಿಗಂತೂ ಅಶಕ್ಯವಾಗಿತ್ತು. ಆತನ ಮನಸ್ಸು ಆಗ ಸ್ನಾಯುಗಳ ವಶವಾಗಿತ್ತು. ಆ ಸ್ನಾಯುಗಳು ನಾವು ಅಂಜುವದಿಲ್ಲ ಎನ್ನುತ್ತಿದ್ದವು. ತಾನು ಮುಳುಗಿ ಸತ್ತರೆ ನಾಚಿಕೆಗೇಡಾದೀತೆಂದು ಅವನಿಗೆ ತಿರುತಿರುಗಿ ಅನ್ನಿಸುತ್ತಿತ್ತು.

ಅವರಲ್ಲಿ ಭಯಭೀತವಾದ ಅವಸರದ ಮಾತುಕತೆಗಳು ನಡೆಯಲಿಲ್ಲ. ಸ್ಪಷ್ಟವಾದ ಉದ್ವೇಗವಿದ್ದಿಲ್ಲ. ಮುಖಗಳಲ್ಲಿ ನಿರಾಶೆಯ ಭಾವವೂ ವ್ಯಕ್ತವಾಗಿದ್ದಿಲ್ಲ. ಅವರು ಸುಮ್ಮನೆ ದಂಡೆಯನ್ನು ನೋಡುತ್ತಿದ್ದರು. "ನೋಡಿ. ದೋಣಿಯನ್ನು ಬಿಟ್ಟು ಸರಿಯಾಗಿ ಹಾರಬೇಕು." ಎಂದ ನಾವಿಕ.

ಸಮುದ್ರದ ಕಡೆಗೆ ತರಂಗ ಶಿಖರವು ಘೋರ್ಗರೆಯುತ್ತ ಒಡೆಯಿತು. ಸುಳಿ ಗಟ್ಟಿದ ಆ ಹೆದ್ದೆರೆಯು ದೋಣಿಯತ್ತ ನುಗ್ಗಿ ಬರುತ್ತಿತ್ತು.

"ಈಗ ಸಿದ್ಧರಾಗಿ. ನಿಶ್ಚಲರಾಗಿ." ಎಂದ ನಾವಿಕ. ಎಲ್ಲರೂ ಸಿದ್ಧರಾದರು. ಅವರು ದಂಡೆಯಿಂದ ತಮ್ಮ ದೃಷ್ಟಿಯನ್ನು ಹೆದ್ದೆರೆಯ ಕಡೆಗೆ ಹೊರಳಿಸಿದರು. ದೋಣಿಯು ಇಳುಕಲಿನಲ್ಲಿ ಜಾರಿತು. ಭಯಾನಕವಾದ ಶಿಖರವನ್ನೇರಿತು. ಆದರ ಮೇಲೆ ಚಿಮ್ಮಿ ತೆರೆಯ ಬೆನ್ನಿನ ಮೇಲೆ ಸರ್ರನೆ ಜಾರಿತು. ತುಸು ನೀರು ದೋಣಿಯೊಳಗೆ ನುಗ್ಗಿತು. ಅಡಿಗೆಯವನು ಅದನ್ನು ಹೊರಗೆ ಹಾಕಿದ.

ಎರಡನೇ ಶಿಖರವು ಒಡೆಯಿತು. ಉರುಳುತ್ತ ಚಿಮ್ಮುತ್ತಿದ್ದ ಮಹಾಪೂರವು ದೋಣಿಯನ್ನು ಗರಗರನೆ ತಿರುಗಿಸಿ ಸಾಧಾರಣ ಲಂಬವಾಗಿ ನಿಲ್ಲಿಸಿತು. ಎಲ್ಲ ಕಡೆಯಿಂದಲೂ ನೀರು ಒಳಸೇರಿಕೊಂಡಿತು. ಎಣ್ಣೆಯವನ ಕೈಯು ದೋಣಿಯ ಮೇಲ್ಭಾಗದಲ್ಲಿತ್ತು. ಕೈ ಬೆರಳುಗಳು ಒದ್ದೆಯಾಗಬಾರದೆನ್ನುವಂತೆ ಆತನು ತನ್ನ ಕೈಯನ್ನು ಜಾಗ್ರತೆಯಾಗಿ ಕೊಸರಿಕೊಂಡ.

ಆ ಪುಟ್ಟ ದೋಣಿಯು ನೀರಿನಿಂದ ಭಾರವಾಗಿ ಉರುಳುತ್ತ ಸಮುದ್ರದತ್ತ ಸರಿಯಿತು.

"ಅಡಿಗೆಯವನೇ ನೀರು ತೆಗೆ, ನೀರು ತೆಗೆ!" ನಾವಿಕನು ಕೂಗಿದ.

"ಸರಿ ನಾವಿಕ" ಎಂದ ಅಡಿಗೆಯವ.

"ಗೆಳೆಯರೇ, ಎರಡನೇಯ ತೆರೆಯು ನಮಗೆ ಅನುಕೂಲವಾದೀತು." ಎಣ್ಣೆಯವನು ನುಡಿದ. "ದೋಣಿಯನ್ನು ಸರಿಯಾಗಿ ಬಿಟ್ಟು ಹಾರುವದನ್ನು ಲಕ್ಷದಲ್ಲಿಡಿ."

ಭಯಾನಕವಾದ ದ್ವೇಷವನ್ನು ಕಾರುವ ಹೆದ್ದೆರೆಯೊಂದು ನುಗ್ಗಿ ಬಂತು. ಆ ತೆರೆಯು ದೋಣಿಯನ್ನು ನುಂಗಿಯೇ ಬಿಡುವಂತೆ ಅಪ್ಪಳಿಸಿತು; ಎಲ್ಲರೂ ಒಂದೇ ಸಮಯಕ್ಕೆ ಸಮುದ್ರದಲ್ಲಿ ಮಗುಚಿಬಿದ್ದರು. ಜೀವರಕ್ಷೆಯ ಪಟ್ಟಿಯ ಒಂದು ತುಂಡು ದೋಣಿಯ ತಳದಲ್ಲಿತ್ತು. ಸುದ್ದಿಗಾರನು ದೋಣಿಯಿಂದ ದೂರವಾಗುತ್ತಿದ್ದಾಗ, ಕೈಗಳಿಂದ ಆ ಪಟ್ಟಿಯನ್ನು ಎದೆಗೆ ಒತ್ತಿ ಹಿಡಿದನು.

ಜನವರಿಯ ನೀರು ಮಂಜುಗಡ್ಡೆಯಂತೆ ಶೀತವಾಗಿತ್ತು. ಆತನು ಫ್ಲೋರಿಡಾದ ದಂಡೆಯ ಬಳಿಯಲ್ಲಿದ್ದ ನೀರೇ ಎಲ್ಲಕ್ಕಿಂತ ಶೀತಲವೆಂದು ಬಗೆದಿದ್ದ. ಆತನ ದಿಗ್ಭ್ರಮೆಗೊಂಡ ಮನಸ್ಸಿಗೆ ಅಲ್ಲಿಯ ನೀರು ಬರ್ಫ-ಶೀತಲವಾಗಿರುವ ಸಂಗತಿಯು ಮಹತ್ವದ್ದೆಂದೂ, ಸ್ಮರಿಸಬೇಕಾದ್ದೆಂದೂ ಎನಿಸಬೇಕಿತ್ತು. ನೀರಿನ ಶೀತಲತೆಯು ತುಂಬ ಕರುಣಾಜನಕವಾಗಿತ್ತು; ದುರಂತಮಯವಾಗಿತ್ತು. ಗೊಂದಲಗೊಂಡ ಆತನ ಮನಸ್ಸಿನಲ್ಲಿ, ತನ್ನ ಪರಿಸ್ಥಿತಿಯೂ ಸುತ್ತಲಿನ ವಾತಾವರಣವೂ ಒಂದಾಗಿ ಕಂಡು ತನ್ನ ದುಃಖಕ್ಕೆ ಅದು ಯೋಗ್ಯವಾದ ಕಾರಣವೆನಿಸಿತು. ನೀರು ಮಂಜುಗಡ್ಡೆಗಿಂತಲೂ ಶೀತಲವಾಗಿತ್ತು.

ನೀರನ್ನು ಮುಟ್ಟಿದಾಗ ಆತನಿಗೆ ಇನ್ನಾವುದರ ಅರಿವೂ ಆಗುತ್ತಿದ್ದಿಲ್ಲ. ಅನಂತರ ತನ್ನ ಜತೆಗಾರನು ಸಮುದ್ರದಲ್ಲಿರುವದನ್ನು ಕಂಡನು. ಸ್ಪರ್ಧೆಯಲ್ಲಿ ಎಣ್ಣೆಯವನೇ ಮೊದಲಿಗನಾಗಿದ್ದ. ಆತನು ಶಕ್ತಿಯುತನಾಗಿ ವೇಗವಾಗಿ ಈಜಾಡುತ್ತಿದ್ದ. ಸುದ್ದಿಗಾರನ ಎಡಗಡೆಗೆ ಜೀವರಕ್ಷಕ ಪಟ್ಟಿಯನ್ನು ಬಿಗಿದುಕೊಂಡಿದ್ದ ಅಡಿಗೆಯವನ ಬೆನ್ನು ಕಾಣಿಸುತ್ತಿತ್ತು. ಹಿಂಭಾಗದಲ್ಲಿ ಮಗುಚಿ ಬಿದ್ದ ದೋಣಿಯ ಅಡಿ ಹಲಗೆಯನ್ನು ಹಿಡಿದುಕೊಂಡು ನಾವಿಕನು ತೇಲಾಡುತ್ತಿದ್ದ. ದಂಡೆಯಲ್ಲಿ ಯಾವುದೋ ಒಂದು ನಿಶ್ಚಲವಾದ ಸತ್ವವಿರುತ್ತದೆ. ಸಮುದ್ರದ ಕೋಲಾಹಲದ ಮಧ್ಯದಲ್ಲಿ ಅದನ್ನು ಚಿಂತಿಸಿ ಸುದ್ದಿಗಾರನು ಚಕಿತನಾದ.

ಅದೆಲ್ಲ ಆಕರ್ಷಕವಾಗಿ ಕಂಡಿತು. ಆದರೆ ಅದು ದೂರದ ಪ್ರಯಾಣವೆಂದು ಆತನಿಗೆ ಅನಿಸಿತು. ಆತನು ನಿಧಾನವಾಗಿ ಈಜಾಡುತ್ತಿದ್ದ. ಆತನಿಗೆ ಜೀವರಕ್ಷಕ ಪಟ್ಟಿಯ ತುಂಡಿನ ಆಧಾರವಿತ್ತು. ಒಮ್ಮೊಮ್ಮೆ ಆತನು ತೆರೆಯ

ಯಿಲ್ಲವೆಂದು ಮನಗಂಡ. ಆ ಛಾಯೆಯ ಸ್ಪಷ್ಟವಾದ ಅರ್ಥವು ಪ್ರಚ್ಛನ್ನವಾಗಿತ್ತು.

ವಸ್ತುಸ್ಥಿತಿಯನ್ನು ಕುರಿತು ಚಿಂತಿಸುವದು—ಅರಿತುಕೊಳ್ಳುವದು ಆತನಿಗಂತೂ ಅಶಕ್ಯವಾಗಿತ್ತು. ಆತನ ಮನಸ್ಸು ಆಗ ಸ್ನಾಯುಗಳ ವಶವಾಗಿತ್ತು. ಆ ಸ್ನಾಯುಗಳು ನಾವು ಅಂಜುವದಿಲ್ಲ ಎನ್ನುತ್ತಿದ್ದವು. ತಾನು ಮುಳುಗಿ ಸತ್ತರೆ ನಾಚಿಕೆಗೇಡಾದೀತೆಂದು ಅವನಿಗೆ ತಿರುತಿರುಗಿ ಅನ್ನಿಸುತ್ತಿತ್ತು.

ಅವರಲ್ಲಿ ಭಯಭೀತವಾದ ಅವಸರದ ಮಾತುಕತೆಗಳು ನಡೆಯಲಿಲ್ಲ. ಸ್ಪಷ್ಟವಾದ ಉದ್ವೇಗವಿದ್ದಿಲ್ಲ. ಮುಖಗಳಲ್ಲಿ ನಿರಾಶೆಯ ಭಾವವೂ ವ್ಯಕ್ತವಾಗಿದ್ದಿಲ್ಲ. ಅವರು ಸುಮ್ಮನೆ ದಂಡೆಯನ್ನು ನೋಡುತ್ತಿದ್ದರು. "ನೋಡಿ. ದೋಣಿಯನ್ನು ಬಿಟ್ಟು ಸರಿಯಾಗಿ ಹಾರಬೇಕು." ಎಂದ ನಾವಿಕ.

ಸಮುದ್ರದ ಕಡೆಗೆ ತರಂಗ ಶಿಖರವು ಘೋರ್ಗರೆಯುತ್ತ ಒಡೆಯಿತು. ಸುಳಿ ಗಟ್ಟಿದ ಆ ಹೆದ್ದೆರೆಯು ದೋಣಿಯತ್ತ ನುಗ್ಗಿ ಬರುತ್ತಿತ್ತು.

"ಈಗ ಸಿದ್ಧರಾಗಿ. ನಿಶ್ಚಲರಾಗಿ." ಎಂದ ನಾವಿಕ. ಎಲ್ಲರೂ ಸಿದ್ಧರಾದರು. ಅವರು ದಂಡೆಯಿಂದ ತಮ್ಮ ದೃಷ್ಟಿಯನ್ನು ಹೆದ್ದೆರೆಯ ಕಡೆಗೆ ಹೊರಳಿಸಿದರು. ದೋಣಿಯು ಇಳುಕಲಿನಲ್ಲಿ ಜಾರಿತು. ಭಯಾನಕವಾದ ಶಿಖರವನ್ನೇರಿತು. ಆದರ ಮೇಲೆ ಚಿಮ್ಮಿ ತೆರೆಯ ಬೆನ್ನಿನ ಮೇಲೆ ಸರ್ರನೆ ಜಾರಿತು. ತುಸು ನೀರು ದೋಣಿಯೊಳಗೆ ನುಗ್ಗಿತು. ಅಡಿಗೆಯವನು ಅದನ್ನು ಹೊರಗೆ ಹಾಕಿದ.

ಎರಡನೇ ಶಿಖರವು ಒಡೆಯಿತು. ಉರುಳುತ್ತ ಚಿಮ್ಮುತ್ತಿದ್ದ ಮಹಾಪೂರವು ದೋಣಿಯನ್ನು ಗರಗರನೆ ತಿರುಗಿಸಿ ಸಾಧಾರಣ ಲಂಬವಾಗಿ ನಿಲ್ಲಿಸಿತು. ಎಲ್ಲ ಕಡೆಯಿಂದಲೂ ನೀರು ಒಳಸೇರಿಕೊಂಡಿತು. ಎಣ್ಣೆಯವನ ಕೈಯು ದೋಣಿಯ ಮೇಲ್ಭಾಗದಲ್ಲಿತ್ತು. ಕೈ ಬೆರಳುಗಳು ಒದ್ದೆಯಾಗಬಾರದೆನ್ನುವಂತೆ ಆತನು ತನ್ನ ಕೈಯನ್ನು ಜಾಗ್ರತೆಯಾಗಿ ಕೊಸರಿಕೊಂಡ.

ಆ ಪುಟ್ಟ ದೋಣಿಯು ನೀರಿನಿಂದ ಭಾರವಾಗಿ ಉರುಳುತ್ತ ಸಮುದ್ರದತ್ತ ಸರಿಯಿತು.

"ಅಡಿಗೆಯವನೇ ನೀರು ತೆಗೆ, ನೀರು ತೆಗೆ!" ನಾವಿಕನು ಕೂಗಿದ.

"ಸರಿ ನಾವಿಕ" ಎಂದ ಅಡಿಗೆಯವ.

"ಗೆಳೆಯರೇ, ಎರಡನೇಯ ತೆರೆಯು ನಮಗೆ ಅನುಕೂಲವಾದೀತು" ಎಣ್ಣೆಯುವನು ನುಡಿದ. "ದೋಣಿಯನ್ನು ಸರಿಯಾಗಿ ಬಿಟ್ಟು ಹಾರುವದನ್ನು ಲಕ್ಷದಲ್ಲಿಡಿ."

ಭಯಾನಕವಾದ ದ್ವೇಷವನ್ನು ಕಾರುವ ಹೆದ್ದೆರೆಯೊಂದು ನುಗ್ಗಿ ಬಂತು. ಆ ತೆರೆಯು ದೋಣಿಯನ್ನು ನುಂಗಿಯೇ ಬಿಡುವಂತೆ ಅಪ್ಪಳಿಸಿತು; ಎಲ್ಲರೂ ಒಂದೇ ಸಮಯಕ್ಕೆ ಸಮುದ್ರದಲ್ಲಿ ಮಗುಚಿಬಿದ್ದರು. ಜೀವರಕ್ಷೆಯ ಪಟ್ಟಿಯ ಒಂದು ತುಂಡು ದೋಣಿಯ ತಳದಲ್ಲಿತ್ತು. ಸುದ್ದಿಗಾರನು ದೋಣಿಯಿಂದ ದೂರವಾಗುತ್ತಿದ್ದಾಗ, ಕೈಗಳಿಂದ ಆ ಪಟ್ಟಿಯನ್ನು ಎದೆಗೆ ಒತ್ತಿ ಹಿಡಿದನು.

ಜನವರಿಯ ನೀರು ಮಂಜುಗಡ್ಡೆಯಂತೆ ಶೀತವಾಗಿತ್ತು. ಆತನು ಫ್ಲೋರಿಡಾದ ದಂಡೆಯ ಬಳಿಯಲ್ಲಿದ್ದ ನೀರೇ ಎಲ್ಲಕ್ಕಿಂತ ಶೀತಲವೆಂದು ಬಗೆದಿದ್ದ. ಆತನ ದಿಗ್ಭ್ರಮೆಗೊಂಡ ಮನಸ್ಸಿಗೆ ಅಲ್ಲಿಯ ನೀರು ಬರ್ಫ-ಶೀತಲವಾಗಿರುವ ಸಂಗತಿಯು ಮಹತ್ವದ್ದೆಂದೂ, ಸ್ಮರಿಸಬೇಕಾದ್ದೆಂದೂ ಎನಿಸಬೇಕಿತ್ತು. ನೀರಿನ ಶೀತಲತೆಯು ತುಂಬ ಕರುಣಾಜನಕವಾಗಿತ್ತು; ದುರಂತಮಯವಾಗಿತ್ತು. ಗೊಂದಲಗೊಂಡ ಆತನ ಮನಸ್ಸಿನಲ್ಲಿ, ತನ್ನ ಪರಿಸ್ಥಿತಿಯೂ ಸುತ್ತಲಿನ ವಾತಾವರಣವೂ ಒಂದಾಗಿ ಕಂಡು ತನ್ನ ದುಃಖಕ್ಕೆ ಅದು ಯೋಗ್ಯವಾದ ಕಾರಣವೆನಿಸಿತು. ನೀರು ಮಂಜುಗಡ್ಡೆಗಿಂತಲೂ ಶೀತಲವಾಗಿತ್ತು.

ನೀರನ್ನು ಮುಟ್ಟಿದಾಗ ಆತನಿಗೆ ಇನ್ನಾವುದರ ಅರಿವೂ ಆಗುತ್ತಿದ್ದಿಲ್ಲ. ಅನಂತರ ತನ್ನ ಜತೆಗಾರನು ಸಮುದ್ರದಲ್ಲಿರುವದನ್ನು ಕಂಡನು. ಸ್ಪರ್ಧೆಯಲ್ಲಿ ಎಣ್ಣೆಯುವನೇ ಮೊದಲಿಗನಾಗಿದ್ದ. ಆತನು ಶಕ್ತಿಯುತನಾಗಿ ವೇಗವಾಗಿ ಈಜಾಡುತ್ತಿದ್ದ. ಸುದ್ದಿಗಾರನ ಎಡಗಡೆಗೆ ಜೀವರಕ್ಷಕ ಪಟ್ಟಿಯನ್ನು ಬಿಗಿದುಕೊಂಡಿದ್ದ ಅಡಿಗೆಯವನ ಬೆನ್ನು ಕಾಣಿಸುತ್ತಿತ್ತು. ಹಿಂಭಾಗದಲ್ಲಿ ಮಗುಚಿ ಬಿದ್ದ ದೋಣಿಯ ಅಡಿ ಹಲಗೆಯನ್ನು ಹಿಡಿದುಕೊಂಡು ನಾವಿಕನು ತೇಲಾಡುತ್ತಿದ್ದ. ದಂಡೆಯಲ್ಲಿ ಯಾವುದೋ ಒಂದು ನಿಶ್ಚಲವಾದ ಸತ್ವವಿರುತ್ತದೆ. ಸಮುದ್ರದ ಕೋಲಾಹಲದ ಮಧ್ಯದಲ್ಲಿ ಅದನ್ನು ಚಿಂತಿಸಿ ಸುದ್ದಿಗಾರನು ಚಕಿತನಾದ.

ಅದೆಲ್ಲ ಆಕರ್ಷಕವಾಗಿ ಕಂಡಿತು. ಆದರೆ ಅದು ದೂರದ ಪ್ರಯಾಣವೆಂದು ಆತನಿಗೆ ಅನಿಸಿತು. ಆತನು ನಿಧಾನವಾಗಿ ಈಜಾಡುತ್ತಿದ್ದ. ಆತನಿಗೆ ಜೀವರಕ್ಷಕ ಪಟ್ಟಿಯ ತುಂಡಿನ ಆಧಾರವಿತ್ತು. ಒಮ್ಮೊಮ್ಮೆ ಆತನು ತೆರೆಯ

ಇಳುಕಲಿನಲ್ಲಿ ಗರಗರನೆ ತಿರುಗಿ ಉರುಳುತ್ತಿದ್ದ. ಆ ನಂತರ ಆತನು ಈಜಾಡುವದು ತುಂಬ ತೊಂದರೆಗೀಡಾಗುವಂತಹ ಸಮುದ್ರ ಪ್ರದೇಶಕ್ಕೆ ತಲ್ಪಿದ. ಎಂತಹ ಸುಳಿಯಲ್ಲಿ ತಾನು ಸಿಲುಕಿರುವೆನೆಂದು ಯೋಚಿಸಲು ಆತನು ಈಜಾಡುವದನ್ನು ತಡೆಯಲಿಲ್ಲ. ಆದರೆ ಪ್ರಗತಿಯು ಕುಂಠಿತವಾಯಿತು. ರಂಗಭೂಮಿಯ ದೃಶ್ಯ-ಚಿತ್ರದಂತೆ ದಂಡೆಯು ಆತನ ಎದುರು ಹರಡಿಕೊಂಡಿತ್ತು. ಆತನು ಅದರೊಳಗಿನ ಪ್ರತಿಯೊಂದು ವಿಷಯವನ್ನೂ ಸೂಕ್ಷ್ಮವಾಗಿ ಅವಲೋಕಿಸುತ್ತಿದ್ದ.

ಅಡಿಗೆಯವನು ಎಡದಿಕ್ಕಿಗೆ ದೂರಮುಟ್ಟಿದಾಗ "ನಿನ್ನ ಬೆನ್ನಹಿಂದೆ ಹೊರಳು. ನಿನ್ನ ಬೆನ್ನ ಹಿಂದೆ ಹೊರಳಿ ಹುಟ್ಟನ್ನು ಉಪಯೋಗಿಸು" ನಾವಿಕನು ಕೂಗಿ ಹೇಳುತ್ತಿದ್ದ.

ಆತ "ಸರಿ" ಎನ್ನುತ್ತ ಹಿಂದಕ್ಕೆ ಹೊರಳಿ ಹುಟ್ಟಿನ ಸಹಾಯದಿಂದ ನೀರನ್ನು ಕತ್ತರಿಸುತ್ತ ಮುಂದಕ್ಕೆ ದೋಣಿಯಂತೆ ಸಾಗಿದ.

ಅಷ್ಟರಲ್ಲಿ ದೋಣಿಯು ಸುದ್ದಿಗಾರನ ಎಡಕ್ಕೆ ಹೊರಳಿತು. ನಾವಿಕನು ಅಡಿ ಹಲಗೆಯನ್ನು ಹಿಡಿದುಕೊಂಡು ತೇಲಾಡುತ್ತಿದ್ದ. ಹಲಗೆಯ ಬೇಲಿ ಯಾಚಿ ನೋಡುತ್ತಿರುವಂತೆ ಕಾಣುತ್ತಿದ್ದ. ಆದರೆ ಈ ಬೇಲಿಯಾದ ದೋಣಿಯು ಪ್ರತಿ ನಿಮಿಷವೂ ಹೊಯ್ದಾಡುತ್ತಿತ್ತು. ಆದರೂ ನಾವಿಕನು ಹಲಗೆಯನ್ನು ಹಿಡಿದುಕೊಂಡಿರುವದನ್ನು ಕಂಡು ಸುದ್ದಿಗಾರನು ಚಕಿತನಾದನು.

ಅವರು – ನಾವಿಕ, ಎಣ್ಣೆಯವ ಮತ್ತು ಅಡಿಗೆಯವ ದಂಡೆಯನ್ನು ಸಮೀಪಿಸುತ್ತ ಸಾಗಿದ್ದರು. ನೀರಿನಮೇಲೆ ನೆಗೆದಾಡುತ್ತಿದ್ದ ನೀರಿನ ಪೀಪಾಯಿಯು ಅವರನ್ನು ಹಿಂಬಾಲಿಸುತ್ತಿತ್ತು.

ಸುದ್ದಿಗಾರನು ಮಾತ್ರ ತನ್ನ ಹೊಸ ಶತ್ರುವಿನ ಅಂದರೆ ಆ ಸುಳಿಯ ಸೆರೆಯಲ್ಲಿ ಸಿಲುಕಿದ್ದ. ಮಿನುಗುತ್ತಿರುವ ಮಳಲು, ಆಕರ್ಷಕವಾದ ಹಸಿರು ಗಿಡಗಳು ಮತ್ತು ಸಣ್ಣಪುಟ್ಟ ಗುಡಿಸಲುಗಳಿಂದೊಪ್ಪುವ ದಂಡೆಯು ಅವನಿಗೆ ಒಂದು ಚಿತ್ರದಂತೆ ಕಾಣುತ್ತಿತ್ತು. ಅದು ಅವನಿಗೆ ತುಂಬ ಸಮೀಪವಿತ್ತು. ಆದರೆ ಚಿತ್ರಪ್ರದರ್ಶನದ ಭವನದಲ್ಲಿ ನಿಂತು ದೂರದ ಬ್ರಿಟಾನಿ ಅಥವಾ ಅಲ್ಜೀರ್‌ಸದ ಚಿತ್ರವನ್ನು ನೋಡುತ್ತಿರುವಂತೆ ಅವನಿಗೆ ಭಾಸವಾಯಿತು.

ಅವನು, ತಾನು ಮುಳುಗಿ ಸಾಯುವೆನೆ? ಅದು ಶಕ್ಯವೇ? ಅದು ಶಕ್ಯವೇ? ಅದು ಶಕ್ಯವೇ? ಎಂದು ಪುನಃ ಪುನಃ ಯೋಚಿಸಿದ. ಪ್ರತಿಯೊಬ್ಬ

ವ್ಯಕ್ತಿ ತನ್ನ ಮರಣವನ್ನು ನಿಸರ್ಗದ ಅಂತ್ಯ ಘಟ್ಟವೆಂದೇ ಭಾವಿಸಬೇಕು.

ನಂತರ ಬಹುಶಃ ಒಂದು ತರಂಗವು ಆತನನ್ನು ಆ ಭಯಾನಕವಾದ ಪುಟ್ಟ ಸುಳಿಯ ಸೆರೆಯಿಂದ ತಪ್ಪಿಸಿತೆಂದು ಕಾಣುತ್ತದೆ. ಆಕಸ್ಮಾತ್ತಾಗಿ ದಂಡೆಯ ಕಡೆಗೆ ತಾನು ಹೋಗುತ್ತಿದ್ದೇನೆಂದು ಆತನಿಗೆ ಎನಿಸಹತ್ತಿತು. ತುಸು ಹೊತ್ತಿನ ನಂತರ ಕಪ್ತಾನನು ದಂಡೆಯಿಂದ ತನ್ನ ಮುಖವನ್ನು ತಿರುಗಿಸಿ ಆತನ ಕಡೆಗೆ ನೋಡುತ್ತಾ, ಆತನ ಹೆಸರನ್ನು ಕೂಗಿ "ದೋಣಿಗೆ ಬಾ, ದೋಣಿಗೆ ಬಾ" ಎನ್ನುತ್ತಿರುವದರ ಅರಿವಾಯಿತು.

ಕಪ್ತಾನನನ್ನು ಮತ್ತು ದೋಣಿಯನ್ನು ಮುಟ್ಟಬೇಕೆಂದು ಆತನು ಹೆಣಗಾಡುತ್ತಿದ್ದಾಗ,ಒಬ್ಬನಿಗೆ ತೀವ್ರವಾದ ಆಯಾಸವಾದರೆ ಮುಳುಗಿ ಸಾಯುವದೇ ಸುಖಕರವೆನೋ ಎಂದು ಅವನಿಗೆ ಎನಿಸಿತು. ಅಂದರೆ ಹೋರಾಟವು, ಹೆಣಗಾಟವು ಕೊನೆಗೊಂಡು ಒಂದು ಬಗೆಯ ಬಿಡುಗಡೆಯು ಲಾಭವಾಗುತ್ತದೆ. ಅಂತಹ ಬಿಡುಗಡೆಯನ್ನೇ ಆತನು ಬಯಸುತ್ತಿದ್ದ. ಆ ಕ್ಷಣಿಕ ವೇದನೆಯ ಭಯವೇ ಅವನ ಮನಸ್ಸನ್ನೆಲ್ಲ ತುಸು ಹೊತ್ತಿನ ವರೆಗೆ ಆವರಿಸಿ ಬಿಟ್ಟಿತು. ಇನ್ನು ಆತನು ನೋವನ್ನು ಸಹಿಸಲಾರ.

ಅಷ್ಟರಲ್ಲಿ ದಂಡೆಯ ಗುಂಟ ಓಡುತ್ತಿದ್ದ ಒಬ್ಬ ಮನುಷ್ಯನನ್ನು ಅವನು ಕಂಡನು. ಆತನು ಲಗುಬಗೆಯಿಂದ ತನ್ನ ಬಟ್ಟೆಗಳನ್ನು ಕಳಚತೊಡಗಿದ್ದ. ನೋಡ ನೋಡುವಷ್ಟರಲ್ಲಿ ಕೋಟು ಮತ್ತು ಶರ್ಟುಗಳು ಆತನ ಮೈಯಿಂದ ಮಾಯವಾಗಿದ್ದವು.

' ದೋಣಿಗೆ ಬಾ. ' ಎಂದು ಕಪ್ತಾನನು ಕರೆದನು.

'ಒಳ್ಳೇದು ಕಪ್ತಾನ ' ಸುದ್ದಿಗಾರನು ಹುಟ್ಟು ಹಾಕುತ್ತಿರುವಾಗ, ಕಪ್ತಾನನು ನೀರಿನಲ್ಲಿ ತಾನಾಗಿ ಮುಳುಗುತ್ತಿರುವದನ್ನೂ ದೋಣಿಯನ್ನು ಬಿಡುತ್ತಿರುವದನ್ನೂ ಕಂಡನು. ಆಗ ಸುದ್ದಿಗಾರನು, ತನ್ನ ಜಲಪರ್ಯಟನದೊಳಗಿನ ಪುಟ್ಟ ಅದ್ಭುತವೊಂದನ್ನು ನೆರವೇರಿಸಿದನು. ಒಂದು ದೊಡ್ಡ ತೆರೆಯು ಆತನನ್ನು ಹಿಡಿದು ಲೀಲಾಜಾಲವಾಗಿ ದೋಣಿಯ ಆಚೆಗೆ ಅತಿ ವೇಗದಿಂದ ಬಹು ದೂರ ಒಗೆದುಬಿಟ್ಟಿತು. ಆಗಲೂ ಆತನಿಗೆ ಅದೊಂದು ಸರ್ಕಸ್ಸಿನ ಆಟದಂತೆಯೂ ಸಮುದ್ರದ ನಿಜವಾದ ಅದ್ಭುತವಾಗಿಯೂ ಕಂಡಿತು. ಈಜಾಡುವವನಿಗೆ ತೆರೆಯು

ತೆಕ್ಕೆಯಲ್ಲಿ ಸಿಕ್ಕ ಬಡ ಮೇಲಾದ ದೋಣಿಯೆಂದರೆ ಆಟದ ವಸ್ತುವೇನೂ ಅಲ್ಲ.

ಸುದ್ದಿಗಾರನು ತನ್ನ ಸೊಂಟದ ವರೆಗೆ ಮುಟ್ಟುವ ನೀರಿನ ಸ್ಥಳಕ್ಕೆ ಮುಟ್ಟಿದ್ದ. ಆದರೆ ಅವನು ತುಂಬ ಆಯಾಸಗೊಂಡಿದ್ದರಿಂದ ಒಂದು ನಿಮಿಷಕ್ಕಿಂತ ಹೆಚ್ಚು ನೆಟ್ಟಗೆ ನಿಲ್ಲುವದು ಶಕ್ಯವಾಗಲಿಲ್ಲ. ನುಗ್ಗಿ ಬರುತ್ತಿದ್ದ ತೆರೆಯು ಆತನನ್ನು ಒಂದು ಕೊರಡಿನಂತೆ ಮುಂದಕ್ಕೆ ನೂಕುತ್ತಿತ್ತು. ಹಿಂದೆ ಸರಿಯುವ ನೀರು ಹಿಂದಕ್ಕೆ ಜಗ್ಗುತ್ತಿತ್ತು.

ನಂತರ ಅವನು, ಬಟ್ಟೆಯನ್ನು ಕಳಚುತ್ತ ಓಡುತ್ತಿದ್ದ, ಓಡುತ್ತ ಬಟ್ಟೆಯನ್ನು ಕಳಚುತ್ತಿದ್ದ ಆ ಮನುಷ್ಯನು ಜಿಗಿದಾಡುತ್ತ ನೀರಿನಲ್ಲಿ ಇಳಿದುದನ್ನು ಕಂಡನು. ಅವನು ಅಡಿಗೆಯವನನ್ನು ದಂಡೆಗೆ ಎಳೆದು ಹಾಕಿದನು. ನಂತರ ನೀರಿನೊಳಗೆ ನುಗ್ಗಿ ಕಪ್ತಾನನ ಕಡೆಗೆ ಸಾಗಿದನು. ಆದರೆ ಕಪ್ತಾನನು ಸನ್ನೆ ಮಾಡಿ ಆತನನ್ನು ಸುದ್ದಿಗಾರನ ಕಡೆಗೆ ಕಳಿಸಿದನು. ಅವನು ನಗ್ನನಾಗಿದ್ದ— ಚಳಿಗಾಲದ ಮರದಂತೆ ನಗ್ನನಾಗಿದ್ದ. ಆದರೆ ಅವನ ತಲೆಯ ಸುತ್ತಲೂ ಬೆಳಕೊಂದು ಮಿನುಗುತ್ತಿತ್ತು. ಅವನು ಸನ್ಯಾಸಿಯಂತೆ ಪ್ರಕಾಶಮಾನನಾಗಿ ಕಾಣುತ್ತಿದ್ದ. ಅವನು ಗಟ್ಟಿಯಾಗಿ ಎಳೆದ. ಬಲವಾಗಿ ಜಗ್ಗಿದ. ಸುದ್ದಿಗಾರನ ಕೈಗಳನ್ನು ಹಿಡಿದು ಉಬ್ಬಸಪಡುತ್ತ ಎಳೆದ. ಸುದ್ದಿಗಾರನು "ತುಂಬ ಉಪಕಾರವಾಯಿತು" ಎಂದು ಹೇಳಿದ. ಆ ಮನುಷ್ಯನು ಭರದಿಂದ ಒಂದು ನಿಟ್ಟಿನಲ್ಲಿ ತನ್ನ ಬೆರಳನ್ನು ತೋರಿಸುತ್ತ "ಅದೇನು ?" ಎಂದು ಕೂಗಿದ. ಸುದ್ದಿಗಾರನು "ಹೋಗು" ಎಂದ.

ಎಣ್ಣೆಯವನು ಕಿರಿಯಾಳದ ನೀರಿನಲ್ಲಿ ಕೆಳಗೆ ಮುಖ ಮಾಡಿ ಬಿದ್ದುಕೊಂಡಿದ್ದ. ನಡುನಡುವೆ ತೆರೆಗಳು ಹಿಂದೆ ಸರಿದಾಗ ಸ್ವಚ್ಛವಾಗಿ ಕಾಣುವ ಮಳಲಿನ ಮೇಲೆ ಅವನ ಹಣೆ ಅಂಟಿಕೊಂಡಿತ್ತು.

ನಂತರ ನಡೆದ ಘಟನೆ ಯಾವದೂ ಸುದ್ದಿಗಾರನಿಗೆ ತಿಳಿಯಲಿಲ್ಲ. ಸುರಕ್ಷಿತವಾದ ಸ್ಥಳಕ್ಕೆ ಬಂದು ಮುಟ್ಟಿದಾಗ, ಅವನು ಮಳಲಿನ ಮೇಲೆ ಕುಸಿದು ಬಿದ್ದ. ಆತನು ಛಾವಣಿಯ ಮೇಲಿಂದ ಉರುಳಿಬಿದ್ದವನಂತೆ ಕಾಣುತ್ತಿದ್ದ.

ಅಷ್ಟರಲ್ಲಿ ಕಂಬಳಿ, ಬಟ್ಟೆ, ಪಾತ್ರೆಗಳನ್ನು ಹಿಡಿದುಕೊಂಡ ಗಂಡಸರು, ಕಾಫಿ ಪಾತ್ರೆಗಳನ್ನು ಹಿಡಿದುಕೊಂಡ ಹೆಂಗಸರು ದಂಡೆಯ ಮೇಲೆ ದಟ್ಟಣಿಸಿ

ದ್ದರು. ಅವರ ಮನಸ್ಸಿಗೆ ಉತ್ತಮವೆಂದು ಕಾಣುವ ಎಲ್ಲ ಉಪಾಯಗಳನ್ನು ಅವರು ತಂದಿದ್ದರು.

ಸಮುದ್ರದಿಂದ ಬಂದ ಆ ಜನರಿಗೆ ಆ ಭೂಮಿಯು ಔದಾರ್ಯದಿಂದಲೂ, ವಾತ್ಸಲ್ಯದಿಂದಲೂ ಸ್ವಾಗತವಿತ್ತಿತು. ಆದರೆ ನಿಶ್ಚಲವಾಗಿದ್ದ ಮತ್ತು ನೀರಿನ ಹನಿಗಳು ಉದುರುತ್ತಿದ್ದ ಒಂದು ಆಕೃತಿಯನ್ನು ನಿಧಾನವಾಗಿ ದಂಡೆಯ ಮೇಲೆ ತರಲಾಯಿತು. ಆ ಆಕೃತಿಗೆ ಮಾತ್ರ ಆ ಧರಾತದ ಸ್ವಾಗತವೆಂದರೆ ಭಿನ್ನವಾದ ಹಾಗೂ ಭಯಾನಕವಾದ ಸಮಾಧಿಯ ಆಮಂತ್ರಣವಲ್ಲವೇ ?

ಇರುಳು ಕವಿಯಿತು. ಬೆಳ್ಳಗಿನ ತೆರೆಗಳು ತಿಂಗಳ ಬೆಳಕಿನಲ್ಲಿ ಅತ್ತಿಂದಿತ್ತ ಕುಣಿದಾಡುತ್ತಿದ್ದವು. ಮಹಾಸಾಗರವು ದಂಡೆಯ ಮೇಲಿದ್ದ ಆ ಜನರ ಕಿವಿಗಳಲ್ಲಿ ಮೊರೆಯುತ್ತಿತ್ತು. ಮೆಲ್ಲನೆ ಗಾಳಿ ಬೀಸುತ್ತಿತ್ತು. ಆಗ ಅವರೆಲ್ಲರಿಗೂ ಯಾವದೋ ಅರಿವಾಗಿರಬೇಕಲ್ಲವೇ ?

ನಿಮಗೆ ಬೇಸರವಾದಾಗ

ನಿಮ್ಮ ಬಿಡುವಿನಲ್ಲಿ

ಒಂದು ಚಿಟಿಕೆ

# ಸೊವರಿನ್ ನಸ

ಸೇದಿದರೆ

ಮನಸು ಉಲ್ಲಾಸಿತ ವಾಗುತ್ತದೆ.

ವಿವರಗಳಿಗೆ:

ವಿ. ವಿ. ಪ್ರಭು, ಹೊನ್ನಾವರ

